ಸಂಪಾದಕರು:

ರಾ. ವೆಂ. ಶ್ರೀನಿವಾಸ

ಉಷಾ ಸಾಹಿತ್ಯ ಮಾಲೆ

ಮೈಸೂರು

ಮೊದಲ ಮುದ್ರಣ—೧೫೦೦ ಪ್ರತಿ

ಆಗಸ್ಟ್ ೧೯೪೭



ಬೆಲೆ: ೨-೦-೦

ಮುದ್ರಕರು:

ಆರ್. ಎನ್. ಹಬ್ಬು

ಉಷಾ ಪ್ರೆಸ್, ನೀಲಗಿರಿ ರೋಡ್

ಮೈಸೂರು

# ನಮ್ಮ ಮಾತು

‘ನಾಲ್ಕನೆಯ ಮನೆ’ ಯೊಂದಿಗೆ ನಮ್ಮ ಮಾಲೆಯ ಮೊದಲ ವರುಷ ಮುಗಿಯುತ್ತದೆ. ಕಳೆದ ವರುಷ ನಮಗೆ ನೆರವಿತ್ತು ಪ್ರೋತ್ಸಾಹಿಸಿದ ಲೇಖಕರಿಗೂ ಚಂದಾದಾರರಿಗೂ ಹೃತ್ಪೂರ್ವಕ ವಂದನೆಗಳು. ಆ ನೆರವು, ಪ್ರೋತ್ಸಾಹ ದಿನದಿನವೂ ಬೆಳೆದು, ಮಾಲೆಯ ಪುಸ್ತಕ ಮನೆಮನೆಯಲ್ಲೂ ಇರುವ ಸುಯೋಗ ಬೇಗ ಬರಲೆಂದು ಹಾರೈಸುತ್ತೇವೆ.

ಕಳೆದ ವರುಷ ಚಂದಾದಾರರಾದವರು, ಹೊಸದಾಗಿ ಈ ವರುಷ ಚಂದಾದಾರರಾಗಲಿಚ್ಛಿಸುವವರು ಎರಡನೆಯ ವರುಷದ ಚಂದಾ ಹಣ ಆರು ರೂಪಾಯಿಗಳನ್ನು ಬರುವ ಅಕ್ಟೋಬರ್ ತಿಂಗಳೊಳಗಾಗಿ ಕಳಿಸಿಕೊಡಬೇಕಾಗಿ ವಿನಂತಿ. ಮೈಸೂರು ನಗರದವರಿಗೆ ಕೇವಲ ಐದು ರೂಪಾಯಿ.

‘ನಾಲ್ಕನೆಯ ಮನೆ’ ಬರೆದಿರುವ ಶ್ರೀಮಾನ್ ಎಂ. ನರೇಂದ್ರಬಾಬು ಅವರು ವಿದ್ಯಾರ್ಥಿದೆಸೆಯಲ್ಲಿಯೆ ‘ರಾಗಣ್ಣನ ರಥ’ ಬರೆದು ಕನ್ನಡಿಗರಿಗೆಲ್ಲ ಪರಿಚಿತರಾದರು. ಅವರ ‘ಚಿರದುಃಖಿ’ ಎಂಬ ಕವನಕತೆ ಪ್ರೊ. ಬಿ. ಎಂ. ಶ್ರೀಕಂಠಯ್ಯನವರ ರಜತ ಪದಕ ಪಡೆಯಿತು. ಅವರು ಬರೆದ ‘ಭಾರತಿ’ ಎಂಬ ಕತೆ ಮೈಸೂರಿನ ನವಜ್ಯೋತಿ ಚಿತ್ರಸೃಷ್ಟಿ ಶಾಲೆಯಲ್ಲಿ ಕನ್ನಡ ಚಲಚ್ಚಿತ್ರ ರೂಪತಾಳುತ್ತಿದೆ. ಈ ತರುಣ ಲೇಖಕರ ಲೇಖನಿಯ ಬೆಳಸಿಗಾಗಿ ಜನ ಹಾತೊರೆಯಬೇಕು. ಆ ಆಸೆ, ನಂಬಿಕೆ ಹುಟ್ಟಿಸಿದ್ದಾರೆ ಶ್ರೀಯುತ ಎಂ. ಎನ್. ಬಾಬು ಅವರು.

ಈ ಕಾದಂಬರಿಯನ್ನು ನಮ್ಮ ಮಾಲೆಯಲ್ಲಿ ಪವಣಿಸಲು ಅನುಮತಿ ಕೊಟ್ಟುದಕ್ಕಾಗಿ ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಮೈಸೂರು ನಗರ
೪-೮-೧೯೪೭

ರಾ. ವೆಂ. ಶ್ರೀನಿವಾಸ

# ಅರಿಕೆ

ನನ್ನ ಬಾಳಿಗೆ ಒಂದು ಬೆಲೆಯನ್ನು ಕೊಟ್ಟಿರುವ ನನ್ನ ಎರಡು ಮೂರು ಹಳ್ಳಿಗಳ, ನನ್ನ ಕಾಲ್ಬಳಕೆಯಲ್ಲಿರುವ ಹತ್ತಾರು ಹಳ್ಳಿಗಳ ಅನುಭವದಿಂದಾದ ಕತೆಯೊಂದನ್ನು ತಮ್ಮ ಮುಂದಿಟ್ಟಿದ್ದೇನೆ. ನಾನು ಕಾದಂಬರಿಯನ್ನು ಬರೆಯುವುದು ಇದೇ ಮೊದಲು. ಇದರಲ್ಲಿ ಅಪ್ರಬುದ್ಧತೆ ಕಂಡುಬಂದರೆ ನನಗೆ ಆಶ್ಚರ್ಯವಿಲ್ಲ. ಹೇಗಾದರೂ ಸರಿಯೆ, 'ನಾಗು'ವಿನ ಮೂರ್ತಿಯೊಂದು ಓದುವವರ ಮುಂದೆ ನಿಂತಂತಾದರೆ ಅದೇ ನನ್ನ ಸೌಭಾಗ್ಯದ ಪರಮಾವಧಿ.

'ನಾನೂ ಒಂದು ಕಾದಂಬರಿಯನ್ನು ಬರೆಯಬಲ್ಲೆ' ಎಂಬುದನ್ನು ನನಗಿಂತ ಮುಂಚೆ ಕಂಡುಹಿಡಿದು, ಹಿಂಸೆಮಾಡಿ, ಬರೆಯಿಸಿದ, ಉಷಾ ಸಾಹಿತ್ಯ ಮಾಲೆಯ ಸಂಪಾದಕರಾದ ಗೆಳೆಯ ಶ್ರೀನಿವಾಸರಿಗೂ, ಮಾಲೆಯ ಒಡೆಯರಾದ ಶ್ರೀಮಾನ್ ರಾ. ನಾ. ಹಬ್ಬು ಅವರಿಗೂ ನನ್ನ ಚಿರಕೃತಜ್ಞತೆಗಳು. ಈ ಕಾದಂಬರಿಯ ಹುಟ್ಟಿಗೆ ಕಾರಣರಾದ, ಹೆಸರೆತ್ತಿದರೆ ಕೋಪಿಸಿಕೊಳ್ಳುವೆವೆಂದು ಹೆದರಿಸಿರುವ ನನ್ನ ಆ ಮೂವರು ಆಪ್ತಮಿತ್ರರನ್ನು ಹೀಗಾದರೂ ನೆನೆದು ನನ್ನ ಕೃತಜ್ಞತೆಗಳನ್ನರ್ಪಿಸುವುದು ನನ್ನ ಧರ್ಮ.

ಕನ್ನಡಿಗರ ಮುಂದೆ ಈ ಕತೆಯನ್ನಿಟ್ಟಾಗಿದೆ. ಅವರ ಹಾರ್ದಿಕ ಮನೋಭಾವವನ್ನೇ ನಿರೀಕ್ಷಿಸುತ್ತಿರುವ,

ಮೈಸೂರು
೩-೮-೧೯೪೭

ಎಂ. ನರೇಂದ್ರಬಾಬು

# ನಾಲ್ಕನೆಯ ಮನೆ

## ೧

"ನಾಗು, ಬೀದೀಲಿ ಹಾಗೆಲ್ಲ ಕುಣೀಬಾರ್ದು" ಎಂದ ತಕ್ಷಣ ಜಗಲಿಗೆ ಓಡಿಬಂದುಬಿಟ್ಟಳು. ಹಾಗೆಂದವರು ಮುದ್ದಪ್ಪನವರು. ನಾಗುವಿಗೆ ಅವಳ ತಂದೆ ಮುದ್ದಪ್ಪನವರೇ ತಾಯಿಯೂ ಹೌದು. ಮುಪ್ಪಿನ ಕಾಲದ ಮಗಳಾದುದರಿಂದ ನಾಗುವು ಮುದ್ದಪ್ಪನವರ ಜೀವ. ನಾಗುವಿಗೂ ಹಾಗೆಯೆ.

ಇನ್ನೂ ಬಿಸಿಲು ಇತ್ತು. ಹತ್ತು ವರ್ಷದ ಪುಟ್ಟ ನಾಗುವಿನ ನೆರಳೂ ಕೂಡ ಅರ್ಧ ತೆಂಗಿನ ಮರದಷ್ಟಾಗಿ ಹೋಗಿತ್ತು. ಬೀದಿಯ ಧೂಳಿನಲ್ಲಿ ಆಡುತ್ತಿದ್ದ ಅವಳ ಕೆಂಪು ಮುಖದ ಮೇಲೆ ಹಳದೀ ಬಣ್ಣದ ಬಿಸಿಲು ಆಟ ಮಾಡುತ್ತಿತ್ತು. ಪುಟ್ಟನಮನೆ ನಂಜುಂಡ, ತಮ್ಮಡಿ ಮಲ್ಲಿಕಾರ್ಜುನಪ್ಪನ ಮಗ, ಶಾನುಭೋಗರ ಮಗಳು ವಿಶಾಲಿ, ಎಲ್ಲರೂ ಸೇರಿ ನಡುಬೀದಿಯಲ್ಲಿ ದೊಂಬಿ ನಡಸಿದ್ದರು. ಮುದ್ದಪ್ಪನವರು ಜಗಲಿಯ ಮೇಲೆ ಕುಳಿತು ನೋಡುತ್ತಿದ್ದರು. ಅವರು ನೋಡುತ್ತಿದ್ದುದು ಮುಕ್ಕಾಲುಪಾಲು ನಾಗುವನ್ನೇ. ಅವಳು ಬಾಣಂತಿ ಮನೆಯಿಂದ ಈಚೆಗೆ ಬಂದ ಒಂದು ತಿಂಗಳಿಂದಲೇ ಮುದ್ದಪ್ಪನವರ ಪಕ್ಕದಲ್ಲಿ ಮಲಗಬೇಕಾಯಿತು.

ಮುದ್ದಪ್ಪನವರ ಹೆಂಡತಿ ಪುಟ್ಟನಂಜಮ್ಮ ಮುದ್ದಪ್ಪನವರ ಸೋದರ ಮಾವನ ಮಗಳೇ. ಅವರಿಬ್ಬರಿಗೂ ತಾವು ಗಂಡಹೆಂಡತಿಯರೆಂದು ಬಾಲ್ಯದಿಂದಲೇ ತಿಳಿದಿತ್ತು. ಹಾಗೆಯೇ ಮದುವೆಯೂ ಆಯಿತು. ಪುಟ್ಟನಂಜಮ್ಮನಿಗೆ ತೌರುಮನೆಯಷ್ಟೇ ಗಂಡನಮನೆಯೂ ಸರಾಗವಾದುದರಿಂದ ಅವಳು ಎರಡು ಮನೆಯಲ್ಲೂ ಕಾಣಸಿಗುತ್ತಿದ್ದಳು. ಒಂದೂರಿನ ನೆಂಟಸ್ತನವಾದುದರಿಂದ ಹೀಗಾಗುವುದು ಪದ್ಧತಿ. ಆದುದರಿಂದ ಮುದ್ದಪ್ಪನವರು ಅದನ್ನು ಗಮನಿಸುತ್ತಲೇ ಇರಲಿಲ್ಲ. ಆದರೆ ಮುದ್ದಪ್ಪನವರ ಅಕ್ಕ ಮಾತ್ರ ಇದನ್ನು ವಿರೋಧಿಸುತ್ತಿದ್ದರು. ಅವರಿಗೆ ಈ ಮದುವೆಯೇ ಇಷ್ಟವಿಲ್ಲ. ಆದರೆ ಸತ್ತವರ ತೀರ್ಮಾನವನ್ನು ಬದಲಿಸುವ ಶಕ್ತಿ ಒಬ್ಬರಿಗೂ ಇರಲಿಲ್ಲ. ಅದು ನಡೆಯಲು ಯಾವ ಅಡ್ಡಿಯೂ ಬರಲಿಲ್ಲ. ಪುಟ್ಟನಂಜಮ್ಮ ಮನೆಗೆ ಬಂದಳು.

ಮುದ್ದಪ್ಪನವರ ಅಕ್ಕನೇ ಹೆಚ್ಚು ಕಡಮೆ ಮನೆಗೆ ಯಜಮಾನಿ. ಅವರು ಹೇಳಿದಂತೆ ಗೃಹಕೃತ್ಯ ನಡೆದುಕೊಳ್ಳುತ್ತಿತ್ತು. ಅವರೇ ಒಂದು ಹೆಣ್ಣನ್ನು ಮುದ್ದಪ್ಪನಿಗೆಂದು ನಾಮಕರಣ ಮಾಡಿಟ್ಟಿದ್ದರು. ಮುದ್ದಪ್ಪ ನವರೇ ಬೇಡವೆಂದರು. ಮುದ್ದಪ್ಪನವರು ಅಕ್ಕನಿಗೆ ಬಹಳ ವಿಧೇಯರು. ತಮ್ಮ ತಾಯಿಗಿಂತ ಒಂದು ಸ್ವಲ್ಪ ಹೆಚ್ಚಾಗಿಯೇ ಅವರ ಮೇಲೆ ಭಕ್ತಿವಿಶ್ವಾಸ ಗಳನ್ನಿಟ್ಟಿದ್ದರು. ಅದಕ್ಕೆ ತಕ್ಕಂತೆ ಅವರೂ ತಮ್ಮ ತಮ್ಮನನ್ನು ನೋಡಿ ಕೊಳ್ಳುತ್ತಿದ್ದರು.

ಪುಟ್ಟನಂಜಮ್ಮ ಗಂಡನ ಮನೆಯಿಂದ ಅಪ್ಪನ ಮನೆಗೆ ಆಗಾಗ್ಗೆ ಹೋಗಿ ಬರುವ ಒಂದೇ ವಿಷಯದಿಂದ ಮುದ್ದಪ್ಪನವರ ಅಕ್ಕ ಕೆಟ್ಟವರಾಗಿಹೋದರು. ಅವರು ತುಂಬಾ ಸಾಧುವಾಗಿದ್ದವರು. ಮುದ್ದಪ್ಪನವರು ತಮ್ಮೆದುರಿಗೇ 'ಆ ಹುಡುಗಿ ನನಗಿಷ್ಟವಿಲ್ಲ' ಅಂದ ತಕ್ಷಣದಿಂದ ಮುದ್ದಪ್ಪನವರ ಮೇಲೆ, ಮುಂದೆ ಬರುವ ಪುಟ್ಟನಂಜಮ್ಮನ ಮೇಲೆ, ಅಸಮಾಧಾನ ಹುಟ್ಟಿಕೊಂಡು ಬಿಟ್ಟಿತು.

ಅಂದು ಬಿದಿರಟ್ಟಿಯ ನೆಂಟರು ನಾಲ್ಕು ಜನ ಮುದ್ದಪ್ಪನವರ ಮನೆಗೆ ಬಂದಿದ್ದರು. ಮಧ್ಯಾಹ್ನ ಮೂರುಗಂಟೆ ಸಮಯ. ಪುಟ್ಟನಂಜಮ್ಮ ಆ ಮನೆಗೆ ಹೋಗಿದ್ದವಳು ಇನ್ನೂ ಬಂದಿರಲಿಲ್ಲ. ಅವಳ ತಂದೆಗೆ ಒಂದು ಕಾಲು ಪೂರ್ತ ಇಲ್ಲ; ಪಾಪ, ಮರದಿಂದ ಬಿದ್ದು ಕಳೆದುಕೊಂಡಿದ್ದರು. ಅವರಿಗೆ ಎಣ್ಣೆ ನೀರು ಹಾಕಲು ಪುಟ್ಟನಂಜಮ್ಮ ಆ ಮಧ್ಯಾಹ್ನ ಅಲ್ಲಿಗೆ ಹೋಗಿದ್ದಳು. ಬಾಗಿಲಿಗೆ ನೆಂಟರು ಬಂದು ನಿಂತ ತಕ್ಷಣ ಮುದ್ದಪ್ಪನವರು 'ನಮಸ್ಕಾರ' ಎಂದರು. ಮುದ್ದಪ್ಪನವರ ಅಕ್ಕನಿಗೆ ತಕ್ಷಣ ಗೊತ್ತಾಯಿತು ಅವರು ನೆಂಟರು ಗಳೆಂದು. ಮನೆಯಲ್ಲಿಲ್ಲದ ಪುಟ್ಟನಂಜಮ್ಮನ ಮೇಲೆ ವಿಪರೀತ ಸಿಟ್ಟುಬಂತು. 'ಬಂದವರಿಗೆ ನೀರು ಕೊಡಿ' ಎಂದು ಗಂಡಸರು ಕೂಗುಹಾಕಿದರೆ ಬರೀ ಹಣೆ ಯವಳು ಅವರಿಗೆ ನೀರು ಕೊಡುವುದೇ? ಎಂಬ ಯೋಚನೆ ಅವರಿಗೆ ಬಂದು ಮನಸ್ಸಿನಲ್ಲೇ ಪುಟ್ಟನಂಜಮ್ಮನನ್ನು ನಿಂದಿಸಿದರು.

ಪುಟ್ಟನಂಜಮ್ಮನಿಗೆ ನೆಂಟರು ಬಂದಿರುವ ವಿಷಯ ಸೂಕ್ಷ್ಮವಾಗಿ ತಿಳಿ ದಿದ್ದರೆ ಏನು ಕೆಲಸವಿದ್ದರೂ ಬಿಟ್ಟು ಓಡಿ ಬಂದುಬಿಡುತ್ತಿದ್ದಳು. ಆದರೆ ಅವಳಿಗೆ ತಿಳಿಯಲಿಲ್ಲ. ಕೈಲಷ್ಟು ಚಪ್ಪರದವರೆಕಾಯಿಯನ್ನು ಹಿಡಿದುಕೊಂಡು

ಮೂರೂವರೆ ಗಂಟೆಯ ಹೊತ್ತಿಗೆ ಬಂದಳು. ಅವಳಿಗೆ ಜಗಲಿಯಲ್ಲೇ ಜೀವ ಹೋಯಿತು. ಅವರೆಲ್ಲರನ್ನೂ ನೋಡಿದ ತಕ್ಷಣವೇ ಒಳಕ್ಕೆ ಹಾರಿಹೋದಳು. ಅತ್ತಿಗೆ ಬಿರುಗಣ್ಣು ಬಿಟ್ಟುದುದು ಅವರ ಮುಖ ನೋಡದಿದ್ದಾಕ್ಷಣ ಅವಳಿಗೆ ತಿಳಿಯದೆ? ಸುಮ್ಮನೇ ತಲೆ ತಗ್ಗಿಸಿಕೊಂಡು ಅಡಿಗೆ ಮನೆಯೊಳಕ್ಕೆ ನಡೆದಳು.

ಕೋಣೆಯ ಬಾಗಿಲಿಗೆ ಅತ್ತಿಗೆ ಬಂದರು. "ಲೇ! ಪುಟ್ಟನಂಜಿ. ನೆಂಟರ್ನ ಮನೆ ಬಾಗಿಲಲ್ಲಿ ಕೂಡಿಸಿಬಿಟ್ಟು ಬೀದೀ ಅಲೆಯೋಕ್ಕೆ ಹೋಗಿದ್ಯೆಲ್ಲ – ಹೀಗೆಲ್ಲ ಆದರೆ ಹೇಗೆ?"

"ಅಪ್ಪನಿಗಷ್ಟು ನೀರು ಹಾಕಿದೆ."

"ಇಂಥಾ ಹೊತ್ನಲ್ಲೇನು ಆರೈಕೆ ಮಾಡೋದು? ನಮ್ಮೋರು ತಮ್ಮೋರು ಅಂತ ಜನ ಬಂದರೆ, ಕೈಗೆ ನೀರು ಕೊಡೋಕ್ಕೆ, ನಿನ್ನ ಹಾಗೆ ನಾನೇನು ಗಂಡನ್ನ ಉಳಿಸ್ಕೊಂಡೀದೀನಾ."

"ತಪ್ಪಾಯ್ತು. ನನಗೆ ಗೊತ್ತಾಗ್ಲಿಲ್ಲ"

"ಇದು ನಿನ್ನ ಗಂಡ ಹೇಳ್ಕೊಟ್ಟಿರೋ ಉಪಾಯ ಕಣೇ. ಮಾಡೋದು ಮಾಡ್ಬುಟ್ಟು ತಪ್ಪಾಯ್ತು ಅಂತ ಹೇಳಿಬಿಡು ಅಂದವನೆ. ಬರ್ತಾ ಬರ್ತಾ ಕತ್ತೆಯಾಗ್ಹೋದೆ ಪುಟ್ಟನಂಜಿ."

ಪುಟ್ಟನಂಜಮ್ಮ ಮಾತಾಡಲಿಲ್ಲ. ಸುಮ್ಮನೆ ಒಲೆಯಿಂದ ಬೂದಿ ತೋಡುತ್ತಾ ತಲೆತಗ್ಗಿಸಿ ಕುಳಿತಿದ್ದಳು. ಅತ್ತಿಗೆ ಅವಳನ್ನೇ ಕೊಂಚ ಹೊತ್ತು ನೋಡುತ್ತಿದ್ದು 'ವಯ್ಯಾರಿ!' ಅಂದುಬಿಟ್ಟು ಹೊರಟುಹೋದರು. ಆ ಮಾತು ಪುಟ್ಟನಂಜುವನ್ನು ನೋಯಿಸಿತು.

ನೆಂಟರಿಗೆ ತಿಂಡಿ–ಕಾಫಿ, ಮುಗಿಯಿತು. ಪುಟ್ಟನಂಜುವಿನ ಮುಖ ಇನ್ನೂ ಸಪ್ಪೆಯಾಗಿತ್ತು. ತಾನು ಮಾಡಿದುದು ತಿಳಿದು ಮಾಡಿದ್ದಲ್ಲವೆಂದು ಪುಟ್ಟನಂಜಮ್ಮನ ಸಮಾಧಾನ. ಮೇಲೆ ಅನ್ಯಾಯವಾಗಿ ಅತ್ತಿಗೆ 'ವಯ್ಯಾರಿ' ಅಂದರಲ್ಲ ಅನ್ನೋ ದುಗುಡ ಬೇರೆ. ನೆಂಟರು ಬಂದಿದ್ದುದರಿಂದ ಮುದ್ದಪ್ಪನವರು ಅವರ ಜೊತೆಯಲ್ಲೇ ಇದ್ದರು. ಆದ್ದರಿಂದ ಅವರು ಪುಟ್ಟನಂಜಮ್ಮನನ್ನೇ ಆಗಲಿ ಅಕ್ಕನನ್ನೇ ಆಗಲಿ ಗಮನಿಸಲಿಲ್ಲ.

ಮುದ್ದಪ್ಪನವರ ಅಕ್ಕನಿಗೆ ತಾವು ಅಂದದ್ದು ಸರಿ ಅನ್ನಿಸಿದರೂ, ಪುಟ್ಟ ನಂಜಮ್ಮನನ್ನು ಕ್ಷಮಿಸಬಹುದಾಗಿತ್ತು ಅಂತ ತೋಚಲೇ ಇಲ್ಲ. ಅವಳು ಆ ಮನೆಗೆ ಹೋದದ್ದು ತಪ್ಪು ಎಂದು ಅವಳೇ ಪಶ್ಚಾತ್ತಾಪ ಪಟ್ಟುಕೊಂಡಿದ್ದಾಳೆ, ಎನ್ನುವುದು ಅವಳ ಆ ಮೌನತುಂಬಿದ ತುಂಡು ಮಾತುಗಳಲ್ಲೇ ಸ್ಪಷ್ಟವಾಗಿದ್ದರೂ, ತಾವು 'ವಯ್ಯಾರಿ ಅನ್ನಬಾರದಿತ್ತು' ಎಂದು ಅವರು ಒಪ್ಪಿಕೊಳ್ಳಲೇ ಇಲ್ಲ. ಅನಂತರ ಅವರು ನಂಜಮ್ಮನನ್ನು ಮಾತನಾಡಿಸುವುದೇ ಬಿಟ್ಟುಬಿಟ್ಟರು. ಯಾರಿಗೋ ಆಡಿದಂತೆ ನಾಲ್ಕು ಮಾತುಗಳನ್ನೂ ಅಂದುಬಿಟ್ಟರು.

ಅವನ್ನೆಲ್ಲಾ ನೆನೆಸಿಕೊಂಡು ನಂಜಮ್ಮ ರಾತ್ರಿ ಅತ್ತುಬಿಟ್ಟಳು. ಎದುರಿಗೆ ಯಜಮಾನರು ಇದ್ದಾರೆ. ಅವರೆದುರು ಅತ್ತರೆ ನನಗೂ ಅಕ್ಕನಿಗೂ 'ತಂದ್ಹಾಕ್ತೋಕೆ' ಅಳ್ತಾಳೆ ಅಂತ ತಿಳಿದುಕೊಳ್ಳುತ್ತಾರೆ, ಎಂದು ನಂಜಮ್ಮ ಅಳುವನ್ನು ಬಹಳ ತಡೆದಿದ್ದಳು. ಮಂಕಾಗಿ ಉರಿಯುತ್ತಿದ್ದ ದೀಪದ ಬೆಳಕಿಗೆ ಹೊಳೆಯುತ್ತಿದ್ದ ನಂಜಮ್ಮನ ಕಂಬನಿ ಮುದ್ದಪ್ಪನವರಿಗೆ ಕಂಡುಹೋಯಿತು.

"ಇದ್ಯಾಕೆ ?" ಅಂದರು.

"ಏನು ?"

"ಅಳು"

"ಇಲ್ಲಾ–ಬುಟ್ಟಿ ಹೊಗೆ ಕಣ್ಣಿಗೆ ಸುತ್ಕೊಂಡ್ತು."

"ಆಹಾ–ಅದನ್ನ ನಂಬವೇ ಅನ್ನೋಕ್ಕೆ ನಿನ್ನ ಕತ್ತಲ್ಲೂ ಅಳಾ ತುಂಬದೆ." ನಂಜಮ್ಮನಿಗೆ ಒಳಗಿದ್ದ ಅಳುವೆಲ್ಲಾ ಹೊರಗೆ ಬಂದುಬಿಟ್ಟಿತು. ಮನಃಪೂರ್ತಿ ಅತ್ತುಬಿಟ್ಟಳು. ಸಮಾಧಾನಮಾಡಿ ಅನಂತರ ಮುದ್ದಪ್ಪನವರು ಕಾರಣ ವಿಚಾರಿಸಿದರು. ನಂಜಮ್ಮ, ತಾನು ಇನ್ನುಮೇಲೆ ಅಪ್ಪನ ಮನೆಗೆ ಹೋಗುವುದಿಲ್ಲವೆಂದೂ ಅತ್ತಿಗೆ ತನ್ನನ್ನು ಕ್ಷಮಿಸಿದರೆ ಸಾಕೆಂದೂ ಹೇಳಿಕೊಂಡಳು.

ಮುದ್ದಪ್ಪನವರಿಗೆ ಅಕ್ಕನ ಮೇಲೆ ನಿಜವಾಗಿ ಬೇಜಾರು ಬಂದಿತು. ಹುಡುಗಿ ಒಂದಲ್ಲ ಹತ್ತು ಸರ್ತಿ ತಪ್ಪುಮಾಡಿದರೂ ಒಳ್ಳೇ ಮಾತಿನಲ್ಲಿ ಅವಳ ತಪ್ಪನ್ನು ಹೇಳಿ ಬುದ್ಧಿ ಕಲಿಸುವುದಕ್ಕಾಗುವುದಿಲ್ಲವೇ? ಎಂಬುದು ಅವರ

ಪ್ರಶ್ನೆ. ಅದೂ ನಂಜಮ್ಮನಂಥ ನಿರಹಂಕಾರಿ ಹೆಂಗಸಿಗೆ ಬೈಗುಳ ಅನಾವಶ್ಯಕ ಎಂದು ಅವರು ತೀರ್ಮಾನಿಸಿದ್ದರು.

"ನಾನು ಹೀಗೆ ಹೇಳ್ದೆ ಅಂತಾ ನಾಳೆ ಅತ್ತಿಗಮ್ಮನ ಜೊತೇಲಿ ಹೇಳ್ಬೇಡಿ" ಎಂದು ನಂಜಮ್ಮ ಕೇಳಿಕೊಂಡಳು.

"ನನಗೆ ಹುಚ್ಚಾ? ನೀನು ಅಳೋದು ನಿಲ್ಲಿಸಿ ನಿದ್ದೆಮಾಡು." ಎಂದು ಅವಳ ತಲೆ ಸವರಿ ಮುದ್ದಪ್ಪನವರು ಸಮಾಧಾನಮಾಡಿದರು.

ಸಮಾಧಾನವಾಗುವುದಕ್ಕೆ ಅದು ಹೆಂಗಸರ ಒಳಜಗಳ. ನಂಜಮ್ಮ ಮತ್ತು ಅವಳ ಅತ್ತಿಗೆಯ ವಾತ್ಸಲ್ಯವು ತಿಳಿಯಾಗುತ್ತ ಬಂತು. ಇದೇ ಚಿಂತೆ ನಂಜಮ್ಮನನ್ನು ಸದಾ ಯೋಚನೆಗೀಡುಮಾಡಿತು. ಅತ್ತ ಅಪ್ಪನ ಮನೆಯ ಕಷ್ಟ. ಇತ್ತ ಅತ್ತಿಗೆಯ ಮುನಿಸು. ಇವುಗಳಿಂದ ಬೇಯುತ್ತಿದ್ದ ನಂಜಮ್ಮನು ದಿನದಿನಕ್ಕೆ ಕೃಶಳಾಗುತ್ತಿದ್ದುದು ಅವಳ ಡಾಬು ಒಂದಕ್ಕೇ ಗೊತ್ತು.

ಪುನಃ ಒಂದು ದಿನ ಇದೇ ಪಂಚಾಯಿತಿ ಬಂದಿತು. ಹುಲ್ಲಟ್ಟಿ ಮಾದಯ್ಯನ ಮಗನಿಗೆ ಅದೇ ಪಲಕೂರಿನ ಸಿದ್ದಯ್ಯನ ಮಗಳನ್ನು ತಂದು ಮದುವೆ ಎಂದು ಊಟಕ್ಕೆ ಹೇಳುವುದಕ್ಕೆ ಜನ ಬಂದಿದ್ದರು. ಮದುವೆಯ ನಿಷ್ಕರ್ಷೆಯಾಗಿದ್ದಮೇಲೂ ನಂಜಮ್ಮನ ಅತ್ತಿಗೆ ಮದುವೆ ಪೀಠಿಕೆ ವಿಷಯಾನೇ ತೆಗೆದರು; ಮುದ್ದಪ್ಪನವರಿಗೆ ಎಲೆ ಅಡಕೆ ತಂದುಕೊಟ್ಟು ಊಟಕ್ಕೆ ಕರೆಯಲು ಬಂದವರೊಂದಿಗೆ,

"ನನಗೇನೋ ಇಂಥ ಲಗ್ನದಲ್ಲಿ ಮನಸಿಲ್ಲ" ಅಂದರು.

"ಇದ್ಯಾಕಕ್ಕ ಹಿಂಗಂತೀರಿ?" ಎಂದು ಆಶ್ಚರ್ಯಪಟ್ಟು ಕೇಳಿದರು ಮದುವೆ ಮನೆಯವರು. ನಂಜಮ್ಮನಿಗೆ ಇದೆಲ್ಲ ಕೇಳಿಸುತ್ತಲೇ ಇತ್ತು. ಅವಳು ಆ ಕಡೆ ಹಜಾರದಲ್ಲಿ ಕಸ ಗುಡಿಸುತ್ತಿದ್ದಳು.

"ಒಂದು ಊರಿನಲ್ಲಿ ಹೆಣ್ಣು ತರಲೂ ಬಾರದು, ಕೊಡಲೂ ಬಾರದು" ಎಂದು ಮುದ್ದಪ್ಪನವರ ಅಕ್ಕ ತಮ್ಮ ಅಭಿಪ್ರಾಯ ಸೂಚಿಸಿದರು. ಮುದ್ದಪ್ಪನವರು "ಸರಿ ಸರಿ! ನೀವು ಹಳೇ ಕಂದಾಚಾರಗಳ್ನೇ ನಂಬಿಕೊಳ್ಳಿ. ಒಂದು ಗಂಡಿಗೆ ಒಂದು ತಕ್ಕ ಹೆಣ್ಣು. ಋಣಾನುಬಂಧ ಒಂದೇ ಊರಿನಲ್ಲಿರಲೇಬಾರದೇನು?" ಎಂದು ಅಕ್ಕನೊಡನೆ ಚರ್ಚೆ ಹೂಡಿದರು. ಅದಕ್ಕೆ ಅವರು

ನಂಜಮ್ಮನಿಗೆ ಕೇಳಿಸುವ ಹಾಗೆಯೇ "ಒಂದೇ ಊರಿನ ಋಣಾನುಬಂಧದ ಅನುಭವ ಆಯ್ತಲ್ಲ" ಎಂದು ಮುಖ ತಿರುಗಿಸಿ ಅಂದರು. ಮುದ್ದಪ್ಪನವರು ಕೊಂಚ ಬಿರುಸಾದರು. "ಅದೇನಕ್ಕ ?" ಎಂದರು. ಅದಕ್ಕೆ ಅವರು ನಿರ್ದಾಕ್ಷಿಣ್ಯವಾಗಿ "ಒಂದು ಹೆಣ್ಣಿಗೆ ಒಬ್ನೇ ಗಂಡ ಇರಬೇಕೆಂದರೆ ಬೇರೆ ಊರಿಂದ ಹೆಣ್ಣು ತರಬೇಕು; ಬೇರೇ ಊರಿಗೆ ಹೆಣ್ಣು ಕೊಡಬೇಕು" ಎಂದುಬಿಟ್ಟರು.

ನಂಜಮ್ಮನಿಗೆ ಸಿಡಿಲು ಹೊಡೆದಂತಾಯಿತು. ಮುದ್ದಪ್ಪನವರು ನಿಜವಾಗಿ ಭಯಗೊಂಡರು. ಸುಮ್ಮನೆ ಮನೆಯೊಳಕ್ಕೆ ಹೊರಟುಹೋದರು. ಊಟಕ್ಕೆ ಕರೆಯಲು ಬಂದಿದ್ದ ಮದುವೆ ಮನೆಯವರು ಕೋರ್ಟಿನಲ್ಲಿ ಸೋತವರಂತೆ ಹೊರಟುಹೋದರು.

ನಂಜಮ್ಮನಿಗೆ ಈ ಮಾತಿನಿಂದ ಯಾವುದೋ ಒಂದು ದೊಡ್ಡ ರೋಗ ತಗುಲಿದಂತಾಯಿತು. ಅವಳು ಇನ್ನು ಹೆಚ್ಚು ದಿನ ಬದುಕಲಾರಳೆಂಬುದು ಮುದ್ದಪ್ಪನವರಿಗೆ ತಿಳಿದುಹೋಯಿತು. ಒಂದು ದಿನ ರಾತ್ರಿ,

"ಇದ್ಯಾಕೇ ನೀನು ದಿನದಿನಕ್ಕೆ ಬಿಳಿಚಿಕೊಂಡುಬಿಟ್ಟೆ" ಎಂದರು ಮುದ್ದಪ್ಪ.

"ನನಗೇನು ಗೊತ್ತು. ನನಗೆ ಹಂಗನ್ನಸ್ತಾನೇ ಇಲ್ಲ" ಅಂತ ಉತ್ತರ ಬಂತು.

"ಓಹೋ ಗೊತ್ತಾಯಿತು, ಅಕ್ಕ ನಿನ್ನ ಮೇಲೆ ಕೋಪಿಸಿಕೊಂಡು ಮಾವಯ್ಯನ ಮನೆಗೆ ಹೋಗೋದಕ್ಕೆ ಅಡ್ಡಿ ಮಾಡಿದರಲ್ಲ ಅದಕ್ಕೆ ನೀನು ನೊಂದುಕೊಂಡಿದ್ದೀಯೆ ಅಲ್ಲವೆ ?" ಎಂದು ನೋಡಿದರು. ನಂಜಮ್ಮ ಔಡು ಕಚ್ಚಿದಳು. ಅವಳ ಕೋಪ ಕಣ್ಣಲ್ಲಿ ಬಂದು ಕೆಂಬಣ್ಣವೆತ್ತು ನಿಂತಿತು. "ಇನ್ನು ಆ ಮನೆಯ ಹೊಸಲು ದಾಟಿದರೆ ನಿಮ್ಮಾಣೆ, ನಾನು ಕಟ್ಟಿರುವ ಈ ಪರಮೇಶ್ವರನಾಣೇ." ಎಂದು ಗುಡುಗಿದಳು. ಮುದ್ದಪ್ಪನವರು ಸುಮ್ಮನಾದರು.

ನಾಲ್ಕಾರು ತಿಂಗಳು ಕಳೆದುವು. ನಂಜಮ್ಮನು ತನ್ನ ಮೂವತ್ತನೇ ವರ್ಷದಲ್ಲಿ ಗರ್ಭಿಣಿಯಾದಳು. ಅವಳ ಪ್ರಮಾಣದಂತೆ ಅವಳು ತಂದೆಯ ಮನೆಗೆ ಹೋಗಲೇ ಇಲ್ಲ. ತನ್ನನ್ನು ತಂದ ಮನೆಯ ಕುಲವನ್ನು ಬೆಳಗಲು ಒಂದು ಸೊಡರಿಟ್ಟು, ನಂಜಮ್ಮ ಮಡಿಯಾದಳು. ಅವಳು ಸತ್ತಾಗ ಮುದ್ದಪ್ಪ

ನವರಿಗೆ ಹುಚ್ಚೇ ಹಿಡಿಯಿತು. ನಂಜಮ್ಮನ ಜೀವ ಆ ಮಗುವಿನಲ್ಲಿದ್ದುದ ರಿಂದ ಅವರು ಪ್ರಪಂಚದಲ್ಲಿ ಉಳಿಯುವುದು ಸಾಧ್ಯವಾಯಿತು.

ಮುದ್ದಪ್ಪನವರ ಅಕ್ಕ, ನಂಜಮ್ಮ ಹೋದುದಕ್ಕೆ ತುಂಬಾ ಅತ್ತರು. ಮನದಲ್ಲಿಯೇ ಮರುಗಿದರು. 'ನನ್ನ ನಂಜೂನ ನಾನೇ ಕೊಂದೆ' ಎಂದೇ ಗೋಳಾಡಿದರು. ಅದೆಲ್ಲಾ ನಂಜಮ್ಮನ ಮಿಕ್ಕ ಅನುನಯ, ಕರ್ತವ್ಯದೃಷ್ಟಿ, ಭಕ್ತಿ ವಿಶ್ವಾಸಗಳಿಗಾಗಿ. ಆದರೆ ಈಗಲೂ, ಒಂದೂರಿನ ಹೆಣ್ಣು ಕೊಟ್ಟು ತರುವ ವಿಷಯವನ್ನು ಮಾತ್ರ ಪ್ರತಿಭಟಿಸಲು ಅಕ್ಕ ಸಿದ್ಧರಿದ್ದಾರೆ.

ಮುದ್ದಪ್ಪನವರು ಕಡೆಗಾಲದಲ್ಲಿನ ತಮ್ಮ ಒಂದು ತಿಂಗಳ ಕೂಸನ್ನು ಕೈಗೆ ತೆಗೆದುಕೊಂಡರು. 'ನಾಗಮ್ಮ' ಎಂದು ಕೂಗಿದರು. ತಾಯಿಯಾಗಿ ಸಾಕಿದರು. ವಿಧವೆಯಂತೆ ಜೀವಿಸುತ್ತಿದ್ದರು.

ಮಗುವಿನಿಂದಲೂ ನಾಗುವಿಗೆ ತಂದೆ ಮತ್ತು ಅತ್ತೆಯಲ್ಲಿ ತುಂಬಾ ಮಮತೆ. ಇಬ್ಬರ ಪೈಕಿ ಒಬ್ಬರ ಬಟ್ಟಲಿನಲ್ಲಿಯೇ ಅವಳ ಊಟವಾಗಬೇಕು. ಯಾರಾದರೊಬ್ಬರ ಹಾಸಿಗೆಯಲ್ಲೇ ಮಲಗಬೇಕು. ನಾಗುವಿಗೆ ನಡೆಯುವುದು ಸರಿಯಾಗಿ ಬಂತು, ಎಂದು ತೀರ್ಮಾನವಾದ ವಾರನೆಯ ದಿನ ದಿಂದಲೇ ಹೊಲಕ್ಕೆ ಅಪ್ಪನಿಗೆ ಊಟ ತೆಗೆದುಕೊಂಡು ಹೋಗಲು ಮೊದಲು ಮಾಡಿದಳು. ಆದರೆ ನಾಲ್ಕೈದು ದಿನಗಳಲ್ಲೇ ಆ ಪದ್ಧತಿಯನ್ನು ಅಕ್ಕ ತಮ್ಮ, ಸೇರಿ ನಿಲ್ಲಿಸಿಬಿಟ್ಟರು.

ಮಧ್ಯಾಹ್ನ ನೆತ್ತಿಯ ಮೇಲೆ ಸೂರ್ಯನನ್ನು ಬಿಟ್ಟುಕೊಂಡು, ಹಿಮ್ಮಡಿಗೆ ಚೋಟು ಮೇಲೆ ಸುಳಿದಾಡುವ ಲಂಗವನ್ನು ತೊಟ್ಟು, ತನ್ನ ಚೈನಿನ ಕಾಲಿನಲ್ಲೇ ನೆರಳನ್ನು ತುಳಿದುಕೊಂಡು, ಜಡೆಗೆ ಸಿಕ್ಕದೇ ಆ ಮುದ್ದು ಕೆನ್ನೆಯ ಮೇಲೆಯೇ ತೂಗಾಡುತ್ತಿದ್ದ ಒಂದು ಕುರುಳ ಜೊಂಪೆಯನ್ನು, ಊಟದ ಪಾತ್ರೆಯನ್ನು ಹಿಡಿದಿರದ ಕೈಯಿಂದ, ಹಿಂದಕ್ಕೆ ಸರಿಸಿಕೊಳ್ಳುತ್ತಾ ನಾಗು ಹೊರಡಬೇಕು. ಆಗ ಕಾಲುವೆ ತಿಳಿಯಾಗಿ ಹರಿಯುತ್ತಿರುತ್ತದೆ. ಅದರಲ್ಲಿ ತೇಲಿ ಬರುವ ಗೆಜ್ಜುಗ, ನೀರಿನ ಸೆಳವಿನಿಂದ ಹೂವಿನ ಸಹಿತ ಕಿತ್ತುಬಂದ ದಡದ ಬಳ್ಳಿಗಳನ್ನು ನಾಗು ನೋಡುತ್ತಾ, ಸುಮ್ಮನೆ ಆಸೆಪಡುತ್ತಾ ಕಾಲು ಹಾದಿಯ ಸೇತುವೆಯಿಂದ ಕಾಲುವೆಯನ್ನು ದಾಟಬೇಕು. ಅದರಿಂದ ಮುಂದೆ ದೊಡ್ಡ ತಾಳೆಯಗುತ್ತಿ ಇದೆ. ಅದರ ಬಳಿ ಸುಳಿದರೆ 'ಘುಂ' ಎನ್ನುತ್ತದೆ.

ಆದರೆ ಅಲ್ಲಿ ಹಾವುಗಳ ವಾಸ ಜಾಸ್ತಿಯಂತೆ. ಅದು ಪುಟ್ಟನಾಗುವಿಗೂ ಗೊತ್ತಿದೆ. ಬಾಯಲ್ಲಿ ಲೊಟ್ಟೆ ಹಾಕಿಕೊಳ್ಳುತ್ತಾ ಎಚ್ಚರದಿಂದ ಅಲ್ಲಿ ನಡೆಯಬೇಕು. ಅಲ್ಲಿಂದ ಮುಂದಕ್ಕೆ ಹಲುಸಿದ್ದನ ಅಡು. ಅಲ್ಲಿ ಕಬ್ಬಿಣದ ಗಿಡಗಳು ಹಳದಿಯ ಹೂವು, ಹಸುರು ಎಲೆಗಳನ್ನು ಹೊತ್ತು ಒತ್ತಾಗಿ ನಿಂತಿವೆ. ಅದರ ಸುತ್ತ ನೂರಾರು ಜೀರುಂಡೆಗಳು ಚೀರುತ್ತಿರುತ್ತವೆ. ಅದರ ಎದುರಿಗೇನೆ ಶಾನುಭೋಗರ ತೊಗರೀ ಹೊಲ. ಅಲ್ಲಿ ಅವರ ಜೀತಗಾರ ಇದ್ದೀ ಇರುತ್ತಾನೆ. ಅವನು ದಿನಾ 'ನಾಗವ್ವಾ, ಹೊಟ್ಟೆ ಬಲೀ ಹಸೀತಾದೆ ಕಣ್ರವ್ವಾ' ಎನ್ನುತ್ತಾನೆ. ಅವನನ್ನು ನಾಗು ಅಣಕಿಸಿಕೊಂಡು ಮುಂದೆ ಹೋಗಬೇಕು. ಅದೇ ಸರ್ಕಾರದ ಹುಲ್ಲುಗಾವಲು. ಅಲ್ಲಿ ದನಗಳು, ಕುರಿಗಳು ಕತ್ತುಬಗ್ಗಿಸಿ ಮೇಯುತ್ತಿರುತ್ತವೆ. ಹೊಟ್ಟೆ ತುಂಬಿದವು ನೆರಳಲ್ಲಿ ಸೇರಿರುತ್ತವೆ. ಚಿಕ್ಕವಯದ ಕರುಗಳನ್ನು, ಕೈಗೆ ಸಿಕ್ಕುವ ಕುರಿಗಳನ್ನು ಸವರುತ್ತಾ ನಡೆದು ನಾಗು ಬಲಕ್ಕೆ ತಿರುಗಿದರೆ ಅದೇ ಮುದ್ದಪ್ಪನವರ ಬಾಂದಿನ ಹೊಲ. ಆ ಹೊಲದ ಮೂಲೆಯಲ್ಲಿ ಒಂದು ದೊಡ್ಡ ಕೊಳವಿದೆ ಅದರಿಂದಲೇ ಐದೇರುಳ ತೋಟವೂ, ಒಂದೆಕರೆ ಗದ್ದೆಯೂ ಜಿರಾಯಿತಾಗುತ್ತಿದೆ. ಇನ್ನು ಮಿಕ್ಕ ಹತ್ತೊಂಭತ್ತೇರುಳ ಜಮೀನೂ ಬರೀ ಹೊಲವೇ. ಆ ಒಟ್ಟು ಜಮೀನಿನ 'ಕನ್ನ' ದಲ್ಲಿ ನಿಂತುಕೊಂಡು ನಾಗು 'ಅಪ್ಪಾಜ್ಜೀ' ಅಂತ ಕೂಗಿದರೆ ಸಾಕು. ಐವತ್ತು ವರ್ಷದ ಮುದ್ದಪ್ಪನವರು ಯಾವ ಮೂಲೆಯಲ್ಲಿದ್ದರೂ ಸರಿಯೇ, ದೇವರನ್ನು ಕಂಡ ಭಕ್ತನಂತೆ ಓಡಿ ಬಂದು, ಪಾತ್ರೆಗಳ ಸಹಿತ ನಾಗುವನ್ನು ಎತ್ತಿಕೊಂಡು ಕೊಳದ ಹತ್ತಿರಕ್ಕೆ ಹೋಗಬೇಕು.

ಇದೆಲ್ಲ ನಾಗುವಿಗೆ ಅತ್ಯಂತ ಪ್ರಿಯವಾದ ವಿಷಯಗಳು. ಆದರೆ ಅವಕ್ಕಿಂತಲೂ ಪ್ರಿಯರಾದ ಅಪ್ಪ, ಅತ್ತೆಯರು ಅವೆಲ್ಲ ಬೇಡ ಅಂದರು. ನಾಗು ಹಟಮಾಡಲಿಲ್ಲ. ಅವಳಿಗೆ ಅವರಲ್ಲಿ ತುಂಬಾ ನಂಬಿಕೆ. ಸುಮ್ಮನಿದ್ದು ಬಿಟ್ಟಳು.

ಕಾಲ ನಾಗುವಿಗೆ ಒಂಭತ್ತು ವರ್ಷವೆಂದು ಅಳೆಯಿತು. ಇಂದು ಮುದ್ದಪ್ಪನವರು, ಅವಳು ಬೀದಿಯಲ್ಲೂ ಆಡಬಾರದೆಂದು ನಾಗುವಿಗೆ ತಿಳಿಸಿದರು. ಅವಳು ತಕ್ಷಣ ಓಡಿಬಂದುಬಿಟ್ಟಳು. ಅಪ್ಪನ ಹೆಗಲಿಗೆ ಒರಗಿಕೊಂಡು ಬಿಸಿಯುಸಿರು ಬಿಡುತ್ತಿದ್ದಳು. ಮುದ್ದಪ್ಪನವರು ಇಲ್ಲಿಯವರೆಗೂ

ನಾಗುವಿನ ಜನ್ಮ ವಿಷಯವನ್ನು ಪುಟ್ಟನಂಜಮ್ಮನ ಜನ್ಮದ ಮೂಲದಿಂದಲೂ ಆಲೋಚಿಸುತ್ತಿದ್ದರು. ಅವರಿಗೆ ನಾಗುವು ದೊಡ್ಡ ಹೆಂಗಸಿನಂತೆ ತೋರಿ ಬಿಟ್ಟಳು. ತಕ್ಷಣ ಅವಳಿಗೆ ಬೀದಿಯಲ್ಲಿ ತಿರುಗುವ ಹಕ್ಕು ನಿಂತುಹೋಯಿತು. ಅವರ ಹೆಗಲನ್ನು ಒರಗಿ ನಿಂತಿದ್ದು ತೊಡೆಯ ಮೇಲಕ್ಕೆ ಬಂದ ನಾಗು 'ಅದ್ಯಾಕೆ?' ಎಂದು ಕೇಳಿದಳು. ಮುದ್ದಪ್ಪನವರು ಮಕ್ಕಳಿಗೆ ತಿಳಿಯುವ ರೀತಿಯಲ್ಲಿ ಹೇಳಲು ಪ್ರಯತ್ನಿಸದೇ "ಜಾಣ ಹೆಮ್ಮಕ್ಕಳು ಮನೇ ಬಿಟ್ಟು ಹೊರಗೆ ಬರಕ್ಕಿಲ್ಲ" ಅಂದುಬಿಟ್ಟರು.

ನಾಗುವಿಗೆ ಅದೆಷ್ಟುಮಟ್ಟಿಗೆ ಅರ್ಥವಾಯಿತೋ ಏನೋ. ಅಂತೂ ಅವಳು ಅವತ್ತು ಮನೆಯ ಒಳಕ್ಕೆ ಹೋದದ್ದು. ಅನಂತರ ಜಗಲಿಯ ಮೇಲೆ ನಾಗುವನ್ನು ನೋಡಿದವರು ತೀರ ವಿರಳ. ಅಪ್ಪನ ಮನೆಯ ನಾಲ್ಕು ಗೋಡೆ ಗಳ ಒಳಗೇ ನಾಗುವಿನ ಬಾಲ್ಯ ಜೀವನವೆಲ್ಲ ಕಳೆಯುತ್ತ ಬಂತು. ಅವಳು ತನ್ನ ತಾತನ ಮನೆಗೂ ಹೋಗುತ್ತಿರಲಿಲ್ಲ. ಆ ಮನೆಯವರೇ ಇಲ್ಲಿಗೆ ಬಂದಾಗ ನಾಗುವನ್ನು ನೋಡಿಕೊಂಡು ಹೋಗುತ್ತಿದ್ದರು.

ನಾಗುವಿನ ಹತ್ತನೇ ವರ್ಷದಲ್ಲಿಯೇ ಅವಳು ಮನೆಗೆಲಸಕ್ಕೆ ಬಂದು ಬಿಟ್ಟಳು. ಬೆಳಗ್ಗೆ ಎದ್ದು ಮುಖತೊಳೆದು ಹಣೆಗಿಟ್ಟು, ಪಾತ್ರೆಗಳನ್ನು ತೊಳೆ ದಿಟ್ಟು ಮುದ್ದಪ್ಪನವರ ಶಿವಪೂಜೆಗೆ ಅಣಿಮಾಡಿ, ಹಜಾರವನ್ನು ಗುಡಿಸಿ, ಆಮೇಲೆ ತಲೆ ಬಾಚಿ, ಹಿತ್ತಲಿನಲ್ಲಿ ಬಿಡುವ ಎರಡು ಹೂವನ್ನು ಗಂಟಿನಮೇಲಿ ಟ್ಟರೆ, ಮಧ್ಯಾಹ್ನದ ವರೆಗೂ ಅವಳಿಗೆ ವಿರಾಮ. ಮಧ್ಯಾಹ್ನದಲ್ಲಿ ಅತ್ತೆಯ ಜೊತೆ ಕುಳಿತು ರಾಗಿ ಬೀಸವುದರಲ್ಲಿ ಸಹಾಯಮಾಡಿಕೊಡುವಳು. ಸಂಜೆ ಅತ್ತೆ ಹಾಲು ಕರೆಯಲು ಕುಳಿತರೆ ಕರು ಬಿಡುವಳು. ಹಸು ಕರೆದ ತಕ್ಷಣ 'ಮನೆದೀಪ' ಹಚ್ಚಿ ಅದಕ್ಕೆ ನಾಲ್ಕು ಬಿಲ್ಪತ್ರೆ, ನಾಲ್ಕು ಬಸವನ ಪಾದದ ಹೂಗಳನ್ನಿಟ್ಟು ಕೈಮುಗಿಯುವಳು. ಇದು ನಾಗುವಿನ ಗೃಹಕೃತ್ಯದ ದಿನಚರಿ.

ನಾಗುವಿಗೆ ಹತ್ತು ವರ್ಷ. ಅವಳಿಗೆ 'ಮನೆ ದೀಪ' ಎಟುಕಿಸುತ್ತಿರ ಲಿಲ್ಲ. ಆದರೂ ಮನೆ ದೀಪ ಹತ್ತಿಸಿ ಕೈಮುಗಿಯುವುದು ನಾಗುವಿನ ಗುತ್ತಿಗೆ. ಹಜಾರದ ಕುರ್ಚಿಯನ್ನು ತಂದುಹಾಕಿಕೊಂಡು ತನ್ನ ಆ ಕರ್ತವ್ಯ ವನ್ನು ಪೂರೈಸುತ್ತಿದ್ದಳು. ಆ ದೀಪಕ್ಕೂ ಅವಳೇ ಹಕ್ಕುದಾರಳೆನಿಸಿರಬೇಕು.

ಆದಕ್ಕೇ ಅವಳು ಬಂದು ತನ್ನ ಲಂಗದ ತುದಿಯಲ್ಲಿ ಬೀಸಿ ಅದನ್ನು ಕೆಡಿಸಿ ಕೈಮುಗಿಯುವವರೆಗೂ ಅದು ಖಂಡಿತ ಆರುತ್ತಿರಲಿಲ್ಲ.

೨

ಮುದ್ದಪ್ಪನವರಿಗೆ ಜಗಲೀ ಸ್ನೇಹಿತರೆಂದರೆ ಭಾವೀಹಟ್ಟಿ ಕಪನಯ್ಯನವರು. ಹೆಚ್ಚೂಕಡಮೆ ಮುದ್ದಪ್ಪನವರೂ ಅವರೂ ಒಂದೇ ತರಹದವರು. ಅವರಿಬ್ಬರಲ್ಲೂ ಏನೋ ಒಂದು ವಿಧವಾದ ಬಂಧನ. ಪುಟ್ಟನಂಜಮ್ಮ, ಸಾಯುವುದಕ್ಕೆ ಮೂರು ವರ್ಷಕ್ಕೆ ಹಿಂದಿನ ಆ ಸಮಾಚಾರ ಕೇಳಿದವರಿಗೆ ಅವರಿಬ್ಬರ ಈ ಗಾಢ ಸ್ನೇಹದ ವಿಷಯದಲ್ಲಿ ಮತ್ತಷ್ಟು ಆಶ್ಚರ್ಯಾದರಗಳುಂಟಾಗುತ್ತವೆ.

ಆಗ ಕಪನಯ್ಯ ಮುದ್ದಪ್ಪನವರ ಮಧ್ಯದಲ್ಲಿ ಒಂದು ಹಿಡಿ ನೆಲ್ಲಹುಲ್ಲು ಹಾಕಿದ್ದರೆ ಅದು ಹತ್ತಿಕೊಂಡುಬಿಡುತ್ತಿತ್ತೋ ಏನೊ! ಅಷ್ಟು ಅವರಿಬ್ಬರ ದ್ವೇಷ ಕಾರಣ, ಸರಕಾರಿ ದರಕಾಸ್ತು ಜಮೀನೊಂದು ಮುದ್ದಪ್ಪನವರಿಗಾಗಬೇಕಾಗಿದ್ದದ್ದನ್ನು ಕಪನಯ್ಯನವರು ಶಾನುಭೋಗರ ಮೂಲಕ ಮಾಡಿಕೊಂಡುಬಿಟ್ಟರಂತೆ. ಮುದ್ದಪ್ಪನವರು ಹಾಗೆಲ್ಲ ಕೋಪಿಷ್ಠರಲ್ಲವೇ ಅಲ್ಲ. ಅವರು ಸುಮ್ಮನಿದ್ದುಬಿಟ್ಟರು. ಅಂದರೆ ಕಪನಯ್ಯನವರಲ್ಲೂ ಮಾತನಾಡದೇ ಇದ್ದುಬಿಟ್ಟರು.

ಯಾವಾಗಲೂ ಈ ಮೌನ ಬಹಳ ಕೆಟ್ಟದ್ದು. ಕೂಗಾಡಿ ಹೊಡೆದಾಡಿದ ಜಗಳ ಅಷ್ಟು ದಿನ ನಿಲ್ಲುವುದಿಲ್ಲ. ಈ ದೊಡ್ಡ ದೊಡ್ಡವರು ಮಾತು ಬಿಟ್ಟುಬಿಟ್ಟರೆ ಅಂತಹವರಿಬ್ಬರೂ ಜ್ವಾಲಾಮುಖಿಗಳಾಗುತ್ತಾರೆ. ತಡೆಗಟ್ಟಿ ಕಟ್ಟಿ ಬಾಲ ಕಿತ್ತುಹೋದ ಸರ್ಪಗಳಂತಿರುತ್ತಾರೆ. ಅವರಿಬ್ಬರ ಮಧ್ಯೆ ಬರುವ ಪ್ರತಿಯೊಂದು ಮಾತೂ ನಿಷ್ಠುರವನ್ನು ಕರಗಿಸಿಕೊಂಡು ಬರುತ್ತಿರುತ್ತವೆ.

ಈ ಕದನದಲ್ಲಿ ಮುದ್ದಪ್ಪನವರ ತಪ್ಪೇನೂ ಇಲ್ಲವೆನ್ನುವುದು ದೃಢತಾನೆ. ಆದರೆ ಕಪನಯ್ಯನವರ ಸ್ಥಿತಿ ಹೀಗೆ. ಅವರ ಹದಿನೇಟು ವರ್ಷದ ಮಗಳು ನೀಲಮ್ಮ, ಗಂಡನನ್ನು ಕಳೆದುಕೊಂಡು ಅವರ ಮನೆಗೆ ಬಂದು ಸೇರಿಕೊಂಡಳು. ಅವಳಿಗೆ ಗಂಡನ ಮನೆಯ ಊರಿನಲ್ಲಿ ಸಾಕಾದಷ್ಟು ಆಸ್ತಿ ಇದ್ದರೂ ಮೈದುನರು ಹೆಚ್ಚು ಜನವಿದ್ದುದರಿಂದ ಅವಳ ಜೀವನಾಂಶವೆಂದು ಸಿಕ್ಕುವ ಮೊಬ

ಲಗು ತೀರ ಕಡಮೆಯುದಾಗಿತ್ತು. ಕಪನಯ್ಯನವರು ಹೇಸಿ ಅದನ್ನು ತೆಗೆದು ಕೊಳ್ಳಲಾರದೆ ಬಿಟ್ಟುಬಿಟ್ಟರು. ಮುಂದೆ ಮಾತು ಬರಬಾರದೆಂದು, ತಮ್ಮ ನೆಂಟರ ಜಮೀನೊಂದನ್ನು ನೀಲಮ್ಮನ ಹೆಸರಿಗೆ ಕ್ರಯಕ್ಕೆ ಬರೆಯಿಸಿ, ದರಖಾಸ್ತು ಜಮೀನನ್ನು ನಾಲ್ಕುವರ್ಷ ಸಾಗುವಳಿ ಮಾಡಿ ಆಮೇಲೆ ಅದನ್ನು ಅವರಿಗೆ ಬದಲಾಯಿಸಿಬಿಡುವುದೆಂದು ತೀರ್ಮಾನಿಸಿಕೊಂಡು ಆ ಜಮೀನನ್ನು ದರಖಾಸ್ತಿಗೆ ತೆಗೆದುಕೊಂಡರು.

ಸುಮ್ಮನೆ ಆ ನಾಲ್ಕು ವರ್ಷಗಳು ಕಳೆದುಹೋಗಿದ್ದರೆ ವಿಷಯಗಳು ವಿನಿಮಯವಾಗಿ ಮುದ್ದಪ್ಪ ಕಪನಯ್ಯನವರ ದ್ವೇಷವು ಅಲ್ಲಿಗೇ ನಿಂತುಹೋಗು ತ್ತಿತ್ತು. ಆದರೆ ಅವರ ಜಗಳದ ಎರಡನೇ ವರ್ಷದಲ್ಲಿ ಮತ್ತೊಂದು ಘರ್ಷಣೆ ಯೊದಗಿತು.

ಆಲೇಮನೆ ಸಾಮಾನನ್ನು ಬಾಡಿಗೆಗೆ ಕೊಟ್ಟು ಎಲ್ಲರ ಕಬ್ಬಿನ ಬೆಳೆಗೆ ಒಂದು ಸಾರ್ಥಕತೆ ತೋರಿಸುವವನು ಮರಪ್ಪ. ಅವನ ಹೆಸರೇ ಕೊಪ್ಪ ರಿಗೆ ಮರಪ್ಪ ಅಂತ. ಈಗ ಅವನಿಗೂ ಕಪನಯ್ಯನವರಿಗೂ ಕೊಂಚ ಅಷ್ಟ ರಲ್ಲೇ. ಅವನು ಪಲುಕೂರಿಗೆ ಬಂದರೆ 'ಆಲೆ' ಯಾರೇ ಕಟ್ಟಿರಲಿ ಬಿಡಾರ ಬಿಡುತ್ತಿದ್ದುದು ಕಪನಯ್ಯನವರ ಮನೆಯಲ್ಲಿ, ತಪ್ಪಿದರೆ ಮುದ್ದಪ್ಪನವರ ಮನೆಯಲ್ಲಿ.

ಕಪನಯ್ಯನವರಿಗೆ ಆರು ವರ್ಷದ ತುಂಟ ಮಗನೊಬ್ಬನಿದ್ದಾನೆ. ಚಂದಣ್ಣ ಎಂದರೆ ಆ ಊರಿನ ಯಾವ ಸಮವಯಸ್ಕ ಮಕ್ಕಳಿಗೂ ಹುಲಿ ಎಂದೇ ಅರ್ಥ. ಅವನಿಗೂ ಈ ಕೊಪ್ಪರಿಗೇ ಮರಪ್ಪನಿಗೂ ತುಂಬಾ ವಿಶ್ವಾಸ. ಕಪನಯ್ಯನವರು ಮುದ್ದಪ್ಪ, ಮರಪ್ಪರ ವಿಶ್ವಾಸವನ್ನು ಒಂದೇ ಕಾಲದಲ್ಲಿ ಬಿಟ್ಟುಬಿಟ್ಟಿದ್ದರು.

ಆ ಜಗಳದಿಂದೀಚೆಗೆ ಮರಪ್ಪ ಪಲುಕೂರಿಗೆ ಬಂದೇ ಇರಲಿಲ್ಲ. ಇವತ್ತು ಬಂದು, ಕಪನಯ್ಯನವರ ಮನೆಯ ಮುಂದಿನಿಂದಲೇ ಮುದ್ದಪ್ಪನವರ ಮನೆ ಗೆಂದು ಹೊರಟ. ಚಂದಣ್ಣ ಬೀದಿಯಲ್ಲಾಡುತ್ತಿದ್ದನು. ಮರಪ್ಪನನ್ನು ನೋಡಿ ದೊಡ್ಡ ಕಣ್ಣು ಬಿಟ್ಟು 'ಮರಣ್ಣಾ ಬಂದ್ಬುಟ್ಯಾ' ಅಂದವನೇ ಅವನ ಕಿರುಬೆರಳು ಹಿಡಿದು ಮಾತಾಡಿಕೊಂಡು ನಡೆದೇ ಬಿಟ್ಟ. ಚಂದಣ್ಣ, ಮರಪ್ಪನನ್ನು ತಮ್ಮ ಮನೆಯ ಕಡೆಗೆ ಎರಡು ಮೂರು ಬಾರಿ ಎಳೆದನು ಆದರೆ

ಚಂದಣ್ಣನಿಗಿಂತ ಮರಪ್ಪನ ಮನಸ್ಸು ವಯಸ್ಸು ಎರಡೂ ದೊಡ್ಡವು. ಚಂದಣ್ಣನೇ ಮರಣ್ಣನನ್ನು ಹಿಂಬಾಲಿಸಬೇಕಾಯಿತು. ಮುದ್ದಪ್ಪನವರ ಮನೆಯಲ್ಲಿ ಮರಪ್ಪನಿಗೆ ಊಟಕ್ಕೆ ನೀರು ಕೊಟ್ಟಾಯಿತು. ಮುದ್ದಪ್ಪನವರು, ಜೊತೆಯಲ್ಲಿದ್ದ ಚಂದುವನ್ನು 'ನೀನೂ ಈಸ್ಕೊ ಚಂದು' ಅಂದರು. ಪುಟ್ಟನಂಜಮ್ಮನೇ ಚಂದಣ್ಣನ ಕೈಕಾಲು ತೊಳೆದು ಊಟದ ಮನೆಗೆ ಕರೆದುಕೊಂಡು ಹೋದರು. ಒಳಗೆ ಮರಪ್ಪ, ಚಂದಣ್ಣ ಊಟಮಾಡುತ್ತಿದ್ದರು. ಪುಟ್ಟನಂಜಮ್ಮ ಅಡಿಗೆಮನೆಯ ಬಾಗಿಲಿಗೆ ಒರಗಿ ನಿಂತಿದ್ದಳು. ಮುದ್ದಪ್ಪನವರು ಹಜಾರದ ಕಡೆ ಬಾಗಿಲಲ್ಲಿ ನಿಂತು ಮರಪ್ಪನೊಡನೆ ಮಾತಾಡುತ್ತಿದ್ದರು.

"ಕಡೆಗೂ ಸಿದ್ದ ಆಲೆ ಕಟ್ಟಿದನಾ? ನೂರೈವತ್ತು ಮೈಲಿ ಆಚೆ ಇದ್ರೂ ಪರವಾಗಿಲ್ಲ– 'ಪ್ಯಾಕ್ಟ್ರಿ' ಗೇ ನನ್ನ ಕಬ್ಬು ಹೊಡೆದುಬಿಡ್ತೀನಿ ಅಂತಿದ್ನಲ್ಲಾ!"

"ಸರಿ, ಸರಿ, ಮಂಡ್ಯ ಯಾವೂಲೆ ಅಂದರೆ ಗೊತ್ತಿಲ್ದೋರೆಲ್ಲ ಪ್ಯಾಕ್ಟರೀಗೇ ಕಬ್ಬು ಹೊಡೆಯೋರು, ಸುಮ್ನಿರಿ!"

"ಅದಿರಲಿ, ಅದ್ಯಾಕೆ ನಿನ್ನ ಮೇಲೆ ಎಲ್ಲರಿಗೂ ಕ್ಪಾಪ!"

"ತಗ್ಗಿ ನಡೀತಾ ಇರೋ ಹೊತ್ಗೆ! ಬಡ ತಮಡೀ, ಕಂಡರೆ ಬಿಲಪತ್ರೆ 'ಬುಸ್' ಅಂತಂತೆ."

ಸಾರು-ಅನ್ನ ತೀರಬೇಕಾದರೆ ಇನ್ನೂ ಮೂರು ನಾಲ್ಕು ತುತ್ತಿದೆ. ಅಷ್ಟು ಹೊತ್ತಿಗೆ ಸರಿಯಾಗಿ ಬೀದಿಯ ಬಾಗಿಲಿಗೆ ಯಾರೋ ಬಂದಹಾಗಾಯಿತು. ಮುದ್ದಪ್ಪನವರು ಮಾತು ನಿಲ್ಲಿಸಿ, ಮುಂಬಾಗಿಲ ಕಡೆಗೆ ಬಂದರು. ಕಪನಯ್ಯನವರು! ರೌದ್ರಾವೇಶದಿಂದ ಚಂದಾ! ಚಂದಾ!! ಎಂದು ಕೂಗಿಕೊಳ್ಳುತ್ತಿದ್ದಾರೆ. ಊಟಮಾಡುತ್ತಿದ್ದ ಚಂದಣ್ಣನು ಅಲ್ಲೇ ಇಲಿಯಷ್ಟು ಸಣ್ಣಗಾಗಿ ಹೋದನು. ಮುಂದಿನ ತುತ್ತನ್ನು ಎತ್ತಲೇ ಇಲ್ಲ. ಪುಟ್ಟನಂಜಮ್ಮ 'ಊಟಮಾಡಿಕೊ' ಅಂದರು. ಚಂದಣ್ಣನಿಗೆ ಧೈರ್ಯ ಸಾಲದು. ಅವನಿಗೆ ಕೈ ತೊಳೆಯುವುದಕ್ಕೂ ತೋಚಲಿಲ್ಲ. ಎಂಜಲು ಕೈಯಲ್ಲೇ ಎದ್ದು ಬಂದನು ಅಗುಳುಗಳಂಟಿದ್ದ ಚಂದಣ್ಣನ ಕೈ, ಕಪನಯ್ಯನವರನ್ನು ಮತ್ತಷ್ಟು ಕೆರಳಿಸಿತು. ಅವನು ಬೀದಿಗಿಳಿದುದೇ ತಡ, 'ಮೂದೇವಿ' ಎಂಬ ಮಾತಿನ ಜೊತೆಗೆ ಬಲವಾದ ಒಂದು ಒತ್ತು ಬಿದ್ದಿತು. ಚಂದಣ್ಣ ಹಾರಿಹೋಗಿ 'ಅಮ್ಮಾ'

ಎಂದು ಬಿದ್ದನು. ಮುಂಗೈ ಮುಂಡಿಗಳು ತರೆದುಹೋದುವು. ಕಪನಯ್ಯ ನವರೇ ಎತ್ತಿ, ನಿಂತವನಿಗೆ ನಾಲ್ಕು ಬಿಗಿದರು. ಮುದ್ದಪ್ಪನವರಿಗೆ ಮರಣ ಸಂಕಟವಾಯಿತು. ಮರಪ್ಪನೂ ಸದ್ದು ಕೇಳಿ ಈಚೆಗೋಡಿಬಂದಿದ್ದನು. ಮುದ್ದಪ್ಪನವರೂ ಮರಪ್ಪನೂ, ಒಬ್ಬರೊಬ್ಬರ ಮುಖನೋಡಿಕೊಂಡರು, ಅಷ್ಟೆ.

ಇದು ಮುದ್ದಪ್ಪ, ಕಪನಯ್ಯನವರ ದ್ವೇಷಕ್ಕೆ ಕೂಡಿಕೊಂಡಿತು. ಇದು ತೀರಬೇಕಾಗಿದ್ದರೆ ಪುಟ್ಟನಂಜಮ್ಮ ಸಾಯಬೇಕಿತ್ತೋ ಏನೊ. ಅಂತೂ ಪುನಃ ಇವರಿಬ್ಬರ ಸ್ನೇಹ ಕೂಡಿಕೊಳ್ಳಲು ಸತ್ತ ಪುಟ್ಟನಂಜಮ್ಮ, ಅಂದು ಏಟು ತಿಂದ ಚಂದಣ್ಣನೇ ಬರಬೇಕಾಯಿತು.

ಪುಟ್ಟನಂಜಮ್ಮನು ಹಿಂದಿನ ರಾತ್ರಿಯೇ ಸತ್ತುಹೋಗಿದ್ದಳು. ಅಂದು ಬೆಳಗ್ಗೆ ಶವವನ್ನು ತೆಗೆದುಕೊಂಡು ಹೊರಟಿದ್ದರು. ಊರಿಗೆ ಊರೇ ಪುಟ್ಟ ನಂಜಮ್ಮನನ್ನು ನೆನೆಸಿಕೊಳ್ಳುತ್ತಿತ್ತು. ಅದೇ ಬೀದಿಯ ಹೆಂಗಸರು ತಲೆ ಬಾಗಿಲಲ್ಲಿ ನಿಂತು ಮುದ್ದಪ್ಪನವರ ಮನೆಯ ಕಡೆಗೇ ನೋಡುತ್ತ ನಿಂತಿದ್ದರು. ಊರಿನ ಎಲ್ಲ ಸಂಸಾರಗಳಿಗೂ ಏನೋ ಒಂದನ್ನು ಕಳೆದುಕೊಂಡಂತೆ ತೋರುತ್ತಿತ್ತು.

ಕಪನಯ್ಯನವರಿಗೂ ಜೀವ ನಿಲ್ಲದು. ಆದರೆ ಮನಸ್ಸು ಬಿಡದು. ಊರಿಗೆ ಊರೇ ಹೋಗುತ್ತಿರುವಾಗ, ತಾವು ಮನೆಯಲ್ಲಿ ಅಡಗಿ ಕುಳಿತಿರು ವಷ್ಟು ಅಪರಾಧವನ್ನೇನೂ ಮುದ್ದಪ್ಪ ಮಾಡಿಲ್ಲವೆನ್ನಿಸಿತು. ಅಲ್ಪ ಸ್ವಾಭಿ ಮಾನ ಮಾತ್ರ ಅವರನ್ನು ಇನ್ನೂ ಅವರ 'ರೂಮಿ' ನಲ್ಲೇ ಬಿಟ್ಟಿದೆ.

ಚಂದಣ್ಣ ಓಡಿಬಂದನು. ರೂಮಿನಲ್ಲಿ ಒಂದು ದಿಂಬನ್ನು ಮೆಲ್ಲನೆ ಗುದ್ದುತ್ತಾ ಕಪನಯ್ಯನವರು ಯೋಚಿಸುತ್ತಿದ್ದಾರೆ. ಬಂದವನೇ ಚಂದಣ್ಣ "ಅಣ್ಣಾ! ಅತ್ತೇ ಸತ್ತೋದರು. ನೀ ಯಾಕಣ್ಣಾ ಹೋಗೊಲ್ಲ. ಹೋಗಣ್ಣ" ಅಂದನು. ಕಪನಯ್ಯನವರಿಗೆ ರಕ್ತದ ಒತ್ತಡ ಹೆಚ್ಚಾಯಿತು. ಚಂದಣ್ಣ, ಕಪನಯ್ಯನವರನ್ನು ಎಳೆದುಕೊಂಡು ಬಂದು ಬೀದಿಯ ಬಾಗಿಲಲ್ಲಿ ಬಿಟ್ಟನು. ಕಪನಯ್ಯನವರಿಗೆ ಇಷ್ಟವಿಲ್ಲದಿದ್ದರೆ ಅವನೆಲ್ಲಿ ಎಳೆದುಕೊಂಡು ಬರುವುದು.

ಮುದ್ದಪ್ಪನವರ ಮನೆ ಗೋಳಾಡುತ್ತಿತ್ತು. ಜಗಲಿಯ ಕಂಬವೊಂದ ನ್ನೊರಗಿ ಮುದ್ದಪ್ಪನವರು ಚೌಕದ ಮುಸುಕಿನೊಳಗಿಂದ ಶೂನ್ಯದೃಷ್ಟಿಯಲ್ಲಿ

'ಕುರ್ಜ' ನ್ನೇ ನೋಡುತ್ತಿದ್ದರು. ತಟ್ಟನೆ ಕುರ್ಜಿಗೆ ಹೂವನ್ನು ಅಲಂಕರಿಸುತ್ತಿದ್ದ ಎರಡು ಕೈಗಳ ಮೇಲೆ ಅವರ ಗಮನ ಹೋಯಿತು. ಅವು ಕಪನಯ್ಯನವರವು. ಒಳಗೆ ತಿಂಗಳ ಕೂಸು ಅಳುವುದಕ್ಕೆ ಮೊದಲುಮಾಡಿತು. ಪುಟ್ಟನಂಜಮ್ಮ ಬೀದಿಯ ಬಾಗಿಲಲ್ಲಿ ನಿಶ್ಚೇಷ್ಟಿತೆಯಾಗಿ ಮಲಗಿದ್ದಾಳೆ. ಅವಳ ಕೂಗು ಅವಳಿಗೆ ಕೇಳಿಸದು. ಇದೆಲ್ಲ, ದುಃಖವನ್ನು ತಡೆದುಕೊಂಡಿದ್ದ ಮುದ್ದಪ್ಪನವರನ್ನು ನಡುಗಿಸಿದುವು ಬರುವುದಿಲ್ಲವೆಂದುಕೊಂಡಿದ್ದ ಕಪನಯ್ಯನವರೂ ಬಂದರು. ಅವರನ್ನು ನೋಡಿ ಮುದ್ದಪ್ಪನವರು ಹೆಂಗಸರಿಗಿಂತ ಹೆಚ್ಚಾಗಿ ಅತ್ತುಬಿಟ್ಟರು. ಕಪನಯ್ಯನವರ ಕಣ್ಣುಗಳಲ್ಲೂ ನೀರಾಡತೊಡಗಿತು. ಕಪನಯ್ಯನವರು ಓಡಿಹೋಗಿ ಮುದ್ದಪ್ಪನವರ ಕೈಗಳನ್ನು ಹಿಡಿದುಕೊಂಡರು. ಮುದ್ದಪ್ಪನವರು ಬಿಕ್ಕಳಿಸಿ ಬಿಕ್ಕಳಿಸಿ ಕಪನಯ್ಯನವರ ಎದೆಯಮೇಲೆ ತಮ್ಮ ತಲೆಯನ್ನಿಟ್ಟು ಅತ್ತರು.

ಪುಟ್ಟನಂಜಮ್ಮ ಸತ್ತು ಇವರಿಬ್ಬರನ್ನೂ ಸೇರಿಸಿದಹಾಗಾಯಿತು.

ಕಪನಯ್ಯ ಮುದ್ದಪ್ಪನವರು ಸ್ನೇಹಿತರಾದರು. ತಮ್ಮ ಯುದ್ಧಗಳಲ್ಲಿ ತಮತಮಗಾದ ಮನೋಸ್ಥಿತಿಯನ್ನು ತಮತಮಗೇ ತಿಳಿಸಿಕೊಂಡರು. ಈಗ ಯಾವಾಗ ನೋಡಿದರೂ ಅವರಿಬ್ಬರೇ ಜೊತೆ. ಒಬ್ಬರ ಜಮೀನಿನ ಕೆಲಸ ಇನ್ನೊಬ್ಬರು ಮಾಡುತ್ತಿರುವುದನ್ನು ಊರಿನ ಎಲ್ಲರೂ ನೋಡಿದ್ದಾರೆ. ಇಂಥದರಲ್ಲಿ ಹದಿನಾರು ವರ್ಷದ ಚಂದಣ್ಣನಿಗೆ ಹತ್ತುವರ್ಷದ ನಾಗುವನ್ನು ಕೊಟ್ಟು ಮದುವೆ ಮಾಡುವುದರಲ್ಲಿ ಅಡ್ಡಿಯೇನಿದೆ?

ಎಳೆತನದಲ್ಲೇ ಚಂದಣ್ಣ ಪುಟ್ಟನಂಜಮ್ಮನನ್ನು ಅತ್ತೇ ಎಂದೂ ಮುದ್ದಪ್ಪನವರನ್ನು ಮಾವನೆಂದೂ ಕರೆಯುತ್ತಿದ್ದುದು ಅವನಿಷ್ಟ. ಮದುವೆ ಎನ್ನುವ ಪದಕ್ಕೆ ಅರ್ಥ ತಿಳಿಯುವ ಮೊದಲೇ ಚಂದಣ್ಣ ಆಗಾಗ್ಗೆ ಮುದ್ದಪ್ಪನವರನ್ನು 'ಮಾವ ನನಗೆ ಮದುವೆ ಯಾವಾಗ ಮಾಡಿಸ್ತೀಯೆ?' ಎಂದು ಕೇಳಿಕೊಂಡೇ ಬಂದಿದ್ದಾನೆ. ಈ ಮದುವೆ ಪ್ರಸ್ತಾಪ ಬಂದಾಗ ಮಾತ್ರ ಕಪನಯ್ಯನವರಿಗೆ ನಗು, ಮುದ್ದಪ್ಪನವರಿಗೆ ಸಂತೋಷ, ನಾಗುವಿಗೆ ನಾಚಿಕೆಯಾಗುತ್ತಿತ್ತೇ ವಿನಾ ಯಾರ ಮನಸ್ಸಿನಲ್ಲೂ ಈ ವಿಷಯ ಹೆಚ್ಚು ಹೊತ್ತು ನಿಲ್ಲುತ್ತಿರಲಿಲ್ಲ. ಚಿಕ್ಕಂದಿನಿಂದಲೂ ಅದೇ ಸುದ್ದಿ ಆಡಿಕೊಂಡು ಬಂದ

ಚಂದಣ್ಣ ನಾಗುವನ್ನೇ ತಾನು ಮದುವೆಯಾಗುವೆನೆಂಬ ನಂಬಿಕೆಯನ್ನು ಮಾತ್ರ ಇಟ್ಟುಕೊಂಡಿದ್ದಾನೆ.

ಮುದ್ದಪ್ಪನವರಿಗೂ ಚಂದಣ್ಣನನ್ನು ಕಂಡರೆ ತುಂಬಾ ಇಷ್ಟ. ಈಗ ಚಂದಣ್ಣನಿಗೆ ಮದುವೆಯೆನ್ನುವುದರಲ್ಲಿ ನಾಚಿಕೆ ಬಂದು ಆ ವಿಷಯ ಎತ್ತುತ್ತಿರಲಿಲ್ಲ. ಒಂದೊಂದು ಸಾರಿ ಮುದ್ದಪ್ಪನವರಿಗೆ ಈ ಮದುವೆಯ ವಿಷಯ ಯೋಚನೆಗೆ ಬರುತ್ತದೆ. ನಾಗು-ಚಂದಣ್ಣರ ಜೋಡಿ, ತಮ್ಮ-ಪುಟ್ಟನಂಜಮ್ಮನ ಜೋಡಿಯಂತೆಯೇ ಆಗುತ್ತದೆ ಎಂಬುದು ಅವರ ನಿಜವಾದ ನಂಬಿಕೆ. ಚಂದಣ್ಣನಿಗೆ ನಾಗುವನ್ನು ಕಂಡರೆ ತುಂಬಾ ಆಸೆ, ಎನ್ನುವುದೂ ಅವರಿಗೆ ಗೊತ್ತಿದೆ ನಾಗುವನ್ನು ಕಂಡರೆ ಪ್ರಾಣಬಿಡಿಸಿಕೊಳ್ಳುವ ಮುದ್ದಪ್ಪನವರಿಗೆ ಅವಳು ಸುಖವಾಗಿರುವುದು ಬೇಡವೆ? ಕಪನಯ್ಯನವರ ಬಾಯಿಯಲ್ಲಿ ಈ ಮಾತು ಬಂದಾಗ ನೋಡಿಕೊಳ್ಳೋಣವೆಂದು ಸುಮ್ಮನಿದ್ದುಬಿಟ್ಟದ್ದಾರೆ ಮುದ್ದಪ್ಪ.

ಹೊಲಕ್ಕೆ ಊಟ ತೆಗೆದುಕೊಂಡು ಹೋಗುವುದು ತಪ್ಪು ಎಂದಾಗ ನಾಗು ಹಟಮಾಡಲಿಲ್ಲ. ಬೀದಿಯಲ್ಲಿ ಆಡಕೂಡದು ಎಂದಾಗ ಅವಳು ಹಟಮಾಡಲಿಲ್ಲ. ಅಂಥವರಲ್ಲಿ ನಾಗು ಯಾವುದಕ್ಕೂ ಇನ್ನು ಹಟಮಾಡುವುದೇ ಇಲ್ಲ, ಎಂದು ಎಲ್ಲರೂ ಬಲ್ಲರು. ಹೆಂಗಸು ಪರಾವಲಂಬಿ ಎನ್ನುವ ವಿಷಯವು ನಾಗುವಿಗೆ ಯಾರು ಹೇಳಿದ್ದರೊ! ಅಷ್ಟು ಕಠಿನವಾದ ನಿಜಸ್ಥಿತಿಯು ಅವಳಿಗೆ ತಿಳಿಯಬೇಕಾದರೆ ಅವಳು ಹೆಂಗಸೇ? ಅಲ್ಲ-ಇನ್ನೂ ಹುಡುಗಿ. ಆದರೂ ಏಕೋ ಅಪ್ಪ, ಅತ್ತೆಯವರನ್ನು ಮೀರಿ ನಡೆಯಕೂಡದೆಂಬ ಒಂದು ತೀರ್ಮಾನ ಅವಳಲ್ಲಿ ನೆಲಸಿಬಿಟ್ಟಿದೆ.

ಮುದ್ದಪ್ಪನವರ ಅಕ್ಕನಿಗೆ ನಾಗುವನ್ನು ಕಂಡರೆ ಫೋಟೋದಲ್ಲಿಯ ಕೃಷ್ಣನನ್ನು ಕಂಡಹಾಗಾಗುತ್ತಿತ್ತಂತೆ. ಆದರೂ ಹೆಣ್ಣುಮಕ್ಕಳನ್ನು ಹೊಗಳಬಾರದಂತೆ. ಅದು ಅವರ ಅನುಭವದ ಫಲ. ಎಂದರೆ, ನಾಗುವಿನ ಪರೋಕ್ಷ ಅವರಿಗೆ ಅವಳನ್ನು ಕಂಡರೆ ತುಂಬ, ತೀರ ಪ್ರೀತಿ. ನಾಗುವು ಈಚೀಚೆಗೆ, ಹೋದ ಪುಟ್ಟನಂಜಮ್ಮನಷ್ಟೇ ಕೆಲಸಗಾತಿಯಾಗಿಬಿಟ್ಟಿದ್ದಾಳೆ. ಇನ್ನೆರಡು ದಿನ ಹೋದರೆ ತನ್ನ ಅತ್ತೆಯ ಸಮಕ್ಕೇ ದುಡಿಯುವುದಕ್ಕೆ ಅಡ್ಡಿ ಏನೂ ಇಲ್ಲ ಇದನ್ನೆಲ್ಲಾ ನೋಡಿದರೆ ಮುದ್ದಪ್ಪನವರ ಅಕ್ಕನಿಗೆ, ಪುಟ್ಟನಂಜಮ್ಮನೇ ನಾಗುವಿನ ರೂಪದಲ್ಲಿ ತಮ್ಮ ಋಣ ತೀರಿಸುತ್ತಿರುವಳೆಂದೆನ್ನಿಸುತ್ತದೆ. ಆಗ

ಅವರಿಗೆ ಪುಟ್ಟನಂಜಮ್ಮ, ನಾಗು, ಇಬ್ಬರ ಮೇಲೂ ಕನಿಕರ ಬರುತ್ತದೆ. ಅಪ್ಪನ ಮನೆಯಲ್ಲೂ ಆ ಚಿಕ್ಕ ಹುಡುಗಿ ಏಕೆ ದುಡಿಯಬೇಕೆಂದು ಅವರೇ ನಾಗುವಿನ ಕೈತಡೆಯುತ್ತಾರೆ. ನಾಗುವಿಗನ್ನಿಸದಿದ್ದರೂ ನಾಗುವು ತಾಯಿಲ್ಲದ ತಬ್ಬಲಿಯಲ್ಲಾ ಎಂದೆನಿಸಿದಾಗಲೆಲ್ಲಾ ಅವರು ಗಟ್ಟಿಯಾಗಿ ಅತ್ತೇಬಿಡುತ್ತಾರೆ.

ನಾಗುವು ಹೆಚ್ಚು ಮಾತನಾಡುವುದಿಲ್ಲ. ಸಾಮಾನ್ಯವಾಗಿ ಪ್ರಶ್ನೆಗೆ ಉತ್ತರಗಳನ್ನೂ ಹೆಚ್ಚಾಗಿ ಕೊಡುತ್ತಿರಲಿಲ್ಲ. ಇದು ಮುದ್ದಪ್ಪನವರ ಅಕ್ಕನಿಗೆ ಬಲು ಮೆಚ್ಚಿಗೆಯ ಗುಣ. ಅವರು ಯಾರು ಏನೇ ಮಾಡಲಿ, ಹಿಂದಕ್ಕೆ ತಿರುಗಿಕೊಂಡು, ಮಾತನಾಡದೆ ತಲೆ ತಗ್ಗಿಸಿಕೊಂಡಿದ್ದರೆ ಅವರನ್ನು ಕ್ಷಮಿಸಿಬಿಡುತ್ತಿದ್ದರು. ನಾಗುವು ತಪ್ಪನ್ನೂ ಮಾಡದೇ ಎದುರುತ್ತರವನ್ನೂ ಕೊಡದಿದ್ದುದರಿಂದ ನಾಗುವೆಂದರೆ ಅವರತ್ತಿಗೆ ತುಂಬಾ ಹೆಮ್ಮೆ.

ಇಷ್ಟು ದಿನವೂ ಮುದ್ದಪ್ಪನವರಿಗೆ ನಾಗುವಿನ ಚಿಂತೆ ಇರಲಿಲ್ಲ. ಅವಳಿಗೆ ಹತ್ತು ವರ್ಷವಾದಮೇಲೆ ಅವಳು ತಮ್ಮ ಮನೆ ಬಿಟ್ಟುಹೋಗುವ ದಿನಗಳನ್ನೇ ಕುರಿತು ಯೋಚಿಸುತ್ತಿರುತ್ತಾರೆ. ಪುಟ್ಟನಂಜಮ್ಮ, ನಾಗುವನ್ನು ಮುದ್ದಪ್ಪನವರ ಕೈಲಿಡದೇ ಹೋಗಿದ್ದರೆ, ಮುದ್ದಪ್ಪನವರು ಬದುಕುತ್ತಿರಲೇ ಇಲ್ಲ. ಈಗ ನಾಗುವೂ ಅವರಿಂದ ದೂರವಾಗಬೇಕಾಗುತ್ತದೆ. ಅನಂತರ ದಿನಗಳನ್ನು ತಳ್ಳುವುದು ಹೇಗೆ ಎಂಬುದೇ ಅವರು ತಮ್ಮ ವಿಧಿಯ ಮುಂದೆ ಹಾಕಿಕೊಳ್ಳುತ್ತಿದ್ದ ಘೋರವಾದ ಪ್ರಶ್ನೆ.

ಚಂದಣ್ಣನ ಯೋಚನೆ ಬಂದಾಗಲೂ ಮುದ್ದಪ್ಪನವರು ನಾಗುವಿನ ಯೋಚನೆಯನ್ನೇ ಹೆಚ್ಚಾಗಿ ಮಾಡುತ್ತಿದ್ದರು. ಚಂದಣ್ಣನಿಗೇ ನಾಗುವನ್ನು ಕೊಟ್ಟುಬಿಟ್ಟರೆ, ಕೊನೆಯಪಕ್ಷ ನಾಗು, ಕಣ್ಣೆದುರಿಗೆಯಾದರೂ ಇರುತ್ತಾಳೆ. ಬೇರೆ ಊರಿಗೆ ಕೊಟ್ಟುಬಿಟ್ಟರೆ ತಮ್ಮ ನಾಗುವನ್ನು ನಾಲ್ಕು ತಿಂಗಳಿಗಾದರೂ ಒಮ್ಮೆ ನೋಡಬಹುದೋ ಅಥವಾ ಇಲ್ಲವೇ ಇಲ್ಲವೋ!

ಮುದ್ದಪ್ಪನವರು ಊಟ ಮುಗಿಸಿ ಹಜಾರದ ಕಾಗಡಿಯಮೇಲೆ ಕುಳಿತಿದ್ದರು. ಅವರು ಕುಳಿತ ಭಾರಕ್ಕೋಸ್ಕರ ಕಾಗಡಿ ಸ್ವಲ್ಪ ತೂಗಾಡುತ್ತಿತ್ತು. ಎಲೆ ಅಡಕೆ ಹಾಕಿಕೊಳ್ಳೋಣವೆನಿಸಿತು.

“ ನಾಗು, ಒಂದಷ್ಟು ಎಲೆ ಅಡಕೆ ಸುಣ್ಣ ತಗಂಡು ಬಾಮ್ಮ” ಎಂದರು. ನಾಗು ಸಾಧ್ಯವಾದಷ್ಟು ಬೇಗನೆ ಎಲೆ ಅಡಕೆಯನ್ನು ತಂದುಕೊಟ್ಟಳು.

"ಸುಣ್ಣ!" ಎಂದರು ಮುದ್ದಪ್ಪನವರು. ನಾಗು 'ತಂದು ಕೊಡ್ತೀನಿ, ಎಲೆ ಅಡಕೆ ಸುಣ್ಣ ಒಟ್ಟಿಗೆ ತರಕೂಡದು' ಅಂದಳು. ತಮಗೇ ಜ್ಞಾಪಕಕ್ಕೆ ಬರದ ಪದ್ಧತಿಯೊಂದನ್ನು ನಾಗುವು ಗಮನದಲ್ಲಿಟ್ಟುಕೊಂಡಿರುವುದನ್ನು ನೋಡಿ ಮುದ್ದಪ್ಪನವರಿಗೆ ಬಹಳ ಸಂತೋಷವಾಯಿತು. ನಾಗುವನ್ನು ಕರೆದರು. ಅವಳು ಬಂದು ಅವರ ಮುಂದಿಯೊನ್ನೊರಗಿ ನಿಂತಳು.

"ನಾಗು, ಎಷ್ಟು ಬುದ್ಧಿವಂತೆಯೇ ನೀನು! ಎಲ್ಲಾದರೂ ನನಗಿಂತ ಮುಂಚೆ ನೀನು ಸತ್ತು ಗಿತ್ತು ಹೋದೀಯೆಮ್ಮ" ಎಂದರು.

"ಅದ್ಯಾಕಪ್ಪಜ್ಜೀ" ಎಂದಳು ನಾಗು.

"ನಿನ್ನ ರೂಪು, ನಿನ್ನ ಬುದ್ಧಿ ಎರಡೂ ನೋಡಿ ನನಗ್ಯಾಕೊ ಹಂಗನ್ನ ಸ್ತದೆ. ನಿನ್ನ ಅಮ್ಮನ್ಹಂಗೆ ನೀನೂ ಕೈ ಗಿಯ್ ಕೊಟ್ಟುಬಿಟ್ಟೀಯಾ!"

ನಾಗು, ಅರ್ಥವಾಗದ ಒಂದು ನಗು ನಕ್ಕುಬಿಟ್ಟಳು.

ಮುದ್ದಪ್ಪನವರು ಮುಂದೆ ಈ ಪ್ರಶ್ನೆ ಹಾಕಿದುದು ನಿಜ. ಆದರೆ ಯಾರೂ ಅಷ್ಟು ಚಿಕ್ಕ ಹುಡುಗಿಯ ಮುಂದೆ ಗಂಭೀರವಾದ ಪ್ರಶ್ನೆ ಹಾಕು ತ್ತಿರಲಿಲ್ಲ.

"ನಾಗು, ಚಂದೂನ ಮದುವೆಯಾಯ್ತೀಯಾ?"

ನಾಗು ಇದನ್ನು ಹುಡುಗಾಟವೆಂದು ತಿಳಿದುಕೊಂಡಿದ್ದು ತಪ್ಪೆ!

"ಮದುವೆಯಾಗಬೇಕು?" ಎಂದು ಎದುರು ಪ್ರಶ್ನೆ ಹಾಕಿದಳು.

"ನಿನಗವೆಲ್ಲ ತಿಳಿಯದು ನಾಗು, ಗಂಡಸೇ ಆಗಲಿ ಹೆಂಗಸೇ ಆಗಲಿ ಹುಟ್ಟಿದವೇಲೆ ಮದುವೆ ಆಗಲೇಬೇಕು ನೀನು ಹೆಂಗಸು—ನೀನು ಚಂದೂನ ಮದುವೆ ಆಗ್ತೀಯಾ?" ಎಂದು ಮುದ್ದಪ್ಪನವರು ಪುನಃ ಕೇಳಿದರು.

"ಹಾಗಾದರೇ........ಮದ್ವೆ ಆಗ್ಲೇಬೇಕು ಅಂತಾ ಆದರೆ ಯಾರಾದ್ರೂ ಒಬ್ರನ್ನಾಗೋದು. ಈಗ್ನಿಂದೇನು ಅದಕ್ಕೇ?" ಎಂದು ಸುಲಭವಾಗಿ ಹೇಳಿ ಬಿಟ್ಟಳು.

ಮುದ್ದಪ್ಪನವರಿಗೆ ತೃಪ್ತಿಯಾಗಲಿಲ್ಲ. ಪುನಃ ಏನನ್ನೋ ಕೇಳುತ್ತಿದ್ದರು. ಆದರೆ ಅಷ್ಟರಲ್ಲೇ ನಾಗುವು ಅತ್ತೆ ಕೂಗಿದರೆಂದು ಹೊರಟು ಹೋದಳು. ಕೊಟ್ಟಿಗೆಯಲ್ಲಿ ಯಾವುದೋ ಎಮ್ಮೆಕರು ನರಲುತ್ತಿತ್ತು. ಅದೇನು ನೋಡೋಣವೆಂದು ಮುದ್ದಪ್ಪನವರೂ ಹೋದರು.

ನೀಲೀ ರೇಷ್ಮೆಯ ತುಂಬು ನಿರಿಯ ಲಂಗಕ್ಕೆ ಕಲಾಪತ್ತು ಅಂಚಿಳಿದಿದೆ. ಆಗಸ ನಿನ್ನೆ ತಾನೆ ತಂದುಕೊಟ್ಟು ಹೋಗಿದಾನೆ. ಅದೇಕೋ ನಾಗು ಅನುಮಾನಿಸುತ್ತಿದ್ದಾಳೆ. ಅತ್ತೆಯನ್ನು ಕೇಳಿ ರೋಜಾ ವೈದಾನ, ಕಪ್ಪು ಸೆರಗಿನ ಆ ಧರ್ಮಾವರದ ಸೀರೆಯನ್ನೂ ತಂದಿಟ್ಟುಕೊಂಡಿದ್ದಾಳೆ. ಅವಳಿಗೀಗ ಒಂದು ದೊಡ್ಡ ಸಮಸ್ಯೆ. 'ಸೀರೆ ಉಡಲೇ—ಲಂಗವೇ ಸಾಕೆ?'

ಬಿದಿರಟ್ಟೆಯಲ್ಲಿ ಮದುವೆ. ಬಿದಿರಟ್ಟೆ, ನಾಗುವಿನ ಸೋದರತ್ತೆಯ ಗಂಡನ ಮನೆ. ಅತ್ತೆಯ ಗಂಡ ಸತ್ತುಹೋಗಿದ್ದರೂ, ಬಿದಿರಟ್ಟೆಯ ನೆಂಟಸ್ತನ ಹಳೆಮರಸಿ ಹೋಗಲಿಲ್ಲ. ಅವರ-ಇವರ ಸಂಬಂಧವು ಅಚ್ಚಳಿಯದೇ ಇದೆ. ನಾಳೆ ಶುಕ್ರವಾರ ಧಾರೆ. ಬುಧವಾರದ ದಿನ ಸ್ತಂಭಮುಹೂರ್ತ. ಅಲ್ಲಿಗೆ ಹೋಗದಿದ್ದರಾಗುತ್ತದೆಯೇ? ನಾಗು, ಅತ್ತೆ, ಇಬ್ಬರೂ ಹೊರಟಿದ್ದರು. ವಿಧಿಯಿಲ್ಲದೇ ಮುದ್ದಪ್ಪನವರು ಪಲುಕೂರಿನಲ್ಲೇ ಇಲ್ಲಬೇಕಾಯಿತು.

ಅದೇ ಪ್ರಯಾಣಕ್ಕೆ ನಾಗು ಸಿದ್ಧತೆಗಳನ್ನು ನಡಸುತ್ತಿದ್ದದ್ದು. ಅತ್ತೆಯ ಸೀರೆ ಬಟ್ಟೆಗಳು, ತನ್ನವು ಎಲ್ಲವನ್ನೂ ಸೇರಿಸಲು ಅಲ್ಲಿಂದಿಲ್ಲಿಗೆ ಅಲೆದಾಡುತ್ತಿರುವಾಗ ಹಜಾರದ ಮರದ ಪೆಟಾರಿಯ ಕೆಳಗೆ ಬೀಗದ ಕೈಯನ್ನು ಹುಡುಕ ಬೇಕಾಯಿತು. ಪುನಃ ನಾಗು ಎದ್ದಾಗ ಆ ಪೆಟಾರಿಯ ಅಂಚು ನಾಗುವಿನ ಮುಂದಲೆಗೆ ಸರಿಯಾಗಿ ಹೊಡೆಯಿತು. ಹಿಂದೆಂದೂ ಹಾಗೆ ಹೊಡೆದಿರಲಿಲ್ಲ. ತಾನು ಉದ್ದವಾಗಿ ಹೋದೆನೆಂಬ ಭ್ರಾಂತಿ ನಾಗುವಿಗೆ ಬಂದುಬಿಟ್ಟಿತು.

ಈಗ ಬಿದಿರಟ್ಟೆಗೆ ಹೋಗಬೇಕು. 'ಲಂಗವೇ ಇರಲೇ ಸೀರೆ ಉಡಬೇಕೆ?' ಎನ್ನುವ ಸಮಸ್ಯೆ ಆ ಲಂಗ ಸೀರೆಗಳನ್ನು ನೋಡಿದಂತೆಲ್ಲ ಹೆಚ್ಚು ಜಟಿಲವಾಗತೊಡಗಿತು. ನಾಗುವಿನ ಪಾಲಿಗೆ ಅದೊಂದು, ದೊಡ್ಡ ಸಂದಿಗ್ಧ ಸಮಯ. ಒಂದು ಸರ್ತಿ ಲಂಗದ ಕಡೆಗೆ ಕೈಹೋಗಿ ತಕ್ಷಣವೇ ಹಿಂದಕ್ಕೆ ಬಂದುಬಿಟ್ಟಿತು. ಸೀರೆಯನ್ನು ತೆಗೆದುಕೊಳ್ಳಲು ಹೋಗುವಾಗ ನಾಗುವಿಗೆ ಒಂದು ತರಹ ನಾಚಿಕೆ. ಅತ್ತೆಯನ್ನು ಕೇಳಲೆ ಎಂದೂ ಎನಿಸುತ್ತಿತ್ತು. ಆದರೆ ಇದಕ್ಕೆಲ್ಲ ಅವರನ್ನೇನು ಕೇಳುವುದು, ಎಂದೂ ಎನಿಸುತ್ತಿತ್ತು.

ನಾಗು, ಸೀರೆಯನ್ನು ಕೇಳಿದಾಗ, ಅವರತ್ತೆಗೆ ಆಶ್ಚರ್ಯವೇನಾಗಲಿಲ್ಲ. ನೆಟ್ಟಗೆ ಟ್ರಂಕಿನ ಬಳಿಗೆ ಹೋಗಿ ಒಂದು ಸೀರೆಯನ್ನು ತಂದು 'ಇದು ನಿಮ್ಮಮ್ಮನದು' ಎಂದು ಹೇಳಿ ನಾಗುವಿನ ಕೈಲಿಟ್ಟರು. ಆ ಸೀರೆ ನಿರಿ ಹಿಡಿದು ಸಿದ್ಧವಾಗಿತ್ತು, ನಾಗುವಿಗೆ, ಆ ಅಚ್ಚುಕಟ್ಟಾಗಿಟ್ಟದ್ದ ಸೀರೆಯನ್ನು ನೋಡಿ 'ನಮ್ಮಮ್ಮ ಎಷ್ಟು ಜಾಣೆ?' ಎನ್ನಿಸಿರಬೇಕು.

ಅತ್ತೆ, ಹೆಚ್ಚು ವಿಷಯಗಳಿಲ್ಲದೆ ಸೀರೆಯನ್ನು ಕೊಟ್ಟಿರುವುದನ್ನು ನೋಡಿದರೆ ನಾಗುವು ಸೀರೆಯನ್ನುಟ್ಟುಕೊಳ್ಳುವುದರಲ್ಲಿ ಅಭ್ಯಂತರವೇನೂ ಇಲ್ಲ. 'ಲಂಗ ತೊಟ್ಟು ತೊಟ್ಟು ರೂಢಿಯಾಗಿಹೋಗಿರುವುದರಿಂದ ಇವತ್ತೊಂದಷ್ಟು ನಾಚಿಕೆಯಾಗುತ್ತದೆ. ಆದರಾಯಿತು. ಇವತ್ತು ಖಂಡಿತ ಸೀರೆಯನ್ನೇ ಉಟ್ಟುಕೊಂಡು ಮದುವೆಗೆ ಹೋಗಬೇಕು' ಎನ್ನಿಸಿತು.

ಮನೆ ಬಾಗಿಲಲ್ಲಿ ಗಾಡಿ ಸಿದ್ಧವಾಗಿ ನಿಂತಿತ್ತು. ಹತ್ತಲು ಸರಾಗವಾಗಲಿ ಎಂದು ಕುರ್ಚಿಯನ್ನು ತಂದು ಗಾಡಿಯ ಹಿಂದೆ ಹಾಕಿತ್ತು. ಯಾರಾದರೂ ಪ್ರಯಾಣಕ್ಕೆ ಹೊರಟರೆ ಸಾಕು, ಊರಿಗೆ ಊರೇ ನೋಡುವುದೊಂದು ಪದ್ಧತಿ. ಆದರಂತೆ ಮುದ್ದಪ್ಪನವರ ಮನೆಯ ಅಕ್ಕಪಕ್ಕದ ಮನೆಯ ಹೆಂಗಸರೆಲ್ಲರೂ ಬೀದಿಯ ಬಾಗಿಲಿಗೆ ಬಂದುನಿಂತಿದ್ದರು. ಗಾಡಿಯ ಕೆಳಗೆ ಓಡಿಹೋಗಲು ಮುದ್ದಪ್ಪನವರ ಜೀತಗಾರ ಬೂಲನ ನಾಯಿ ಸಿದ್ಧವಾಗಿತ್ತು.

ಮುಂದೆ ಕಪನಯ್ಯನವರ ಮನೆಯಲ್ಲೂ ಕೆಂಪಮ್ಮ, ಸೀಲಮ್ಮ, ಚಂದಣ್ಣ, ಮುರುಡಪ್ಪ ಮುಂತಾದವರು ಹೊರಟ ಗಾಡಿಯೊಂದು ಅವರ ಮನೆ ಬಾಗಿಲಲ್ಲಿ ನಿಂತಿತ್ತು. ಸ್ನೇಹಿತರಾದ ಮುದ್ದಪ್ಪ, ಕಪನಯ್ಯನವರು ಬಿದಿರಟ್ಟಿಯ ಕಡೆಯಿಂದ ನೆಂಟರೂ ಹೌದು. ಆದುದರಿಂದಲೇ ಪಲುಕೂರಿನಿಂದ ಬಿದಿರಟ್ಟಿಗೆ ಎರಡು ಗಾಡಿಗಳು ಸಿದ್ಧವಾದದ್ದು. ಮುದ್ದಪ್ಪನವರು ಕಪನಯ್ಯನವರ ಮನೇ ಬಾಗಿಲಲ್ಲೇ ಇದ್ದರು. ಅಲ್ಲಿಯವರ ಪ್ರಯಾಣ ಸಿದ್ಧತೆಗಳು ನಡೆದನಂತರ ತಮ್ಮ ಮನೆಯ ಕಡೆಗೆ ಬಂದರು. ಎಷ್ಟಾದರೂ ಹೆಂಗಸರು. ಆದೇತಾನೇ ನಾಗುವಿನ ಹೂವಿಗೆಂದು ಎದುರು ಮನೆ ಬಸವಣ್ಣ ಮುದ್ದಪ್ಪನವರ ಹಿತ್ತಿಲಿಗೆ ಓಡಿಹೋಗಿದ್ದನು. ಅಂತೂ ಜಗಲಿಯ ಮೇಲೆ ನಿಂತಿದ್ದ ಮುದ್ದಪ್ಪನವರ ಕಾಲಿಗೆ ಅವಳು ನಮಸ್ಕಾರ ಮಾಡಲು ಬರುವುದಕ್ಕೆ ಅರ್ಧಗಂಟೆಯೇ ಹಿಡಿಯಿತು. ಮುದ್ದಪ್ಪನವರು, ನಾಗು, ಸೀರೆ ಉಟ್ಟು

ಕೊಡದ್ದನ್ನು ನೋಡಿದರು. ಅವರಿಗೂ ಒಂದು ತರಹದ ಸಂತೋಷವಾಯಿತು. ಆದರೆ ಲಂಗದ ಹುಡುಗಿಯರು ಸೀರೆಯ ಹುಡುಗಿಯರಾಗುವುದರಲ್ಲಿ ಅವರ ಅಪ್ಪಂದಿರಿಗಾಗುವ ನೋವು ಅವರಿಗೆ ಮಾತ್ರ ಗೊತ್ತು.

ಗಾಡಿ ಹೊರಟಿತು. ಮುಂದೆ ಮುಂದೆ ಕಪನಯ್ಯನವರ ಮನೆ ಗಾಡಿ, ಹಿಂದೆ ಹಿಂದೆ ಮುದ್ದಪ್ಪನವರ ಗಾಡಿ. ಗಾಡಿ ಹೊಡೆಯುವವನ ಕಾಲಿನ ಕೆಳಗೆ ಸರಿಯಾಗಿ ನಾಯಿ ಓಡಿ ಬರುತ್ತಿತ್ತು. ಎಂದರೆ ಆಗ ಸುಮಾರು ಮಧ್ಯಾಹ್ನ ಎರಡು ಗಂಟೆಯಾಗಿರಬಹುದು. ಗಾಡಿಗಳಂತೂ ನಿಧಾನವಾಗಿ ಹೊರಟಿವೆ. ಸುತ್ತುಮುತ್ತಿನ ಸನ್ನಿವೇಶಗಳೆಲ್ಲ ನಾಗುವಿಗೆ ತೀರ ಹೊಸವು. ಅವಳಿಗೆ ಅವರ ಬೀದಿಯೇ ಹೊಸದಾಗಿ ಕಂಡಿತು. ಊರಿಂದ ಊರಿಗೆ ಇಷ್ಟು ದೂರ ಹೋಗುತ್ತಿರುವುದು ಇದೇ ಮೊದಲು.

ಪಲುಕೂರಿನಿಂದ ಬಿದಿರಟ್ಟಿಗೆ ಹದಿನೇಳು ಮೈಲಿ. ದಾರಿ ಶುದ್ಧ ಒರಟು. ಆ ಹಳ್ಳಿಗಳೆಲ್ಲ ಗುಡ್ಡಗಾಡಿನಲ್ಲಿರುವುವು. ಗಂಟೆಗೆ ಮೂರು ಮೈಲಿಯಂತೆ ಹೋದರೂ ರಾತ್ರಿ ಹತ್ತು ಗಂಟೆಗೆ ಹೋಗಿ ಬಿದಿರಟ್ಟಿ ಸೇರಿಕೊಳ್ಳಬಹುದು ಎನ್ನುವ ಸಮಾಧಾನದಿಂದಲೇ ನೊಗವನ್ನು ಎತ್ತಿನ ಕೊರಳಿಗಿಟ್ಟಿದ್ದು. ಎತ್ತು ಎರಡು ಜೊತೆಯೂ ನೋಡುವುದಕ್ಕೆ ದೊಡ್ಡವಲ್ಲವಾದರೂ ಪ್ರಯಾಣದಲ್ಲಿ ನಂಬಿಕೆ ಇಡಬಹುದಾದ ಜೊತೆಗಳು. ಆ ದಾರಿ ತೋರಿಸಿದರೇ ಬಿದಿರಟ್ಟಿಗೆ ಎಂದು ತೀರ್ಮಾನಿಸಿಕೊಳ್ಳುತ್ತಿದ್ದುವು. ಅವುಗಳಿಗೆ ಹೊಡೆಯುವವರೇ ಬೇಡ. ಅವೇ ಕಾಲ ಲೆಕ್ಕಾಚಾರ ಹಾಕಿಕೊಂಡು ಹೋಗಬೇಕಾದ ರೀತಿಯಲ್ಲಿ ಹೋಗುತ್ತಿದ್ದುವು.

ಗಾಡಿಗಳು ಇಳಿಯುತ್ತಿವೆ. ದೂರದಲ್ಲಿ ಕೆಂಪಗೆ ಕಾಣಿಸುತ್ತಿರುವುದು ಯಂಕನಗೂಡು. ಎಲ್ಲಿ ತೆಂಗಿನ ತೋಟಗಳು ಕಂಡರೆ ಅದರ ಹತ್ತಿರವೇ ಇನ್ನೊಂದು ಹಳ್ಳಿ ಇದೆ ಎಂದರ್ಥ. ಅಂಥ ಹಳ್ಳಿಗಳು ಏಳೆಂಟು ಕಳೆದು ಹೋದ ಮೇಲೆ ಬಿದಿರಟ್ಟಿ ಸಿಕ್ಕೀತು. ಅಲ್ಲಿಯವರೆಗೆ ಎಲ್ಲರಿಗೂ ತುಂಬಾ ಬೇಜಾರಾಗಿ ಹೋಗುತ್ತದೆ. ಮೇಲೆ ಕುಳಿತು ಪ್ರಯಾಣ ಮಾಡುವವರಿಗೇ ಇಷ್ಟು ಬೇಜಾರಾಗುವಾಗ ಏನೂ ಕೆಲಸವಿಲ್ಲದೆ ಬಿದಿರಟ್ಟಿಗೆ ಇಷ್ಟು ಜನರನ್ನೂ ಎತ್ತಿಕೊಂಡು ಎಳೆದುಕೊಂಡು ಹೊರಟಿರುವ ಆ ಎತ್ತುಗಳಿಗೆಷ್ಟು ಬೇಜಾರಾಗಿರಬಹುದು.

ಇದನ್ನು ತಿಳಿದೋ ಅಥವಾ ಇನ್ನೇತಕ್ಕೋ ಅಂತೂ ಚಂದಣ್ಣ ಮುಂದಿನ ಗಾಡಿಯಿಂದ ಚಿಗಿದು ಇಳಿದ. ಗಾಡಿಯವರು, 'ಇದ್ಯಾಕಾ ಚಂದು?' ಎಂದರು. ಅದಕ್ಕೆ 'ಕಾಲು ಜುಮ್ಮೆರುಗಟ್ಟೈತು, ಅದಕ್ಕೆ; ಅಂಗೇ ಒಸಿ ಇಳಿದು ಬತ್ತೀನಿ' ಎಂದನು. 'ಐ ಕೂತ್ಕೋಬಾ! ಏನು ಪ್ಯಾಟೇ ರಸ್ತೇಂತ ಇಳಿದು ನಡೀ ಬೇಕೇನೋ ಬಾ!' ಎಂದು ಪುನಃ ಕರೆದರು. 'ಕತ್ಲೇ ಆದಮೇಲೆ ಇಳಿಯ ಕ್ಯಾದ್ದಾ—ನಡೀರಿ ಬತ್ತೀನಿ' ಎಂದು ತನ್ನ ಪಟ್ಟು ಬಿಡಲೇ ಇಲ್ಲ ಚಂದಣ್ಣ. 'ನಿನಗೇನಪ್ಪ! ಹದಿನಾರು ವರ್ಷದ ಪ್ರಾಯ, ಬಿದಿರಟ್ಟಿಗಂಟಾನಾದ್ರೂ ನಡ್ದೀಯೆ!' ಅಂದು ಸುಮ್ಮನಾದರು ಗಾಡಿಯೊಳಗಿದ್ದವರು.

ಚಂದಣ್ಣ, ಎತ್ತುಗಳಿಗೋಸ್ಕರ ಕನಿಕರ ಪಟ್ಟು ಗಾಡಿಯನ್ನು ಇಳಿಯಲಿಲ್ಲ, ಅಥವಾ ತನ್ನ ಬೀಡೀ ಚಟಕ್ಕೂ ಇಳಿಯಲಿಲ್ಲ. ಅವನು ಹೇಳಿದ ಕಾಲು ಜೋಗಿನ ನೆವವಂತೂ ಅಲ್ಲವೇ ಅಲ್ಲ. ಮುಖ್ಯ ಹಿಂದಿನ ಗಾಡಿಯಲ್ಲಿ ನಾಗುವು ಕುಳಿತಿದ್ದದ್ದು. ಗಾಡಿಯಲ್ಲಿ ಎತ್ತುಗಳ ಕಡೆಗೆ ಮುಖಮಾಡಿ ಆರುಮೈಲಿ ಪ್ರಯಾಣ ಮಾಡಿದುದು ಹುಡುಗಾಟವೇ? ನಾಗು ಅಕಸ್ಮಾತ್ ಬಿದಿರಟ್ಟಿಗೆ ಹೊರಡದೇ ಇದ್ದರೆ ಚಂದಣ್ಣ ದೇವರಾಣೆಗೂ ಹೊರಡುತ್ತಿರಲಿಲ್ಲ. ಹಿಂದಕ್ಕೆ ತಿರುಗಿನೋಡದೆ ಆರುಮೈಲಿಯಷ್ಟು ದೂರ ತಾನು ಹೇಗೆ ಬಂದೆ? ಎನ್ನುವುದೇ ಅವನಿಗೆ ಆಶ್ಚರ್ಯ. ಅಷ್ಟು ಪ್ರಯಾಣ ವ್ಯರ್ಥವಾದದ್ದಕ್ಕಾಗಿ ತುಂಬಾ ವ್ಯಥೆಪಟ್ಟನು.

ಗಾಡಿಗಳೆರಡೂ ಮುಂದಾದುವು. ಚಂದಣ್ಣ ಹಿಂದೆ ಹಿಂದೆ ನಿಧಾನವಾಗಿ ನಡೆದು ಬರುತ್ತಿದ್ದನು. ಹಿಂದಿನ ಗಾಡಿಯಲ್ಲಿ ಇಬ್ಬರೇ ಕುಳಿತಿದ್ದವರು. ನಾಗುವಿನ ಅತ್ತೆ, ನಾಗು. ನಾಗುವಿನ ಅತ್ತೆಯವರು 'ಟ್ರಂಕಿ'ನ ಮೇಲೆ ತಲೆಯಿಟ್ಟು ಮಲಗಿಬಿಟ್ಟಿದ್ದರು. ನಾಗು ಎಚ್ಚರವಾಗಿ ಪದ್ಮಾಸನ ಹಾಕಿ ಗಂಭೀರವಾಗಿ ಕುಳಿತು ಬೇಜಾರಾಗಿ, ಎಲೆ ಅಡಕೆ ಅಗಿಯುತ್ತಿದ್ದಳು. ಅವಳು ಅಗಿಯುತ್ತಿದ್ದುದನ್ನು ನೋಡಿದರೆ ಚಂದಣ್ಣನಿಗೆ ಬಾಯಿನೀರು ಬರುತ್ತಿತ್ತು. ಏನೋ ಅವನಲ್ಲೊಂದು ಬಲವಾದ ನಂಬಿಕೆ. ಎಂದಿದ್ದರೂ ನಾಗು ಚಂದಣ್ಣನ ಹೆಂಡತಿಯೆಂದೇ ಅವನ ತೀರ್ಮಾನ. ನೋಡಿದರೂ ನೋಡದಂತೆ ನೋಡಿಕೊಂಡು ಚಂದಣ್ಣ ನಾಗುವನ್ನೇ ತನ್ನ ನಡಗೆಯ ಲಕ್ಷ್ಯವಾಗಿಟ್ಟುಕೊಂಡು ಸಾಗುತ್ತಿದ್ದನು.

ಒಳ್ಳೇ ಬಿಸಿಲು. ಸಾಲುಮರವಿಲ್ಲದ ಕಾಡುದಾರಿ. ಒಂದು ಮೈದಾನ ಸಾಗುವಳಿ ಜಮೀನಿನದಾದರೆ ನಾಲ್ಕು ಪಾಳು; ಗುತ್ತಿಗಳು ಬುಡೆಗಳಿಂದ ಕೂಡಿದವು. ಆಕಾಶದಲ್ಲಿ ಶಾಸ್ತ್ರಕ್ಕೆ ನಾಲ್ಕು ಸೋಮಾರಿ ಮೋಡಗಳು ಎಲ್ಲೆಲ್ಲೋ ನಿಂತಿವೆ. ಸೂರ್ಯನೆದುರು ಬರುವ ಧೈರ್ಯ ಅವುಗಳಲ್ಲಿ ಒಂದಕ್ಕೂ ಇಲ್ಲ. ಗುಡ್ಡಗಳು ಕುದಿಯುವ ನೀರಿನಲ್ಲಿ ಅದ್ದಿ ಎತ್ತಿಟ್ಟ ಹಾಗೆ ಸಣ್ಣಗೆ ಆವಿ ಯಾಡುತ್ತಿವೆ. ಒಂದೊಂದು ಕಡೆ ಬಿಸಿ ಧೂಳು, ಹಿಟ್ಟಿನಷ್ಟು ನುಣ್ಣಗಿದ್ದು ನಡೆಯುವವರ ಬೆರಳು ಸಂದಿಗಳಲ್ಲೆಲ್ಲ ಚಿಮ್ಮುತ್ತವೆ. ಚಂದಣ್ಣನ ತಲೆ ಆಗಲೇ ಕಾದುಹೋಗಿದೆ. ಮುಖಕ್ಕೆ ಎಣ್ಣೆ ಸವರಿದ ಹಾಗಾಗಿದೆ. ಆದರೂ ನಡೆಯು ತ್ತಿದ್ದಾನೆ ನಾಗುವಿನ ಸಲುವಾಗಿ.

ನಾಗು ಚಂದಣ್ಣನಂತೆ ಕದ್ದು ನೋಡುತ್ತಿರಲಿಲ್ಲ. ಅವನ ಕಷ್ಟಕ್ಕಾಗಿ ಮರುಗಿ, ಇನ್ನು ನಡೆಯುವುದು ಸಾಕು ಎಂದು ಕಣ್ಣಿನಲ್ಲಿ ಅವನಿಗೆ ಹೇಳು ವಂತೆ ನಾಲ್ಕು ಬಾರಿ ನೋಡಿದಳು. ಚಂದಣ್ಣನಿಗೆ ಅವು ಅಷ್ಟೈಶ್ವರ್ಯಗಳಂತೆ. ನಾಗು ಹೇಳಿದಂತೆ ಚಂದಣ್ಣ ಕೇಳಲಿಲ್ಲ. ಏಕೆಂದರೆ ನಾಗುವಿನ ಕಣ್ಣಿಗೆ ಬೀಳುತ್ತಾ ನಡೆಯುವುದು, ನಾಗುವಿನ ಕಣ್ಣಿಗೆ ಬೀಳದೇ ವಿಮಾನದಲ್ಲಿ ಹೋಗುವುದಕ್ಕಿಂತ ಆಪ್ಯಾಯಮಾನವಾದುದು. ನೆತ್ತಿಯನ್ನು ಸುಟ್ಟ ಬಿಸಿಲು ಈಗ ಆಳಗೆನ್ನೆಗೆ ರಪರಪನೆ ಹೊಡೆಯಲಾರಂಭಿಸಿತ್ತು. ದಾರಿಯಲ್ಲಿ ಬಿದ್ದಿದ್ದ ಸಣ್ಣಸಣ್ಣ ಕಲ್ಲುಗಳೂ ಕಾದುಹೋಗಿದ್ದುವು. ರೆಕ್ಕೆ ಇರುವ ಪ್ರಾಣಿ ಗಳ ಸದ್ದೇ ಇಲ್ಲ. ನೀರು ಎನ್ನುವುದು ಅಮೃತದಷ್ಟು ದೂರವಾಗಿದೆ. ಜೀರುಂಡೆ ಮಾತ್ರ ಹತ್ತಿರದಲ್ಲೇ ಎಲ್ಲೋ ಕೂಗುತ್ತಿದೆ. ಗಾಡಿಯ 'ಧುಡುಕ್ ಧುಡುಕ್ ಗಟ್ರ್' ಶಬ್ದವು ಮಾತ್ರ ಒಡೆದು ಕೇಳುತ್ತಿದೆ. ಕಾಲ ಮತ್ತು ದಾರಿಗಳು ಸಾಗಿದಂತೆ ಚಕ್ರಗಳು ತಿರುಗುತ್ತಿವೆ. ಗಾಡಿಯೊಳಗೆ ಮಲಗಿದ್ದ ನಾಗುವಿನತ್ತೆಯವರೇ ತುಂಬಾ ಬೆವತುಹೋದರು. ಆ ಬೆವರು ಹರಿಯುವಿಕೆ ಯಿಂದ ಅವರಿಗೆ ಎಚ್ಚರವಾಯಿತು ಎದ್ದು ನೋಡಿದರೆ ಎಂಟು ಹತ್ತು ಮಾರುಗಳಾಚೆ ಚಂದಣ್ಣ ನಿಧಾನವಾಗಿ ನಡೆದುಬರುತ್ತಿದ್ದಾನೆ. ಅವನ ಮುಂಡಿಗಳವರೆಗೂ ಧೂಳು ತುಂಬಿದೆ. ಅಂಗಿ ಅವನೆದೆಗೆ ಅಂಟಿಕೊಂಡು ಬಿಟ್ಟಿದೆ. ಕೈಬೀಸಿ ನಡೆದುನಡೆದು ಎಡಗೈಯಿನ ಉಂಗುರ ಬಲು ಬಿಗಿಯಾಗಿ ಹೋಗಿದೆ. ಬಿಸಿಲಿಗೆ ಅರೆ ಮುಚ್ಚಿಕೊಂಡಿದ್ದ ಕಣ್ಣುಗಳ ಕೆಳಗೆ ಬೆವರು

ಹನಿಗಳು ಅಷ್ಟು ದೂರಕ್ಕೇ ಕಾಣಿಸುತ್ತಿವೆ. ಅದನ್ನು ನೋಡಿ ಅವರಿಗೆ ಕರುಳು ಕಿವುಚಿದಂತಾಯಿತು.

'ಚಂದಣ್ಣಾ, ಬಾ ಒಳಗೆ, ಇಲ್ಲಿ ಬೇಕಾದಷ್ಟು ಜಾಗಾ ಅದೆ' ಅಂದರು ಎರಡು ಸರ್ತಿ. ಚಂದಣ್ಣ 'ಪರ್ವಾ ಇಲ್ಲ' ಎಂದರೂ ನಾಗುವಿನತ್ತೆ ಕೇಳಲೇ ಇಲ್ಲ. 'ಬಾ ಅಂದರೆ ಹೇಳಿದಷ್ಟು ಕೇಳಿ ಬರಬೇಕು' ಎಂದು ಆಜ್ಞೆ ಮಾಡಿದರು. ಮನಸ್ಸಿನಲ್ಲಿ ಕೆಲವು ಆಸೆಗಳಿರುತ್ತವೆ. ದೊರೆಯುವುದಕ್ಕಿಂತ ಮುಂಚೆ ಅವುಗಳನ್ನು ಕಂಡರೆ ತುಂಬಾ ಪ್ರೀತಿ. ಅವು ಅನುಭವಕ್ಕೆ ಸಿಕ್ಕಿದಾಗ ಒಂದು ತರಹ ಸಂಕೋಚವಾಗುತ್ತದೆ. ಇದು ಚಂದಣ್ಣನ ಈಗಿನ ಸ್ಥಿತಿಯಾಯಿತು. ಬಲು ಸಂಕೋಚದಿಂದ ನಾಗು ಕುಳಿತಿದ್ದ ಗಾಡಿಯನ್ನು ಹತ್ತಿದನು. ನಾಗು ಸೀರೆಯನ್ನು ಸರಿಮಾಡಿಕೊಂಡು ಕೊಂಚ ಒತ್ತಿಕೊಂಡು ಚಂದಣ್ಣನಿಗೆ ಜಾಗ ಬಿಟ್ಟುಕೊಟ್ಟಳು. ಈಗಲೂ ನಾಗುವು ಚಂದಣ್ಣನ ಬೆನ್ನುಕಡೆಗೇ. ಅಂತೂ ಅವನ ನಡಗೆ ನಿಂತು ನಾಗುವಿಗೆ ತೃಪ್ತಿಯಾಯಿತು.

ಚಂದಣ್ಣ ಹೊರಗೆ ನೋಡುತ್ತಾ ಕುಳಿತನು ಹಾಗೂ ಎರಡು ಮೈಲಿಗಳು ಕಳೆದುವು ಆಮೇಲೆ ನಾಗುವಿನ ಅತ್ತೆಯವರೇ ಮಾತನಾಡಿಸಿದರು. 'ಏನು ಚಂದಣ್ಣ, ಮದುವೆಗೆ ನೀನು ಬಂದುಬಿಟ್ಟೇ' ಎಂದರು. 'ನಮ್ಮಪ್ಪಜ್ಜೀ ನೀನೇ ಹೋಗಿದ್ದು ಬಾ ಅಂದ್ರು' ಎಂದು ಗೌರವವಾಗಿ ಮೆಲ್ಲಗೆ ಹೇಳಿದನು. 'ಅದ್ಯಾಕೆ, ನಿಮ್ಮಪ್ಪಜ್ಜೀ ಬರಲಿಲ್ಲ?' ಎಂದು ಕೇಳಿದರು. ಚಂದಣ್ಣನಿಗೆ ಕೊಂಚ ಬುದ್ಧಿ ಓಡಿಸಬೇಕೆನ್ನಿಸಿತು. 'ನಿಮ್ಮಿಂದಲೇ!' ಅಂದನು. ನಾಗುವಿಗೆ, ಅವರತ್ತೆಗೆ ಇಬ್ಬರಿಗೂ ಆಶ್ಚರ್ಯವಾಯಿತು. ನಾಗುವಿನ ಅತ್ತೆ 'ಅಪ್ಪಿ, ಅದ್ಯಾಕಪ್ಪ?' ಅಂದರು. 'ನೀವು ಮದುವೆಗೆ ಬರಲೇಬೇಕೂಂತ ಅದ್ಮೇಲೆ ಮುದ್ದಪ್ಪ ಮಾವ ಬರೋಹಂಗಿಲ್ಲ; ಮಾವನೂ, ಅಪ್ಪಜ್ಜಿಯೂ ಗಂಡಹೆಂಡಿರು ತಾನೆ. ಒಬ್ಬರನ್ನ ಬುಟ್ಟು ಒಬ್ಬರು ಬರೋಹಂಗಿಲ್ಲ' ಎಂದು ಧೈರ್ಯವಾಗಿ ಉದ್ದಕ್ಕೆ ಮಾತಾಡಿಬಿಟ್ಟನು. ಅವನ ಬಾಣ ಗುರಿಮುಟ್ಟಿತು. ಅವನ ಮಾತಿಗೆ ನಾಗುವೂ ನಕ್ಕಳು. ಅಷ್ಟು ಹೊತ್ತಿಗೆ 'ಏಳಸ್ವಾಗೆ' ಬಂದಿತು. 'ಏಳಸ್ವಾಗೆ' ಸಾವಿರ ಮನೆಗಳ ಒಂದು ಊರು. ಅಲ್ಲಿ ಚಂದಣ್ಣ ಇಳಿದನು. ಗಾಡಿಗಳು ಊರ ಹೊರಗೆ ನಿಂತುವು. ಎಲ್ಲರಿಗೂ ತಿಂಡಿ ಎಳನೀರುಗಳನ್ನು

ತರಿಸಿಕೊಟ್ಟ ಸೌಭಾಗ್ಯ ಚಂದಣ್ಣನಿಗೆ. ಎಲ್ಲರಿಗೂ ತರಿಸಿಕೊಡಬೇಕೆಂಬ ಅವಸರ ಅವನಿಗಿತ್ತೊ ಇಲ್ಲವೊ ತಿಳಿಯದು.

ಏಳಸ್ವಾಗೆಯಿಂದ ಗಾಡಿಗಳ ಚಕ್ರ ಮುಂದಕ್ಕೆ ಉರುಳುವಾಗ ಚಂದಣ್ಣ, ಇಳಿದ ಮೇಲೆ ಪುನಃ ಹಿಂದಿನ ಗಾಡಿಯನ್ನೇ ಹತ್ತುವುದು ಅಸಭ್ಯತನ ವೆಂದುಕೊಂಡನೇನೋ,–ಮುಂದಿನ ಗಾಡಿಗೆ ಹತ್ತುವುದಕ್ಕೆ ಹೋದನು. ಅಲ್ಲಿ ಚಂದಣ್ಣನ ಜಾಗ ಆಕ್ರಮಿಸಲ್ಪಟ್ಟಿತ್ತು. ಅಲ್ಲಿಯವರು 'ಆ ಗಾಡಿಗೇ ಹೋಗು, ಇಷ್ಟು ಇಕ್ಕಟ್ಟೆಲ್ಯಾಕೆ?' ಅಂದು, ಅವನನ್ನು ಹಿಂದಿನ ಗಾಡಿಗೇ ಕಳುಹಿಸಿಬಿಟ್ಟರು. ಎಲೆ, ಅಡಕೆ, ಸುಣ್ಣವನ್ನು ನಾಗುವಿನತ್ತೆಯಿಂದ ತೆಗೆದು ಕೊಳ್ಳುವಾಗ ಎರಡೇ ಬಾರಿ ಅವನು ನಾಗುವನ್ನು ಸೂಕ್ಷ್ಮವಾಗಿ ನೋಡಿದ್ದು. ಅನಂತರ ಹೊತ್ತುಬಿದ್ದುಹೋಯಿತು. ಮೋಡದ ಮರೆಯಲ್ಲಿದ್ದ ಚಂದ್ರನು, ಅಂಗಡಿಯನ್ನು ಬಿಚ್ಚಿ ತನ್ನ ವ್ಯಾಪಾರಕ್ಕೆ ಮೊದಲುಮಾಡಿದನು.

ಕತ್ತಲೆಯು ಮುಚ್ಚಿಕೊಂಡ ಮೇಲೆ ಒಂದಷ್ಟು ಹೊತ್ತು ನಾಗು, ಕಣ್ಣು ಬಿಟ್ಟುಕೊಂಡು ಬೆಳುದಿಂಗಳ ಆಟ ನೋಡುತ್ತಿದ್ದಳು. ಆಮೇಲೆ ಹಾಗೆಯೇ ನಿದ್ದೆಹೋದಳು. ತನ್ನತ್ತೆ ತೊಡೆಯ ಮೇಲೆ ತನ್ನ ತಲೆ ಯಿದ್ದದ್ದು ಅವಳಿಗೆ ತಿಳಿದುದು ಬಿದಿರಟ್ಟಿ ಸಿಕ್ಕಿತೆಂದು ಎದ್ದಾಗಲೇ. ಅಲ್ಲಿಯ ವರೆಗೂ ಚಂದಣ್ಣ ಏನೇನು ಯೋಚನೆ ನಡಸಿದ್ದನೋ.

ಅಂದಿನ ರಾತ್ರಿ ಕಳೆದ ಮೇಲೆ ಬೆಳಗಿನ ಜಾವಕ್ಕೇ ಸ್ತಂಭಮುಹೂರ್ತ, ದೇವರು ತರುವುದು, ಎಲ್ಲಾ. ಬಿದಿರಟ್ಟಿಯವರ ಮನೆ ಬಲು ಚಿಕ್ಕದು. ಅವರಿಗೆ ಪಲುಕೂರಿನ ನೆಂಟರು, ಸೆಜ್ಜೆ ನೆಂಟರುಗಳು ಬಲು ಬೇಕಾದವರು. ಆದ್ದರಿಂದ ಅವರಿಗೆ ತೊಂದರೆಯಾಗದಿರಲೆಂದು, ಅವರಿಬ್ಬರಿಗೂ ಪುಟ್ಟಪ್ಪನ ತೊಟ್ಟಿ ಮನೆ ಬಿಡಿಸಿಕೊಟ್ಟಿದ್ದರು. ಸೆಜ್ಜೆಯ ನೆಂಟರಲ್ಲಿ ಗಂಡಸರು ಹೆಚ್ಚು. ಪಲುಕೂರಿನ ಗುಂಪಿನಲ್ಲಿ ಹೆಂಗಸರು ಹೆಚ್ಚು. ಆದರಿಂದ ಹಜಾರದಲ್ಲೆಲ್ಲಾ ಗಂಡಸರು ತುಂಬಿದ್ದರೆ ಪಲುಕೂರಿನವರೆಲ್ಲ ಅಡಿಗೆಮನೆ ಸೇರಿಕೊಂಡಿದ್ದರು. ವಿಧಿಯಿಲ್ಲದೇ ಚಂದಣ್ಣ, ಮುರುಡಪ್ಪನವರು ಸೆಜ್ಜೆಯ ಜನಗಳ ಪರಿಚಯ ಮಾಡಿಕೊಂಡರು.

ಪುಟ್ಟಣ್ಣನ 'ಹಟ್ಟಿ'ಗೂ ಮದುವೇ ಮನೆಗೂ ಒಂದು ಫರ್ಲಾಂಗ್ ದೂರ, ಪಲುಕೂರಿನ ಹೆಂಗಸರು ಏನುಬೇಕಾದರೂ ನಾಗುವನ್ನೇ ಅಲ್ಲಿಗೆ

ಅಟ್ಟುತ್ತಿದ್ದರು. ಅವಳು ಅಲ್ಲಿರುವವರಿಗೆಲ್ಲಾ ಚಿಕ್ಕವಳು. ಅದೇ ಅವಳ ಅಪರಾಧ. ಹೊರಗಡೆ ಅಷ್ಟು ಜನ ಗಂಡಸರಿದ್ದಾರೆ; ಅವರೆದುರಿಗೆ ತಿರುಗಾಡುವುದು ನಡೆವಳಿಕೆಯಲ್ಲವೆಂದುಕೊಂಡ ಈ ಹೆಂಗಸರ ಪರ ಎಲ್ಲ ಕೆಲಸಕ್ಕೂ ನಾಗುವೇ ನಿಂತುಕೊಳ್ಳಬೇಕಾಯಿತು. ಇದು ನಾಗುವಿಗೆ ಇಷ್ಟವಿಲ್ಲ. ಅವಳಿಗೆ ಬೀದಿಯಲ್ಲಿ ಸುಳಿದು ರೂಢಿಯಿಲ್ಲ. ನಾಗುವು ಬೀದಿಯಲ್ಲಿ ಸುಳಿಯುವುದಂತೂ ಚಂದಣ್ಣನಿಗೆ ಕೂಡದೇ ಕೂಡದು.

ಸೆಜ್ಜೆಯ ಗುಂಪಿನಲ್ಲಿ ಇಬ್ಬರು ತಲೆಹರಟೆಯುವರು. ಬೈತಲೆ ಬಿಟ್ಟಿರುವುದೇ ಅವರ ದೊಡ್ಡಸ್ತಿಕೆ. ಅವರು ತಮ್ಮ ಹಾಸ್ಯಕ್ಕೋಸ್ಕರ ನಾಲ್ಕು ಜನರನ್ನು ಕೊಂದರೂ ಅವರಿಗೆ ಚಿಂತೆಯಿಲ್ಲ. ಅವರ ಹುಡುಗಾಟಗಳು ಎಲ್ಲೆ ಮೀರಿದವು. ಸೆಜ್ಜೆ, ನಗರಕ್ಕೆ, ಪಲುಕೂರು ಬಿದಿರಟ್ಟಿಗಳಿಗಿಂತ ಹತ್ತಿರ. ಆದ್ದರಿಂದ ಇವರು ಅನುಭವಿಸದ ಅನೇಕ ನಾಗರೀಕತೆಯ ಸೌಕರ್ಯಗಳನ್ನನುಭವಿಸಿದ್ದೇವೆ ಎಂದು ಅವರ ಧೋರಣೆ ಆದರೆ ಅವರ ಪೈಕಿ, 'ರಾಜಶೇಖರು' ಎನ್ನೋ ಹುಡುಗ ಸ್ವಲ್ಪ ಗಂಭೀರಸ್ಥ. ಅವನೇ ತನ್ನಿಬ್ಬರು ಸ್ನೇಹಿತರ ಮಾತಿಗೆ ಅಸಹ್ಯಪಟ್ಟುಕೊಳ್ಳುತ್ತಿದ್ದನು. ಆಗಾಗ್ಗೆ ಅವರನ್ನು ಬಯ್ಯುತ್ತಲೂ ಇದ್ದನು. ಅವರಿಬ್ಬರಂತೂ ತಾವು ಕಲಿತ ಗಂಧರ್ವಭಾಷೆಯಲ್ಲಿ ಆಡದ 'ಲುಚ್ಚಾ' ಮಾತುಗಳಿಲ್ಲ. ಆಗ ರಾಜುವಿನ ಸಂಕೋಚ ನೋಡುವುದಕ್ಕಾಗುವುದಿಲ್ಲ.

ನಾಗು ಅವರ ಬಿಡಾರದಲ್ಲೇ ಅಲ್ಲಿಂದಿಲ್ಲಿಗೆ ಓಡಾಡುತ್ತಿರಬೇಕು. ಅವರು ಏನೇ ಅರಚಿಕೊಳ್ಳುತ್ತಿರಲಿ, ತನ್ನ ಪಾಡಿಗೆ ತಾನು ತಲೆತಗ್ಗಿಸಿಕೊಂಡು ಅಡ್ಡಾಡುತ್ತಿದ್ದಳು. ಅವಳು ರಾಜುವಿಗೆ ತುಂಬಾ ಹಿಡಿಸಿದಳು. ಅವಳ ಲಕ್ಷಣ, ಗುಣಗಳು ಅವನಿಗೆ ಒಪ್ಪಿದುವು. ಅದಕ್ಕೇ ಒಂದು ಬಾರಿ ಯಾವುದೋ ಪ್ರಸ್ತಾಪದಲ್ಲಿ ತನ್ನ ಸ್ನೇಹಿತರಲ್ಲಿ ಅವಳನ್ನು 'She's a nice girl' ಎಂದನು ಉಳಿದಿಬ್ಬರು ಬೃಹಸ್ಪತಿಗಳ ಪೈಕಿ ಒಬ್ಬ, ತಕ್ಷಣ 'Her elder flowers, must be more nice' ಎಂದುಬಿಟ್ಟನು. ನಾಗು, ಆಗತಾನೆ ಅಲ್ಲಿಂದ ಹಾದು ಹೋಗಿದ್ದಳು. ಈ ಮಾತನ್ನು ಕೇಳಿದ ರಾಜುವಿಗೆ ತಲೆ ತಿರುಗಿದಂತಾಯಿತು. ತಕ್ಷಣ ಅವನ ಕೋಪವೆಲ್ಲ ಸೇರಿ ಒಂದೇಟಾಗಿ ಅಂದವನ ಕೆನ್ನೆಯಲ್ಲಿ ಬಿದ್ದಿತು.

ಇಂಗ್ಲೀಷು ಬರದಿದ್ದ ಮಾತ್ರಕ್ಕೆ ಚಂದಣ್ಣನಿಗೆ ತಿಳಿಯದೇ ಅವರ ನಡೆ ವಳಿಕೆ! ಅವರೆಲ್ಲ ಮಹಾಕೆಟ್ಟವರು ಎಂದು ತೀರ್ಮಾನಿಸಿಬಿಟ್ಟಿದ್ದನು. ನಾಗು ವನ್ನು ಅವನು ಸರಾಗವಾಗಿ ಮಾತನಾಡಿಸುತ್ತಿದ್ದರೆ, ಅವನ್ನೆಲ್ಲಾ ತನಗರ್ಥ ವಾದ ರೀತಿಯಲ್ಲಿ ತಿಳಿಸಿ ಅವಳ ಓಡಾಟವನ್ನು ನಿಲ್ಲಿಸುತ್ತಿದ್ದನು. ಆದರೆ ಅವಳು ಅವನೆದುರಿಗೇ ನಿಲ್ಲುತ್ತಿರಲಿಲ್ಲ. ಇನ್ನೆರಡು ದಿನದ ಓಡಾಟಕ್ಕೆ ಏಕೆ ರಂಪ ಎಂದುಕೊಂಡು ಹಲ್ಲುಕಚ್ಚಿ ಸುಮ್ಮನಾದನು. ಅವನಿಗೊಂದೇ ಅತೃಪ್ತಿ. ಅವರ ಸುಂದರವಾದ ತಲೆ, ಅವರ ಕೈಗಡಿಯಾರ, ಅವರ ಉಡುಪು, ಅವರ ಎಕ್ಕಡ, ಅವರ ವ್ಯೈಒಣ್ಣಗಳಿಗೆ ನಾಗುವೆಲ್ಲಿ ಸೋಜಿಗಪಟ್ಟುಕೊಂಡುಬಿಡು ವಳೋ ಎಂಬ ಅಧೈರ್ಯ ಅವನಲ್ಲಿತ್ತು. ಆದರೆ ನಾಗು ಅವನ್ನೆಲ್ಲಾ ಗಮನಿಸು ತ್ತಲೇ ಇರಲಿಲ್ಲ. ಅದರಿಂದ ಚಂದಣ್ಣ ಬದುಕಿದ. ಹುಚ್ಚು ಹುಡುಗ!

ಅಂದರೆ, ಚಂದಣ್ಣನ ಕಷ್ಟಗಳೆಲ್ಲ ದೂರವಾಗಲಿಲ್ಲ. ಎರಡು ಊರಿನ ನೆಂಟರಿಗೂ ಒಂದೇ ರೀತಿಯ ಸನ್ಮಾನ. ಅವರನ್ನು ಉಳಿಸಿಕೊಳ್ಳುವುದಕ್ಕೆ ಒಂದೇ ರೀತಿಯ ಬಲವಂತಗಳನ್ನು ತೋರಿಸುತ್ತಿದ್ದ ಮದುವೆ ಮನೆಯವರು, ಅವೆರಡು ಗುಂಪನ್ನೂ ಮದುವೆ ಮುಗಿದ ಮೇಲೆ ಒಂದೇ ದಿನ ಬೀಳ್ಕೊಟ್ಟರು. ಬಿದಿರಟ್ಟಿಯಿಂದ ಹಿಂತಿರುಗುವ ದಾರಿಯಲ್ಲಿ ಐದು ಗಾಡಿಗಳು ಸಾಲುಗಟ್ಟಿ ಹೊರಟುವು. ಅದರಲ್ಲಿ ಮುಂದಿನದು, ನಾಲ್ಕನೆಯದು, ಪಲುಕೂರು ಗಾಡಿಗಳು. 'ಅಂಗಳದ' ವರೆಗೆ ಆ ಗಾಡಿಗಳು ಹಾಗೇ ಹೋಗಬೇಕು. ಅಂಗಳದ ಊರೊ ಳಗೆ ಪಲುಕೂರು ಗಾಡಿಗಳು ಹೋಗಬೇಕು, ಅಂಗಳದ ಊರ ಹೊರಗೆ ಬಳಸಿ ಕೊಂಡು ಚಿಂಚನೂರು ಮೇಲೆ ಹೋಗುವ ರಸ್ತೆಯಲ್ಲಿ ಸಜ್ಜೆಯ ಗಾಡಿಗಳು ಹೋಗಬೇಕು. ಅಲ್ಲಿಯವರೆಗೆ ಚಂದಣ್ಣನ ಮನಸ್ಸಿಗೆ ಶಾಂತಿ ದೊರೆಯದು. ಅವರು ಮೂವರೂ ಅವನೆದೆಯ ಮೇಲೆ ನಡೆದು ಬರುತ್ತಿದ್ದಂತೆಯೇ ಅವನಿ ತೋರುತ್ತಿತ್ತು–ಓಹೊ! ಅವರ ಕೋಲಾಹಲ ಎಷ್ಟು, ಏನು ಕತೆ!

ಇದ್ದಕ್ಕಿದ್ದ ಹಾಗೆಯೇ ಗಾಡಿಯಿಂದಿಳಿದುಬಿಡುವರು. ತಕ್ಷಣ ಹತ್ತಿರ ಸಿಕ್ಕುವ ಯಾವ ಮರಕ್ಕೇ ಆಗಲಿ ಹತ್ತಿಬಿಡುವರು. ಪುನಃ ಗಾಡಿಗೆ ಓಡಿ ಬಂದು ಕುಳಿತು 'ಇಸ್ಪೀಟು' ಆಡುವರು. ಸಿಗರೇಟು ಸೇದುವರು. ಗಾಡಿ ಯನ್ನು ಹೊಡೆಯಲು ಬರುವರು. ಪುನಃ ಇಳಿದು ನೀರು ಹುಡುಕಿಕೊಂಡು

ಕೊಂಚ ಹೊತ್ತು ಅಲೆದು ಪುನಃ ಗಾಡೀ ಸಾಲಿಗೆ ಬಂದು ಸೇರುವರು. ಆಕಾಶ ಬಾಯಿ ಬಿಡುವಷ್ಟು ಗಟ್ಟಿಯಾಗಿ ನಗುವರು. ಪುನಃ ಸಿಗರೇಟು ಹಚ್ಚುವರು.

ಅವರ ಈ ಹುಚ್ಚಾಟಕ್ಕೆ ಸಲುವಾಗಿಯೇ ತಮ್ಮ ಮಿಕ್ಕ ಗಾಡಿಗಳಿಗೆ, ಒಂದು ಫರ್ಲಾಂಗಿನ ಗಾಡಿಯನ್ನು ಮರಿ ಮಾಡಿಕೊಂಡು ಕಡೆಯಾಗಿ ಬರುತ್ತಿದ್ದರು. ಹೇಗಾದರೂ ಮಾಡಿ ಅವರ ಆ ನಿಯಮವನ್ನು ತಪ್ಪಿಸಿ, ನಾಲ್ಕನೆಯ ತನ್ನ ಗಾಡಿಯನ್ನು ಮುಂದಕ್ಕೆ ತೆಗೆದುಕೊಂಡು ಹೋಗಬೇಕೆಂದು ಚಂದಣ್ಣನ ಹಟ ಆದರೆ ಸೆಜ್ಜೆ ಎತ್ತುಗಳೆಲ್ಲ ಭಾರಿ. ಚಂದಣ್ಣನ ಆಟ ಸಾಗಲಿಲ್ಲ. ಬಲು ಕೋಪದಿಂದ ಅವರ ತುಂಟಾಟಗಳನ್ನೇ ನೋಡುತ್ತಾ, ಯೋಚಿಸುತ್ತಾ ಬರುತ್ತಿದ್ದನು. ಅವರು ಮೂರು ಜನರ ಪೈಕಿ ರಾಜುವೆನ್ನುವ ಹುಡುಗ, ಪಾಪ! ಒಳ್ಳೆಯವನು. ಆದರೆ ಚಂದಣ್ಣನಿಗೆ ಅವರ ಒಳ್ಳೆಯ ಗುಣವನ್ನು ತೆಗೆದುಕೊಳ್ಳಲಾಗದಷ್ಟು ಹೊಟ್ಟೆಕಿಚ್ಚು ತುಂಬಿದೆ. ಅವನ ಹೊಟ್ಟೆಕಿಚ್ಚು, ಅಂಗಳಕ್ಕೆ ಎರಡು ಮೈಲಿ ಇದೆ ಎನ್ನುವಾಗ ಚಂದಣ್ಣನಿಗೆ ತುಂಬಾ ಕೋಪ ತಂದಿತ್ತು. ತಾನೆ ಮೂಕಿಯ ಮೇಲೆ ಕುಳಿತು, ಎರಡು ಕಡೆಗೂ ಬಗ್ಗಿ 'ಕಡಾಣಿ' ಗಳು ಸರಿಯಾಗಿವೆಯೇ ನೋಡಿಕೊಂಡ. ತಲೆಯನ್ನು ಭದ್ರವಾಗಿ ಗಂಟಿಕ್ಕಿ, ಹಲ್ಲುಮುಡಿಕಚ್ಚಿ ಬಲಗೋಲೆತ್ತಿನ ಬೆನ್ನಿನ ಮೇಲೆ ಬಲವಾಗಿ ಚಪ್ಪರಿಸಿ, ಎಡಗೋಲೆತ್ತಿನ ಹಗ್ಗವನ್ನು ಬಿಗಿ ಹಿಡಿದನು. ಚಂದಣ್ಣನ ಗಾಡಿ ಎಡಕ್ಕೆ ತಿರುಗಿತು. ಎರಡೆತ್ತುಗಳಿಗೂ ಎರಡು ಭದ್ರವಾಗಿ ಕೊಟ್ಟ ಮೇಲೆ ಅವು ತಮ್ಮ ಶಕ್ತಿಮೀರಿ ಓಡಲಾರಂಭಿಸಿದುವು. ಗಾಡಿ ಅರ್ಧರ್ಧ ಅಡಿ ಎತ್ತಿ ಎತ್ತಿ ಕುಕ್ಕಲಾರಂಭಿಸಿತ್ತು. ಒಳಗಿದ್ದ ನಾಗುವು ತುದಿ ಸಾಲಗೆ ಕಚ್ಚಿಕೊಂಡುಬಿಟ್ಟಳು. ನಾಗುವಿನತ್ತೆ 'ಮೆಲ್ಲಗೆ ಹೋಗಬುಡು' ಎಂದು ನಾಲ್ಕುಬಾರಿ ಕೂಗಿಕೊಂಡರು. ಚಂದಣ್ಣನಿಗೆ ಅದು ಲಕ್ಷ್ಯವೇ ಇಲ್ಲ. ನಮ್ಮ ಈ ಹುಡುಗರು ಬಿಟ್ಟರೇ; ಅವರೂ ಓಡಿಸಿದರು. ಚಂದಣ್ಣನ ಕಿಚ್ಚು, ಹುಚ್ಚುಗಳೆರಡೂ ಅವನ ಎತ್ತುಗಳಿಗೂ ಹತ್ತಿರಬಹುದು. ಅವು ಹಿಂದಿನವರಿಗೆ ದಕ್ಕಲಿಲ್ಲ. ಇಬ್ಬರೂ ಓಡಿಸುತ್ತಲೇ ಇದ್ದರು. ಹಿಂದಿನ ಸೆಜ್ಜೆ ಗಾಡಿಯ ಮಹಾವೀರರು ಗಾಡಿ ಓಡಿಸುವುದರಲ್ಲಿ ಪ್ರವೀಣರಲ್ಲ. ಅವರ ಉತ್ಸಾಹದ ಭರದಲ್ಲಿ ಅವರ ಗಾಡಿಯ ಎಡಗಡೆ ಚಕ್ರ ದಪ್ಪದೊಂದು ಕಲ್ಲುಹತ್ತಿದ್ದು ತಿಳಿಯದು. ಎತ್ತುಗಳು ಕಿತ್ತುಕೊಂಡು ಹೋದುವು. ಸೆಜ್ಜೆಯ ಗಾಡಿಯ ಹೆಜ್ಜೆ ತಲೆಕೆಳಗಾಯಿತು.

ಚಂದಣ್ಣನಿಗೆ ಗೆದ್ದೆನೆಂಬ ಸಂತೋಷದೊಡನೆ, ಕಣ್ಮರೆಯಾಗಬೇಕೆಂಬ ಕಾತರವೂ ಇದ್ದುದರಿಂದ ಅವನು ಗಾಡಿಯನ್ನು ನಿಲ್ಲಿಸಲೇ ಇಲ್ಲ. ತಮ್ಮೂರಿನ ಇನ್ನೊಂದು ಗಾಡಿಗೋಸ್ಕರ ಕಾಯಲೂ ಇಲ್ಲ.

ಸೆಜ್ಜೆಯ ಗಾಡಿ ಉರುಳಿದುದನ್ನು ನೋಡಿದ ನಾಗು, ಅವಳತ್ತೆಯರಿಗೆ ಮುಂದೆ ಏನಾಯಿತು ಎಂಬುದೇ ತಿಳಿಯಲಿಲ್ಲ. ತಿಳಿಯುವುದಕ್ಕೆ ಮುಂಚೆಯೇ ಅವರು ಅಂಗಳದಿಂದಾಚೆಗೆ ಹೋಗಿದ್ದರು. ಚಂದಣ್ಣ ಅಲ್ಲಿ ತನ್ನ ಗಾಡಿಯನ್ನು ನಿಲ್ಲಿಸಿ, ಹಿಂದಿನ ಗಾಡಿಗಾಗಿ ಕಾಯುತ್ತಿದ್ದನು. ತಿಂಗಳು ಚೆನ್ನಾಗಿ ಬೆಳಗುವ ಹೊತ್ತಿಗೆ ಗಾಡಿ ಬಂತು. ಉರುಳಿದ ಗಾಡಿಗೆ ಏನೂ ಅಪಾಯವಾಗಲಿಲ್ಲ. ಆ ಗಾಡಿಯನ್ನೂ ಕಟ್ಟಿಕೊಂಡೇ ಅವರು ಹೋದರು, ಎಂದು ತಿಳಿಯಿತು. ಅನಂತರ ಪಲುಕೂರಿನ ಗಾಡಿಗಳು 'ಏಳಸ್ವಾಗೆ' ಕಡೆಗೆ ನಡೆದುವು

೪

ಗಾಡಿಗಳು ಪಲುಕೂರನ್ನು ತಲಪಿದಾಗ ಲೆಕ್ಕಾಚಾರದಂತೆ ರಾತ್ರಿ ಹತ್ತು ಗಂಟೆಯಾಗಿತ್ತು. ಎಲ್ಲರೂ ಅವರವರ ಮನೆಗಳಿಗೆ ಇಳಿದು ಹೋದರು. ಮುದ್ದಪ್ಪನವರು ಮನೆಯಲ್ಲಿರಲಿಲ್ಲ. ನಾಗು ಬಂದಾಗಲೇ ಬಾಗಿಲಿನಿಂದಲೇ ಕೂಗಿದಳು. ಆಗ ಉತ್ತರ ಬರಲಿಲ್ಲ. ಅವಳತ್ತೆ ಅಡಿಗೆ ಮನೆಗೆ ಹೋದಾಗ ಅಲ್ಲಿ ಅಡಿಗೆಯ ಸುಳಿವೇ ಕಾಣಲಿಲ್ಲ. ಬಾಗಿಲಿಗೆ ಬೀಗವೂ ಹಾಕಿರಲಿಲ್ಲ. ಬರೀ ಬಾಗಿಲೆಳೆದುಕೊಂಡಿತ್ತು. ಅವರಿಬ್ಬರಿಗೂ ಆಶ್ಚರ್ಯವಾಯಿತು. ರಾತ್ರಿ ಇಷ್ಟು ಹೊತ್ತಿನಲ್ಲಿ ಬಾಗಿಲೆಳೆದುಕೊಂಡು ಎಲ್ಲಿಗೆ ಹೋಗಿರಬಹುದು ಮುದ್ದಪ್ಪನವರು!

ಎದುರು ಮನೆ ಬಸವಣ್ಣನಿಗೆ, ನಾಗುವಿನತ್ತೆ, ವಿಚಾರಿಸಲು ಹೇಳಿಕಳುಹಿಸಿದರು. ಮರುಗಳಿಗೆಯಲ್ಲೇ ಮುದ್ದಪ್ಪನವರು ಬಸವಣ್ಣನ ಜೊತೆಯಲ್ಲಿಯೇ ಬಂದರು. ಅಕ್ಕ, ಇನ್ನೂ ಪ್ರಶ್ನೆ ಹಾಕೇ ಇರಲಿಲ್ಲ. ಅಷ್ಟರಲ್ಲೇ ಅವರು ಪ್ರಶ್ನೆಗುತ್ತರವಾಗಿ;

"ಕಪನಯ್ಯ ಮಲಗಿಬುಟ್ಟವ್ರೆ! ನೀವು ಅತ್ತಾಗ್ಹೋದ ಬೆಳಗ್ಗೆಯೇ ಚಳಿಜ್ವರ ಬಂದುಬುಡುತು" ಎಂದರು.

"ಅಯ್ಯೊ! ಸುಮ್ಮನೆ ಬಿಸಿಲಲ್ಲಿ ತಿರುಗಿದರೆ ಇನ್ನೇನು ಮತ್ತೆ, ಹೆಂಗವ್ನೆ ಈಗ?" ಎಂದರು ಅವರಕ್ಕ.

"ಈಗ ಪರವಾ ಇಲ್ಲ. ಪಂಡಿತರು ಮದ್ದು ಕೊಟ್ಟವ್ರೆ. ನಾನು ನಾಲ್ಕು ದಿನದಿಂದಲೂ ಅಲ್ಲೀ ಇದ್ಬುಟ್ಟಿದ್ದೆ" ಎಂದರು ಮುದ್ದಪ್ಪ.

"ಇದೇನು ಬಂತಪ್ಪಾ ಇನ್ನು ಅಂತಿದ್ದೆ! ಸದ್ಯ, ಹುಸಾರಾದರಲ್ಲ. ಅಂತೂ ನೀನು ಇಲ್ಲೀ ಉಳ್ಕೊಂಡದ್ದು ಒಳ್ಳೇದಾಯ್ತು" ಎಂದು ನಿಟ್ಟುಸಿರು ಬಿಟ್ಟು ಅಡಿಗೆಗೆ ಸಿದ್ಧರಾಗಲು ಹೊರಟರು. ಮುದ್ದಪ್ಪನವರು "ನಾಗು, ಹೊಟ್ಟೀ ಹಸೀತದಾವಮ್ಮಾ?" ಅಂದರು. ನಾಗು, "ಇಲ್ಲಾ ಕಾಣಪ್ಪಾಜಿ" ಅಂದಳು. ಅದಕ್ಕೆ ಅವರು ಅಕ್ಕನಿಗೆ "ಮತ್ತೆ ಇಷ್ಟೊತ್ನಲ್ಲಿ ಇನ್ಯಾಕೆ ಅಡಿಗೆ! ಒಂದ್ಸರಿ ನನಗೆ ಅಲ್ಲೀ ಊಟ ಆಯ್ತು" ಅಂದರು. ಅವರಕ್ಕ ಮರೆತಿದ್ದು ಜ್ಞಾಪಿಸಿಕೊಂಡವ ರಂತೆ "ಹ್ಞೂ, ಅದೂ ಸರಿ. ನನಗೆ ಜ್ಞಾನ ಸುದ್ದ ಇಲ್ಲ. ನಾನೆಲ್ಲೋ ಹೊತ್ತೂ ಈಗ್ತಾನೆ ಬಿದ್ದಿದೇ ಅನ್ಕಂಡೆ. ಬೇಕಾದರೆ ನಾಗು, ಒಂದಷ್ಟು ಹಾಲು ಕುಡ ಕಂಡು ಮಲೀಕತಾಳೆ" ಅಂದರು. ಮುದ್ದಪ್ಪನವರು ಮನೆಯಲ್ಲಿ ನಿಲ್ಲಲೇ ಇಲ್ಲ. ಸೀದಾ ಕಪನಯ್ಯನವರ ಮನೆಗೆ ಹೋದರು.

ಕಪನಯ್ಯನವರಿಗೆ ಈಗ ವಾಸಿ ಎಂದು ನೋಡಿದವರೆಲ್ಲ ನಿಜವಾದ ನಂಬಿಕೆ ಯಿಂದ ಹೇಳುತ್ತಿದ್ದರೂ ಕಪನಯ್ಯನವರಿಗೆ ಅನುಮಾನ. ಪದೇ ಪದೇ ಮುದ್ದಪ್ಪನವರಿಗೆ "ನನ್ನ ನಾಲ್ಗೆ ಬೆಳ್ಗದಾ! ಕಣ್ಣು ಬೆಳ್ಗದಾ! ಕಾಲು ಇಷ್ಟ್ರೀತ ತಣ್ಗದೆ ಅಲ್ವಾ!" ಮುಂತಾದ ಅವಿವೇಕದ ಪ್ರಶ್ನೆಯನ್ನೇ ಹಾಕು ತ್ತಿದ್ದರು. ಮುದ್ದಪ್ಪನವರು ಮೊದಲೇ ಕೊಂಚ ಹೆದರಿಕೆ—ಮನುಷ್ಯರು. ಅವರಿಗೆ ಇನ್ನಷ್ಟು ಘಾಬರಿಯಾಗಿ 'ಛೆ! ಹಂಗೆಲ್ಲ ಮಾತಾಡ್ಬಾರ್ದು' ಅನ್ನೋ ಅಷ್ಟೂ ಬಾಯಿ ಬರುತ್ತಿರಲಿಲ್ಲ.

ಕಪನಯ್ಯನವರಿಗೆ ಜ್ವರ ಬಂದು ಎರಡೇ ದಿನ, ಏನೇನೋ ಮಾತನಾಡಿ ಕೊಳ್ಳುತ್ತಿದ್ದರಂತೆ. ಮುದ್ದಪ್ಪನವರು ಊಟ ಮುಗಿಸಿ ಕಪನಯ್ಯನವರ ಹಾಸಿಗೆಯ ಪಕ್ಕಕ್ಕೆ ಬಂದು ಕುಳಿತರು. ತಕ್ಷಣ ಕಪನಯ್ಯನವರು ಮುದ್ದಪ್ಪ ನವರ ಕೈ ಹಿಡಿದುಕೊಂಡು ಅಳಲು ಮೊದಲಿಟ್ಟರು. ಮುದ್ದಪ್ಪನವರು "ತ್ಸ್! ಇದೇನು—ಶ್—ಸುಮ್ಮನಿರಬೇಕು" ಎಂದು ಸಮಾಧಾನಪಡಿಸಲು ಪ್ರಯತ್ನ ಪಟ್ಟರು. ಆದರೆ ಕಪನಯ್ಯನವರ ಹಂಬಲ ಹೆಚ್ಚುತ್ತಲೇ ನಡೆಯಿತು. ಅವರು ಅಳುವಿನ ಮಧ್ಯೆ ಏನನ್ನೋ ಹೇಳಬೇಕೆಂದಿದ್ದರೂ ಕಣ್ಣೀರು ಮಾತಿಗೆ ಅವ ಕಾಶ ಕೊಡುತ್ತಿರಲಿಲ್ಲ.

ಎರಡು ಘಳಿಗೆಯಾದ ಮೇಲೆ, ಕಪನಯ್ಯನವರು ಸುಧಾರಿಸಿಕೊಂಡರು. ಕಪನಯ್ಯನವರ ಕೈ ಇನ್ನೂ ಮುದ್ದಪ್ಪನವರ ಕೈಗಳಲ್ಲೇ ಇತ್ತು. ರುದ್ರ ಗಂಭೀರತೆಯಲ್ಲಿ ಕಪನಯ್ಯನವರು ಪ್ರಸ್ತಾವಿಸಿದರು.

"ಮುದ್ದಪ್ಪಣ್ಣ, ನಾನು ಈ ಕಾಯ್ಲೆ ಇಂದ ಏಳಕ್ಕಿಲ್ಲ—ನೀವು ಮಾತ್ರ ನಂಗೆ ವಾಸಿ ಅಂತಾ ಇದೀರಿ. ನನಗೆ ನಂಬ್ಕೆ ಇಲ್ಲ. ನನ್ನ ಮಾತು ಕೇಳ್ತೀಸೀ ಅಂದರೆ ಒಂದು ಮಾತು ಹೇಳ್ಕತೀನಿ" ಅಂದರು.

"ಈ ರೋಗದ ವಿಷ್ಯ ಒಂದು ಬುಟ್ಟು ಏನು ಬೇಕಾದ್ರೂ ಕೇಳಿ" ಎಂದು ಮುದ್ದಪ್ಪನವರು ಸಿದ್ಧರಾದರು. ಕಪನಯ್ಯನವರು ಒಣಗಿದ ತುಟಿಗಳನ್ನು ಬಿಸಿಯಾದ ನಾಲಗೆಯಿಂದ ತೇವಮಾಡಿಕೊಂಡರು.

"ನಿಮ್ಮ ನಾಗೂನ ನಮ್ಮನೆಗೆ ಕೊಟ್ಬುಬಿಡಿ." ಕಪನಯ್ಯನವರ ಪ್ರಾರ್ಥನೆ ಇದು. ಮುದ್ದಪ್ಪನವರ ಕಿವಿಗೆ ಹೊಚ್ಚಹೊಸಮಾತುಗಳು.

ಕಪನಯ್ಯನವರ ಬಾಯಿಯಲ್ಲಿಯೂ ಬಂದುಬಿಟ್ಟಿತು. ಮುದ್ದಪ್ಪನವರು ಈಗ ತೀವ್ರವಾಗಿ ಆಲೋಚಿಸಬೇಕು. ಕಪನಯ್ಯ ಯೋಗ್ಯರು. ಅವರ ಒಬ್ಬನೇ ಮಗ ಚಂದಣ್ಣ, ಮುದ್ದಪ್ಪನವರ ಕಣ್ಣುಮುಂದೆ ಬೆಳೆದ ಹುಡುಗ. ಕಪನಯ್ಯನವರು ಮುದ್ದಪ್ಪನವರಿಗೆ ನೆಂಟರೂ ಹೌದು ಚಂದಣ್ಣ ಸಾಯುವವರೆಗೂ ಸೋಮಾರಿಯಾಗೇ ಇದ್ದರೂ ಸಮೆಯದ ಅನ್ನಬಟ್ಟೆ ಗಳಿವೆ. ಕಪನಯ್ಯನವರ ವಂಶ ಹೆಸರುವಾಸಿಯಾದ ಜಮೇದಾರರ ವಂಶ. ಇವೆಲ್ಲ ನಾಗುವನ್ನು ಚಂದಣ್ಣನಿಗೆ ಕೊಡಬೇಕೆಂದು ಮುದ್ದಪ್ಪನವರಿಗೆ ತೋರಿದಾಗ ಒದಗುತ್ತಿದ್ದ ವಿಷಯಗಳು.

'ಒಂದು ಹೆಣ್ಣಿಗೆ ಒಬ್ನೇ ಗಂಡ ಇರಬೇಕೆಂದ್ರೆ, ಬೇರೇ ಊರಿನ ಹೆಣ್ಣು ತರಬೇಕು; ಬೇರೇ ಊರಿಗೆ ಹೆಣ್ಣು ಕೊಡಬೇಕು' ಎಂಬ ತಮ್ಮಕ್ಕನ ಕಠೋರವಾದ ಮಾತುಗಳು ಮುದ್ದಪ್ಪನವರ ಜ್ಞಾಪಕಕ್ಕೆ ಬರುತ್ತದೆ. ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತಿದ್ದ, ತಪ್ಪಿಲ್ಲದಿದ್ದಾಗಲೂ ತಗ್ಗಿ ನಡೆಯುತ್ತಿದ್ದ ತನ್ನ ಪುಟ್ಟನಂಜುವಿನ ಪ್ರಾಣವನ್ನು ತೆಗೆದುಕೊಂಡ ಮಾತದು. ಈ ವಿಷಯ ಜ್ಞಾಪಕಕ್ಕೆ ಬಂದಾಗ ಮುದ್ದಪ್ಪನವರಿಗೆ ರೋಸಿಹೋಗುತ್ತದೆ. ಆದರೆ ಕಪನಯ್ಯನವರು ಆತ್ಮಸ್ನೇಹಿತರು!

ಈ ಒಳತೋಟಿಗೆ ಸಿಕ್ಕಿದ್ದ ಮುದ್ದಪ್ಪನವರ ಕಿವಿಯ ಮೇಲೆ ಬಿದ್ದ "ನಿಮ್ಮ ನಾಗೂನ್ನ ನಮ್ಮನೆಗೆ ಕೊಟ್ಟುಬಿಡಿ" ಎಂಬ ಮಾತುಗಳು ಅವರನ್ನು ದಿಙ್ಮೂಢರನ್ನಾಗಿ ಮಾಡಿದುವು. ಅವರಿಗೆ ಏನು ಹೇಳಲೂ ತೋಚದು. ಕೇಳುವುದನ್ನು ಕೇಳಿಬಿಟ್ಟು ಕಪನಯ್ಯನವರು, ತಮ್ಮ ನಿರ್ವಿಣ್ಣ ಕಣ್ಣುಗಳಲ್ಲೇ ಕಿವಿಯನ್ನಿಟ್ಟುಕೊಂಡು ಕಾದಿದ್ದಾರೆ. ಮುದ್ದಪ್ಪನವರ ಮನೋಸ್ಥಿತಿ ತೀರ ಹದಗೆಟ್ಟಿತ್ತು. ಯಾವ ದೇವರ ಪುಣ್ಯವೋ ಏನೋ, ಹೊರಗೆ ಕಟ್ಟಿದ್ದ ಹೋರಿಗಳ ಗೆಜ್ಜೆ ಶಬ್ದವಾಗಿ ಮುದ್ದಪ್ಪನವರಿಗೊಂದು ಯೋಚನೆ ಹೊಳೆಯಿತು!

'ತ್ಸ್! ಒಂದು ಜೊತೆ ಹೋರಿಗಳ ವ್ಯಾಪಾರ ಕುದುರಕ್ಕೇನೇ ಒಂದು ವಾರವಾದರೂ ಬೇಕು. ಅಂಥದ್ದರಲ್ಲಿ ಇದು ಮದುವೆ ವಿಷಯ, ಕೊಂಚ ನಿಧಾನ್ಸು' ಎಂದಿತು ಮುದ್ದಪ್ಪನವರ ಮನಸ್ಸು.

"ಆಗ್ಲೀ ಸುಮ್ಮನಿರಿ. ಮೊದಲು ನೀವು ಹುಷಾರಾಗಿ. ಆಮೇಲೆ ಅವೆಲ್ಲ ತೀರ್ಮಾನಮಾಡಿಕೊಳ್ಳೋಣ" ಎಂದರು.

ಕಪನಯ್ಯನವರಿಗೆ ಕೊಂಚ ಸಮಾಧಾನವಾದಹಾಗಾಯಿತು. ಅವರು ಮುದ್ದಪ್ಪನವರು ಒಪ್ಪಿಕೊಂಡರೆಂದೇ ಭಾವಿಸಿದರು. ಆ ಭಾವನೆ ಅವರಿಗೆ ಸಂತೋಷವನ್ನು ಕೊಟ್ಟಿತು. ಅವರ ಮುಖ ಆ ನಿಮಿಷದಿಂದಲೇ ಗೆಲವಾಯಿತು. ಮುದ್ದಪ್ಪನವರ ಶುಶ್ರೂಷೆಯಿಂದಾಗಿ ಕಪನಯ್ಯನವರು ಹತ್ತು ದಿನಗಳಲ್ಲಿ ಮೈತುಂಬಿಕೊಂಡು ಖಾಯಿಲೆಯನ್ನೇ ಮರೆತುಬಿಟ್ಟರು.

ನಾಲ್ಕಾರು ದಿನಗಳು ಕಳೆದ ಮೇಲೆ ಒಂದು ದಿನ ಅರ್ಧರಾತ್ರಿ ಸಮಯ. ನಾಯಿಗಳೂ ನಿಶ್ಚಿಂತೆಯಾಗಿ ನಿದ್ದೆಹೋಗಿದ್ದ ಆವೇಳೆಯಲ್ಲಿ ಕಪನಯ್ಯನವರ ಹಿತ್ತಿಲಿನಿಂದ 'ಅಯ್ಯಯ್ಯಪ್ಪ!' ಎಂದು ಗಟ್ಟಿಯಾಗಿ ಕೂಗಿಕೊಂಡ ಶಬ್ದವಾಯಿತು. ಚಂದಣ್ಣನಿಗೇ ಕೊಂಚ ಎಚ್ಚರವಾದದ್ದು. ಕಪನಯ್ಯನವರು ಗೊರೆಯುತ್ತಿದ್ದರು. ಚಂದಣ್ಣ ತಟ್ಟನೆದ್ದು ತನ್ನ ಅಪ್ಪನನ್ನು ಎಳಿಸಿದ. ಅಷ್ಟುಹೊತ್ತಿಗೆ ಕೂಗು ಮತ್ತೂ ಜೋರಾಗಿತ್ತು. ಕಪನಯ್ಯನವರು ಇದ್ದುದರಲ್ಲಿ ಧೈರ್ಯ ತೆಗೆದುಕೊಂಡು, ಲಾಟೀನು ಕೈಯಲ್ಲಿ ಹಿಡಿದುಕೊಂಡು ಕೂಗಿದ ಜಾಗಕ್ಕೆ ಹೊರಟರು. ಚಂದಣ್ಣ ಅವರನ್ನು ಹಿಂಬಾಲಿಸಿದ.

ಅರ್ಧರಾತ್ರಿಯಲ್ಲಿ ಬೆಳುದಿಂಗಳು ನಿರ್ಲಕ್ಷ್ಯವಾಗಿ ಬಿದ್ದಿದೆ. ಕಪನಯ್ಯನ ಹಿತ್ತಿಲಿನ ಚುಜ್ಜಲುಮರದಲ್ಲಿದ್ದ ಕಾಗೆಗಳೆಲ್ಲ ಎದ್ದುಬಿಟ್ಟವೆ. ಕಪನಯ್ಯನವರ ಮನೆಗೆ ಬೆಳೆದ ಗಡ್ಡವೋ ಎನ್ನುವ ಹಾಗೆ ದೊಡ್ಡ ನೆಲ್ಲಹುಲ್ಲಿನ ಮೆದೆಯು ಮೌನದಿಂದ ನಿಂತಿದೆ. ಹುಲ್ಲಿನ ಮೆದೆಯ ಹತ್ತಿರವೇ ಯಾರೋ ಬಿದ್ದು ಹೊರಳಾಡುತ್ತಿದ್ದಾರೆ.

ಇದನ್ನು ನೋಡಿದ ತಂದೆ ಮಕ್ಕಳ ಶರೀರಗಳಿಗೆ ಹಾವು ಕಡಿದಂತಾಯಿತು. ಹತ್ತಿರಕ್ಕೆ ಹೋಗಿ ನೋಡಿದರು. ಆತನಿನ್ನೂ ಸತ್ತಿಲ್ಲ. ಅವನು ಹೊಲೆಯರ ಜೂಕ ಎನ್ನುವುದು ಚೆನ್ನಾಗಿ ಗೊತ್ತು. ಆದರೇನು, ಕಪನಯ್ಯನವರು ಅವನನ್ನು ತೊಡೆಗೆ ತೆಗೆದುಕೊಂಡರು. ಚಂದಣ್ಣ ಹತ್ತಿರದ ಮನೆಯವರನ್ನೆಲ್ಲಾ ಹೆಸರು ಹಿಡಿದು ಕೂಗಿದನು. ಊರಿನ ಗಂಡಸರೆಲ್ಲ ಸೇರಿಬಿಟ್ಟರು.

ಕಪನಯ್ಯನವರು "ಜೂಕ! ಜೂಕ!" ಎಂದು ಕೂಗಿದರು. ಅವನ ತೋರುಬೆರಳು ಬೇಲಿಯ ಕಡೆಗೆ ನೀಡಿಕೊಂಡಿತ್ತು. ಅವನ ಬಾಯಿಯಲ್ಲಿ ರಕ್ತ ಬರುವುದಕ್ಕೆ ಮುಂಚೆ ಬಂದದ್ದು ಎರಡೇ ಮಾತು. 'ನೀ....ರು!....ಹಾವು!'

ಜೂಕ ಹಾವು ಕಡಿದು ಸತ್ತೇಹೋದನು. ಅವನು ಹುಲ್ಲು ಕದಿಯಲು ಬಂದಿದ್ದನಂತೆ. ಪೋಲೀಸಿನವರು, ಡಾಕ್ಟರು, ಬರುವವರೆಗೂ ಅಲ್ಲೇ ಇದ್ದುಬಿಡೋಣವೆಂದು ಎಲ್ಲರೂ ತೀರ್ಮಾನಿಸಿಕೊಂಡರು. ಹಾಗೇ ಹೆಣವನ್ನು ಮುಂದೆ ಹಾಕಿಕೊಂಡು ಸಾವಿನ ವಿಷಯವಾಗಿ ಮಾತನಾಡುತ್ತಿದ್ದರು. ಅದರ ಪೈಕಿ ಮುದ್ದಪ್ಪನವರಿಂದ 'ಒಂದೂರಿನ ಸಂಬಂಧದ ಒಂದೇ ಒಂದು ಮಾತಿನಿಂದ ನನ್ನ ಹೆಂಡತಿ ಸತ್ತಳು' ಎಂಬ ಮಾತು ಕಪನಯ್ಯನವರಿಗೆ ಬಲವಾಗಿ ತಗುಲಿತು. ಅದಕ್ಕೆ ಯಾವುದೋ ಒಂದು ಅರ್ಥ ಇವರಿಗೆ ಬಂತು. ಅದು ಅವರಿಗೆ ಬಲು ದುಃಖದಾಯಕವಾದ ಅರ್ಥ.

ಎರಡು ದಿನಗಳಾಚೆಗೆ ಕಪನಯ್ಯನವರಿಗೆ ಮುದ್ದಪ್ಪನವರ ಮನಸ್ಸು ತಿಳಿದುಹೋಯಿತು. ಅವರಿಗೆ ನಾಗುವನ್ನು ಚಂದಣ್ಣನಿಗೆ ಕೊಡುವ ಇಷ್ಟವಿಲ್ಲವೆಂದು ತಿಳಿದಮೇಲೂ ಕಪನಯ್ಯನವರು ಹಿಂದಿನ ಸ್ನೇಹವನ್ನು ಬಿಟ್ಟುಕೊಡಲು ಸಿದ್ಧರಾಗಿರಲಿಲ್ಲ. ಅದೇ ಮುದ್ದಪ್ಪನವರಿಗೂ ಬೇಕಾಗಿದ್ದದ್ದು. ಆದರೆ ತೀರ ಅಸುಖಿಯಾದವನು ಚಂದಣ್ಣನೊಬ್ಬನೇ.

ಚಂದಣ್ಣನಿಗೆ ತುಂಬಾ ಬೇಜಾರಾಗಿದೆ. ಅವನು ಏತಕ್ಕೋ ಹದಿನೈದು ಮೈಲಿ ದೂರದ ತಮ್ಮ ತಾಲ್ಲೋಕಿನ ಊರಿಗೆ ಹೊರಟನು. ಅವನು, ತನ್ನ–ನಾಗುವಿನ ಮದುವೆಯ ಯೋಚನೆ ಮುರಿದುಬಿದ್ದ ಹಿಂದಿನ ದಿನದಿಂದಲೇ ತಾಲ್ಲೂಕಿಗೆ ಹೋಗಿಬರುವ ಮನಸ್ಸು ಮಾಡಿದ್ದನು. ಆಗ ಹೋಗ ಬೇಕೆಂದಿದ್ದದ್ದು ತನಗೆ ಜುಟ್ಟು ತೆಗಸಿ 'ಕ್ರಾಪು' ಮಾಡಿಸುವುದಕ್ಕೆ. ಈಗವನು ಹೋಗಿರುವುದು ನಿಷ್ಕಾರಣವಾಗಿ.

ಅವನು ಊರಿನಲ್ಲಿದ್ದರೆ ಮನಸ್ಸಿಗೆ ಚೆನ್ನಾಗಿಲ್ಲವೆಂದು ತಾಲ್ಲೂಕಿಗೆ ಹೋದರೆ ಅಲ್ಲಿಯೂ ಅವನಿಗೆ ಏಟೇ ಬಿದ್ದದ್ದು. ಅವನು ಅಲ್ಲಿ ಬಟ್ಟೂರು ಪಟೇಲ್ ಹೊನ್ನಪ್ಪನವರನ್ನು ಪಲುಕೂರಿಗೆ ಕರೆದುಕೊಂಡು ಬರುವ ಭಾರ ಅವನ ಮೇಲೆ ಬಿತ್ತು. ಸುಮ್ಮಸುಮ್ಮನೇ ಹೊನ್ನಪ್ಪನವರು ಪಲುಕೂರಿಗೆ ಬರುತ್ತಿದ್ದರೆ ಒಂದು ಪಕ್ಷ ಆ ಕಷ್ಟವನ್ನು ಸಹಿಸಿಕೊಳ್ಳಬಹುದಾಗಿತ್ತು. ಆದರೆ ಈಗ ನಾಗುವನ್ನು ಕೇಳಲು ಹೊರಟಿರುವ ಹೊನ್ನಪ್ಪನವರನ್ನು ತಾನೇ ಕರೆದು ಕೊಂಡು ಹೋಗುವುದಂತೂ ಚೆಂದಣ್ಣನಿಗೆ ನುಂಗಲಾರದ ತುತ್ತು.

ಹೊನ್ನಪ್ಪನವರ ಸ್ವಂತ ಕುದುರೇಗಾಡಿ ಪಲುಕೂರನ್ನು ಪ್ರವೇಶಿಸಿತು. ಹೊನ್ನಪ್ಪನವರು ಮುದ್ದಪ್ಪನವರ ಮನೆಯನ್ನು ಪ್ರವೇಶಿಸಿದರು. ಮುದ್ದಪ್ಪ ನವರು ತುಂಬಾ ಆಶ್ಚರ್ಯದಿಂದ, ಅತ್ಯಂತ ನಮ್ರತೆಯಿಂದ ಅವರನ್ನು ಬರ ಮಾಡಿಕೊಂಡರು. ನಾಗುವೇ ಅವರ ಕಾಲಿಗೆ ನೀರು ಕೊಟ್ಟಳು. ಹೊನ್ನಪ್ಪ ನವರು ಸುಮ್ಮನೆ ನಾಗುವನ್ನೇ ನೋಡುತ್ತಿದ್ದರು. ಮುದ್ದಪ್ಪನವರಿಗೆ ಅನು ಮಾನ ಬಂತು. ಮಾತಿಗೆ ಪ್ರಾರಂಭವಾದಮೇಲೆ ಆ ಅನುಮಾನವು ಸ್ಥಿರ ವಾಯಿತು.

ಹೊನ್ನಪ್ಪನವರು, ಮುದ್ದಪ್ಪನವರೊಡನೆ "ತಮ್ಮನ್ನ ಬಹಳವಾಗಿ ಕೇಳಿಬಲ್ಲೆ. ನಮ್ಮೂರಿನ ಕೆಂಪಸಂಜಪ್ಪ ಅನ್ನೋರು ನಮ್ಮೊಂದನೇ ಹುಡುಗನಿಗೆ ನಿಮ್ಮ ಮಗಳೇ ಸರಿ ಅಂತ ನಿಮ್ಮ ಮಗಳು ಹುಟ್ಟಿದ ಸುದ್ದಿ ಕೇಳಿದಾಗ ಲಿಂದಲೇ ಹೇಳುತ್ತ ಬಂದಿದಾರೆ" ಎಂದರು.

ಮುದ್ದಪ್ಪನವರಿಗೆ 'ಯಾಕಪ್ಪಾ ಹೆಣ್ಣು ಹೆತ್ತೆ? ಇನ್ನೂ ಎಷ್ಟು ಜನ ರಲ್ಲಿ ನಿಷ್ಠುರವೋ! ಏನೊ!' ಎನ್ನಿಸಿಹೋಯಿತು. ಅವರಿಗೆ ನಾಗುವಿನ ಮದುವೆಯಾಗುವುದೇ ಒಂದು ಸಂಕಟದ ವಿಷಯ. ಅದರಲ್ಲಿ ಬಂದ ಇಂಥವ

ರಿಗೆ 'ಇಲ್ಲ' ಎಂದು ಕಳಿಸುವುದು ಮತ್ತಷ್ಟು ಕಷ್ಟದ ವಿಷಯ. ಎಲ್ಲರಿಗೂ ಒಂದೊಂದು ಹೆಣ್ಣು ಕೊಡಲು ಅವರಲ್ಲಿರುವುದು ಒಂದೇ ಹುಡುಗಿ. ಹೀಗಾಗಿ ಅವರಿಗೆ ತುಂಬಾ ಬೇಸರವಾಗಿಹೋಗಿತ್ತು. ಪದ್ಧತಿಯ ಪ್ರಕಾರ

"ಆಗಲಿ—ಸಂಬಂಧವೂಲೆ—ಋಣಾನುಬಂಧ ಇದ್ದರೆ ಯಾಕಾಗ ಬಾರದು" ಅಂದು ಸುಮ್ಮನಾದರು

ಅದಕ್ಕೆ ಹೊನ್ನಪ್ಪನವರು "ಸಂಬಂಧವೂಲೆ— ಋಣಾನುಬಂಧ ಎರಡೂ ಇತ್ತೂ ಅನ್ನಿಸಿ ಬಿಡೋಣ. ತಮ್ಮ ಒಪ್ಪಿಗೆ ಒಂದಾಗಲಿ!" ಎಂದು 'ನಿಕಾಲಸ್ತಾಗಿ' ಹೇಳಿದರು.

"ಹುಡುಗೀ ಇನ್ನೂ ಚಿಕ್ಕದು."

"ಆಗಲೇಳಿ—ಶೋಭನವಾದ ಮೂರನೇ ದಿನ ನಮ್ಮ ಮನೆಗೆ ಕಳುಹಿಸಿದರೂ ಪರವಾಯಿಲ್ಲ."

"ಅದು ಸರಿ—ಮದುವೆ ಆದರೆ ತಮ್ಮ ಪಕ್ಕದಲ್ಲಿ ನಿಂತು ಸೈ ಅನಿಸಿಕೊಳ್ಳೋ ಅಷ್ಟು ಯೋಗ್ಯತೆ ನಮಗಿಲ್ಲ."

"ನೋಡ್ದ್ರಾ! ಎಲ್ಲಕ್ಕೂ ಹಣಾನ್ನೇ ಮಧ್ಯ ತರ್ಬೇಡಲ್ಲ. ಹೆಣ್ಣಿನ ಗುಣ, ಮನೆ, ಮುಖ್ಯ ಮುದ್ದಪ್ಪನವರೆ. ದುಡ್ಡು ಭೂಮೀ ಮೇಲಿರೊ ಗುಡ್ಡೆ. ಎಲ್ಲಿಗೆ ಬೇಕಾದರೂ ಬದಲಾಯಿಸ್ಕೋಗಬಹುದು."

"ತಾವು ತಿಳಿದವರು—ಬಡವರ ಮನೆ ಹೆಣ್ಣು ಅನ್ನೋ ವಾತ್ಸಲ್ಯಕ್ಕೆ ಬಂದಿದೀರಿ. ಆದರೆ........"

"ಆದರೇ........ಅಂದ್ರೇನು ಮುದ್ದಪ್ಪನವರೇ?"

"ನಮ್ಮ—ನಮ್ಮವರಲ್ಲಿ ನಿಷ್ಠುರಕ್ಕೆ ಕಾರಣವಾಗುತ್ತದೆ. ಹಣವಂತರು ಅನ್ನೋ ಆಸೆಗೆ ಕೊಟ್ಟುಬುಟ್ಟ ಅಂತಾರೆ."

"ಓ! ಹಂಗಂದರೆ, ಮೊದಲೇ ನಿಮ್ಮ ಹತ್ತಿರದವರಿಗೇಂತ ಯಾವ್ದಾದ್ರೂ ತೀರ್ಮಾನ ಮಾಡಿಕೊಂಡಿದೀರೇನು?"

"................"

ಹೊನ್ನಪ್ಪನವರಿಗೂ ಸೂಕ್ಷ್ಮವಾಗಿ ಅರ್ಥವಾಗಿರಬೇಕು. ಅವರೂ ಹೆಚ್ಚು ಗಡಿಬಿಡಿ ಮಾಡಿಕೊಳ್ಳದೇ ನಗುತ್ತಲೇ ಪಲುಕೂರನ್ನು ಬಿಟ್ಟು ಹೊರಟುಹೋದರು. ಅವರು ನಾಗುವನ್ನು ನೋಡಿದ ಮೇಲೆ ತುಂಬಾ ಆಸೆ

ಯಾಗಿದ್ದರು ಅವಳು ತಮ್ಮ ಕಾಲಿಗೆ ಬಿದ್ದಾಗ ತಮ್ಮ ಸೊಸೆಯೆಂದೇ ತಿಳಿದು ಹರಸಿದ್ದರು. ಅವಳು ತಮ್ಮ ಮನೆಯನ್ನು ಬೆಳಗಿಸಬಲ್ಲಳೆಂದು ತಿಳಿದು ಕೊಂಡಿದ್ದರು. ತಮ್ಮ ಮನೆಯಂಥ ಸೌಖ್ಯದ ನೆಲೆಗೆ ತಮ್ಮ ಮಗುವನ್ನು ಕಳುಹಿಸಿಕೊಡಲು ಮುದ್ದಪ್ಪನವರು ಹಿಂದೆಗೆಯುತ್ತಾರೆ, ಎಂದು ಅವರು ನಿರೀಕ್ಷಿಸಿರಲಿಲ್ಲ. ಮುದ್ದಪ್ಪನವರ ನಮ್ರತೆಯೇ ಹೊನ್ನಪ್ಪನವರ ಆ ಅಹಂಕಾರವನ್ನು ಮುರಿದಿದ್ದುದರಿಂದ ಅವರು ನಿಷ್ಕಲ್ಮಷ ಹೃದಯರಾಗಿಯೇ ಹೊರಟು ಹೋದರು.

ಮುದ್ದಪ್ಪನವರಿಗೆ ನಾಗುವಿನ ಮದುವೆಯಾದ ಮೇಲೆ ಕಷ್ಟವೆನಿಸುತ್ತಿದ್ದುದು, ಈಗ ಆಗುವವರೆಗೇ ಮಹಾಕಷ್ಟವೆನಿಸತೊಡಗಿತು. ತಮ್ಮ ಪ್ರಾಣಕ್ಕೆ ಹೊಂದಿಕೊಂಡ ಕಪನಯ್ಯನವರನ್ನು ಈ ವಿಷಯದಲ್ಲಿ ಬೇಡವೆಂದಾಯ್ತು. ತಮ್ಮ ಆಸ್ತಿಯ ಹತ್ತರಷ್ಟು ಸಂಪಾದಿಸಿಟ್ಟಿರುವ, ಹೊನ್ನಪ್ಪನವರ ಐಶ್ವರ್ಯವನ್ನು ಒಲ್ಲೆನೆಂದಾಯಿತು. ಇನ್ನೂ ಎಷ್ಟೆಷ್ಟೋ ಜನರೆದುರಿಗೆ ಈ ಹಾಳು ಕತ್ತನ್ನು ತಗ್ಗಿಸಬೇಕೋ ಎಂಬ ಯೋಚನೆಯೇ ಮುದ್ದಪ್ಪನವರ ತಲೆಯನ್ನು ಕೊರೆಯಲು ಮೊದಲುಮಾಡಿತು.

ನಾಗು ಮಾತ್ರ ಮುದ್ದು ಮುದ್ದಾಗಿ ಹನ್ನೆರಡು ವರ್ಷದ ಹದ್ದು ಮೀರಿಬಿಟ್ಟಳು. ಅವಳ ಮನಸ್ಸಿನಲ್ಲಿ ಮದುವೆಯಾದರೆ ತನ್ನ ಅಪ್ಪ, ಅತ್ತೆ, ಇರುವ ಈ ಮೊದಲನೇ ಮನೆಯನ್ನು ಬಿಟ್ಟು ಹೋಗಬೇಕಲ್ಲ, ಎನ್ನುವ ಚಿಂತೆ ಹೊರತು ಮತ್ತೇನಿಲ್ಲ. ಮದುವೆ ಆಗಿಯೇ ತೀರಬೇಕೆಂಬ ನಿಯಮವನ್ನೇನೋ ತಂದೆ ಹಾಕಿಬಿಟ್ಟಿದ್ದಾರೆ. 'ಹೆಂಡತಿ' ಎಂದರೆ ಏನು ಎನ್ನುವ ವಿಷಯವಾಗಿ ಅತ್ತೆ ಆಗಾಗ್ಗೆ ಉಪನ್ಯಾಸ ಮಾಡುತ್ತಿದ್ದಾರೆ. ಇದೆಲ್ಲದರಿಂದ ನಾಗುವಿಗೆ ಒಂದು ವಿಧವಾದ ಸಂತೋಷವೂ ಅಲ್ಲ, ವಿಪರೀತ ಭಯವೂ ಅಲ್ಲ, ಎನ್ನುವ ಸ್ಥಿತಿಯೊದಗಿದೆ.

ಚಂದಣ್ಣ ತನ್ನ ಗಂಡನಲ್ಲವೆಂಬ ತೀರ್ಮಾನ ಆಗಲೇ ಆಗಿತ್ತು ಹೊನ್ನಪ್ಪನವರು ತನ್ನ ಮಾವನಲ್ಲವೆಂದು ಮೊನ್ನೆ ಸ್ಥಿರವಾಯಿತು. ಹಾಗಾದರೆ ಈ ವಿಷಯದ ಕೊನೆ ಎಲ್ಲಿ? ಅದೇ ನಾಗುವನ್ನು ಯೋಚನೆಗೀಡು ಮಾಡುತ್ತಿದ್ದುದು. ತನ್ನ ತಂದೆಯ ಸ್ಥಿತಿ ಮತ್ತು ತನ್ನ ಅತ್ತೆಯ ಮಾತುಗಳ ಪ್ರಕಾರ,

ನಾಗು, ಅನಿವಾರ್ಯವಾದ ಆ ಮದುವೆಯನ್ನೇ ಎದುರುನೋಡುತ್ತಿದ್ದಾಳೆ—ಗಂಡನನ್ನಲ್ಲ.

ನಾಗುವಿಗೆ ತನ್ನ ಮದುವೆಯ ವಿಷಯ ನೆನಪು ಬಂದಾಗಲೆಲ್ಲ, ಜೊತೆಯಲ್ಲೇ ಒಂದು ರಾಗೀಕಲ್ಲು ಪದ ಜ್ಞಾಪಕಕ್ಕೆ ಬರುತ್ತದೆ. ಅವರತ್ತೆ ಬೀಸುವಾಗ ಹಾಡುತ್ತಿದ್ದ ಅನೇಕ ಪದಗಳಲ್ಲಿ ನಾಗು, ಕೆಲವನ್ನು ಕಲಿತಿದ್ದಾಳೆ. ಅದರಲ್ಲಿ ಒಂದು ಪದ ಮಾತ್ರ ಅವಳಿಗೆ ಬಲು ಜ್ಞಾಪಕ. ಭಾರಿ ಭಾರಿ ವಿಷಯಗಳನ್ನು ನಾಲ್ಕು ಮಾತಿನಲ್ಲಿ ಹೇಳಿ, ಒಟ್ಟು ಹೆಂಗಸಿನ ಬದುಕನ್ನೇ ಹುಟ್ಟಿಸಿ, ಕೊನೆಮುಟ್ಟಿಸಿ, ಬಿಟ್ಟಿದ್ದಾರೆ ಆ ಪದವನ್ನು ಮಾಡಿದ ಪುಣ್ಯಾತ್ಮರು.

> 'ತಾಯಿದ್ರೆ ತವರ್ಹೆಚ್ಚು—ತಂದಿದ್ರೆ ಬಳಗ್ಹೆಚ್ಚು
> ಸಾವಿರಕೆ ಹೆಚ್ಚುಽಽ ಪತಿರಾಯ‌ಽಽ ॥ ೨ ॥
> ಸಾವಿರಕೆ ಹೆಚ್ಚು ಪತಿರಾಯ‌ಽ—ಅಽವಽಗಿಂತಽ
> ಮಾಣಿಕದ ಹರಳು ಮಽಗಽ ಹೆಚ್ಚು'

ಇದು ನಾಗುವಿನ ಹೃದ್ಗತವಾಗಿರುವ ಸಂಗೀತ, ಸಾಹಿತ್ಯ, ಸಂಸ್ಕೃತಿ—ಎಲ್ಲ. ಆ ಚರಣದ ಪ್ರತಿಯೊಂದು ಕಣವೂ ಅವಳ ರಕ್ತದಲ್ಲಿ ಕಲಸಿಹೋಗಿದೆ. ಇದರಂತೆಯೆ ತಾನು ಬಾಳಬೇಕೆಂದೂ ಅದು ಪ್ರಕೃತಿ ನಿಯಮವೆಂದೂ ನಾಗುವಿಗೆ ತಿಳಿದುಹೋಗಿದೆ.

ಒಂದಾರು ತಿಂಗಳು ಮುದ್ದಪ್ಪನವರಿಗೆ ಬಿಡುಗಡೆ ಸಿಕ್ಕಿತ್ತು. ನಾಗುವಿಗೂ ಈ ಭಾವೀ ನೆಂಟರುಗಳ ಶುಶ್ರೂಷೆ ನಿಂತಿತ್ತು. ಈಚೀಚೆಗೆ ಅದರ ವಿಷಯವೇ ಎಲ್ಲರಿಗೂ ಮರೆತುಹೋಯಿತು. ಅಪ್ಪ, ಅತ್ತೆ, ನಾಗು ಎಲ್ಲರೂ ಗೆಲವಾಗಿದ್ದುಬಿಟ್ಟರು.

ಬೆಳಗ್ಗೆ ಎದ್ದು ಸ್ನಾನ, ಶಿವಪೂಜೆ, ತಂಗಳು ತೀರಿಸಿಕೊಂಡು ಮುದ್ದಪ್ಪನವರು, ತೋಟದ ಹುಣಿಸೇ ಹಣ್ಣನ್ನು ಉದುರಿಸುತ್ತಿದ್ದ ಕಡೆಗೆ ಹೊರಟಿದ್ದರು. ಅವರಕ್ಕ ಮನೆಗೆ ಕೊಂಚ ಬೇಗ ಬರಬೇಕೆಂದೂ, ನೀರುಮನೆಯ ಗೋಡೆಯನ್ನು ಒಂದಿಷ್ಟು ಸರಿಪಡಿಸಬೇಕೆಂದೂ ಹೇಳಿದರು. ಅದಕ್ಕೆ ಮುದ್ದಪ್ಪನವರು ತಲೆತೂಗಿ, ಹೊರಟರು.

ಅವರಿಗಿಂತ ಮುಂಚೆ ಹೋದ ಕಂಬಳದ ಆಳುಗಳು ಆಗಲೇ ಮರವನ್ನೇರಿಬಿಟ್ಟಿದ್ದರು. ಬೆಳಗ್ಗೆ ಹತ್ತು ಘಂಟೆ ಸಮಯವಾದರೂ ಬಿಸಿಲಿಗೆ ಪ್ರಾಯ ಬಂದುಬಿಟ್ಟಿತು. ಆ ಆಲದ ಸಸಿಯ ಕೆಳಗೆ ಮುದ್ದಪ್ಪನವರು ಮಲಗಿಬಿಟ್ಟರು. ತೊಗರೀ ಗಿಡಗಳು ಆಳುದ್ದ ಬೆಳೆದು ಬಿಸಿಲಿನಲ್ಲಿ ತೂಗಾಡುತ್ತ ಮೈ ಕಾಯಿಸಿಕೊಳ್ಳುತ್ತಿದ್ದುವು. ತೊಗರೀ ತರಳುಗಳು ಗಿಡದ ಸುತ್ತಲೂ ತುಂಬಿಕೊಂಡು, ಹೊಲವೆಲ್ಲ 'ಗಳಗಳ' ಶಬ್ದವಾಗುತ್ತಿತ್ತು. ನಿಂಬೇ ಗಿಡಗಳ ಗುಂಪಿನಿಂದ ಯಾವುದೋ ಹಕ್ಕಿ ಯಾವುದೋ ಆನಂದದಿಂದ ಕೂಗಿಕೊಳ್ಳುತ್ತಿತ್ತು. ಹುಣಿಸೇ ಗಿಡದಿಂದ ಅಪ್ಪಿತಪ್ಪಿ ಕೊಳದೊಳಕ್ಕೆ ಬೀಳುತ್ತಿದ್ದ ಹುಣಿಸೇಹಣ್ಣುಗಳು 'ಟೊಳಪ್, ಟೊಳಪ್' ಎನ್ನುತ್ತಿದ್ದುವು. ಬಿಸಿಲು ಹೇಗಿದ್ದರೂ ಗಾಳಿ ಇನ್ನೂ ಕಾದಿರಲಿಲ್ಲ. ಗಾಳಿ ನಿಂಬೇ ಗಿಡಗಳ ಕಡೆಯಿಂದ ತಣ್ಣಗೆ ಬೀಸುತ್ತಿದ್ದು, ನಿಂಬೇ ಹೂಗಳ ಸುವಾಸನೆ, ಗಾಳಿಯ ತಂಪು, ಆಳುಗಳ ಮೇಲಿನ ನಂಬಿಕೆ, ಊಟಮಾಡಿದ ತಕ್ಷಣ ನಡೆದು ಬಂದಿದ್ದ ಆಯಾಸ ಇವುಗಳು ಸೇರಿ ಮುದ್ದಪ್ಪನವರನ್ನು ನಿದ್ದೆ ಮಾಡುವಂತೆ ಪ್ರೇರೇಪಿಸಿದುವು. ಅವರು ಮಲಗಿಬಿಟ್ಟರು.

ನಾಗುವಿಗೆ ಮದುವೆಯಾಗಿ ಹೋಯಿತು, ಪಲುಕೂಂಗೆ ಮೋಟಾರು ಬಂದಿದೆ; ಬಸವನಗುಡಿಯಲ್ಲಿ ಊಟಕ್ಕೆ ಕುಳಿತಿದ್ದಾರೆ. ರುದ್ರಮ್ಮ ಕೂಗಾಡಿಕೊಂಡು ಓಡಾಡುತ್ತಿದ್ದಾಳೆ; ಅಮಲ್ದಾರ್ರು 'ಬೇಲೀ ಕೇಳಿಸು' ಅಂತಿದ್ದಾರೆ. ಈ ಗದ್ದಲಗಳ ನಡುವೆ ನಾಗಮ್ಮ ತನ್ನ ಗಂಡನ ಜೊತೆಯಲ್ಲಿ ಬಂದಿದ್ದಾಳೆ. ನಾಗುವಿನ ಗಂಡ ಯಾರು?–ಚಂದಣ್ಣ. ನಾಗಮ್ಮ ಮುದ್ದಪ್ಪನವರನ್ನು ತಬ್ಬಿಕೊಂಡಳು. ಅವಳು ಹೋಗಬೇಕಂತೆ. ಅತ್ತುಬಿಟ್ಟಳು. ಮುದ್ದಪ್ಪನವರ ಕೆನ್ನೆತುಂಬಾ ಕಣ್ಣೀರು. ಬಿಸಿಬಿಸಿ ಕಣ್ಣೀರು.

ಕಣ್ಣೀರಿನ ಬಿಸಿಯಲ್ಲ ಅದು. ಬಿಸಿಲು, ಕೆನ್ನೆಗೆ ಬಿದ್ದಿದೆ. ಅಷ್ಟರಲ್ಲೀ ಯಾರೋ ಮುದ್ದಪ್ಪನವರನ್ನು ದೂರದಲ್ಲಿ ಕೂಗಿದ ಹಾಗಾಯಿತು. ಕೂಗು ಇನ್ನೂ ಹತ್ತಿರವಾಯಿತು. ಕನಸುಗಳೆಲ್ಲ ಗಂಟು ಮೂಟೆ ಕಟ್ಟಿಕೊಂಡುವು. ಮುದ್ದಪ್ಪನವರು ಕಣ್ಣುಬಿಟ್ಟರು. ಕೂಗಿದವರು ಶೀರ ಹತ್ತಿರವೇ ಇದ್ದಾರೆ. ಎದುರುಮನೆ ಬಸವಣ್ಣ, ತಮ್ಮ ಭುಜವನ್ನು ಕುಲುಕಿಸಿ 'ಅಪ್ಪಜ್ಯೊ' ಎಂದು ಕೂಗತ್ತಿದ್ದಾನೆ. ಮುದ್ದಪ್ಪನವರು ಸರಿಯಾಗಿ ನಿದ್ದೆಯಿಂದ ಎಚ್ಚರವಾದರು.

ಅವರು ತಾವು ಕಂಡದ್ದು ಕನಸು ಎಂದು ತಿಳಿದು ಸಂತೋಷದ ನಿಟ್ಟುಸಿರು ಬಿಟ್ಟು, "ಏನು ಬಸಣ್ಣ ?" ಎಂದರು.

ಬಸಣ್ಣ, "ಮನೇಲಿ ನೆಂಟರು ಬಂದವ್ರೆ. ನೀವಿಲ್ಲಿ ಬಿಸಿಲಲ್ಲೂ ಲೆಕ್ಕಕ್ಕಿಡ ಗದೆ ನಿದ್ದೆಮಾಡಿ" ಎಂದನು.

ಮುದ್ದಪ್ಪ, "ಯಾವ ನೆಂಟರು ?" ಎಂದರು ಆಕಳಿಸಿ.

ಬಸಣ್ಣ "ಬಿದರಟ್ಟೆಯವರಂತೆ. ಪಾಪ ಹೆಮ್ಮಕ್ಳು ಮಾತಾಡ್ಲೋ ಹಂಗಿಲ್ಲ; ಸುಮ್ನೆ ಮೊಖ ಮೊಖ ನೋಡ್ತಾ ಗಾಳಿ ಬೀಸ್ಕೊತ್ತಾ ಪಡಸಾಲೇಲಿ ಕುಂತವ್ರೆ, ಮಂದಲಿಗೆ ಹಾಕಿ ಕುಂಡ್ಸಿ ನಾನಿತ್ತಾಗೆ ಓಡ್ಬಂದೆ" ಎಂದನು.

ಮುದ್ದಪ್ಪನವರು ಎದ್ದು ಊರ ಕಡೆಗೆ ಬಸಣ್ಣನ ಜೊತೆಗೆ ಹೊರಟರು. ಮನೆಗೆ ಬಂದಿರುವರೆಂದು ಹೇಳಿದ ಇಬ್ಬರ ಪೈಕಿ ಒಬ್ಬರನ್ನು ಊಹಿಸುವುದೂ ಅವರಿಗೆ ಸಾಧ್ಯವಾಗಲಿಲ್ಲ. ಊಹಿಸುವುದಂತೂ ಬಿಡಲಿಲ್ಲ. ಯೋಚಿಸುತ್ತಾ ಕಾಲು ಹಾಕುತ್ತಿದ್ದಂತೆಯೇ ಊರು ಸಿಕ್ಕಿತು. ಇನ್ನೇನು ಅವರನ್ನು ಕಣ್ಣಾರ ನೋಡಬಹುದಲ್ಲ.

ಬಿದಿರಟ್ಟೆಯ ಶಿವಣ್ಣ ! ಒಬ್ಬನ ಮುಖ ಪರಿಚಯ ಸಿಕ್ಕಿತು. ಅವನ ಜೊತೆಯ ಇನ್ನೊಬ್ಬರು ಯಾರೋ ಮುದ್ದಪ್ಪನವರಿಗೆ ತಿಳಿಯದು. ಆದರೆ ಬಿದಿರಟ್ಟೆ ಶಿವಣ್ಣನಿಂದ ಅವರ ಹೆಸರೂ ಶಿವಪ್ಪನೆಂದು ಗೊತ್ತಾಯಿತು. ಶಿವಪ್ಪನವರಿಗೆ ಮುದ್ದಪ್ಪನವರಿಗಿಂತ ವಯಸ್ಸಾಗಿತ್ತು. ಅವರು ಬಹಳ ಗಂಭೀರಸ್ಥರು. ಅವರು ಬಂದ ಸಮಾಚಾರ ತಿಳಿಯುವುದಕ್ಕೇ ನಾಲ್ಕು ಗಂಟೆಗಳ ಕಾಲ ಹಿಡಿಯಿತು.

ಶಿವಪ್ಪನವರು ಸೆಜ್ಜೆಯವರು. ಸೆಜ್ಜೆಯ ನೆಂಟಸ್ತನ ನಾಗುವಿನತ್ತೆಗೆ ತುಂಬಾ ಒಪ್ಪಿತು. ಮುದ್ದಪ್ಪನವರು ಯಥಾಪ್ರಕಾರದ ಉದಾಸೀನವನ್ನೇ ಮಾಡಿದರು. ಬಿದಿರಟ್ಟೆ ಶಿವಣ್ಣ, ತಮ್ಮಕ್ಕ ಇವರುಗಳ ಒತ್ತಾಯ, ಗಂಡಿನ ಹೊಗಳಿಕೆ ಇವುಗಳಿಂದ ಬಲಮುತಕ್ಕೆ ಬಿದ್ದರು. ಮುದ್ದಪ್ಪನವರು ಸೆಜ್ಜೆಯ ಶಿವಪ್ಪನವರಿಗೆ ಸೋತರು.

"ಆಗಲಿ—ನಮ್ಮ ಹುಡುಗೀ ಗುರುತು ಕೊಟ್ಟಿರುತೀನಿ. ಅದನ್ನ ನೀವೆಲ್ಲಾದರೂ ತೋರಿಸಿ. ಹುಡುಗ ಹುಡುಗಿಯರಿಗೆ ಸರಿ ಬಂದರೆ ಮದುವೆ ಆಗಲಿ" ಎನ್ನುವಾಗ ಮುದ್ದಪ್ಪನವರ ದೇಹದಿಂದ ಬಾಯೇ ಬೇರೆ ಇದ್ದಂತೆ ತೋರಿತು.

ಅವರು ಆ ಮಾತನ್ನಾಡಿದ ಮೇಲೆ ಮದುವೆಯೇ ಆಗಿಹೋಯಿತೆನ್ನುವಷ್ಟು ಪೆಚ್ಚಾಗಿಹೋದರು. ಗಂಡು ಚೆನ್ನಾಗಿಲ್ಲದಿರಬಹುದು. ಶಾಸ್ತ್ರ ಸರಿಬರದಿರಬಹುದು. ಖರ್ಚುವೆಚ್ಚದ ಮಾತಿನಲ್ಲಿ ತೊಂದರೆ ಬರಬಹುದು. ಎಂಬ ಊಹೆಗಳು ಮುದ್ದಪ್ಪನವರಿಗೆ ಸುಖವನ್ನು ಕೊಟ್ಟುವು. ಅಂತೂ ಬಹಳ ಕಷ್ಟಪಟ್ಟು ನಾಗುವಿನ ಜನನದ ಗುರುತನ್ನು ಶಿವಪ್ಪನವರ ಕೈಯಲ್ಲಿ ಹಾಕಿದರು.

ಶಿವಪ್ಪನವರು, ನಾಗುವನ್ನು ಹಿಂದೆ ನೋಡಿದವರ ಹಾಗೆಯೇ ನೋಡಿದರು. ಅವಳನ್ನು ನೋಡಿದಾಗ ಅವರಿಗೊಂದು ಉದಾಹರಣೆ ಸಿಕ್ಕಿತು. ಎಷ್ಟಾದರೂ ಅವರು ಹಳ್ಳಿಯವರು, ಅವರಿಗೆ ತಿಳಿದಂತೆ ಹೇಳುತ್ತಾರೆ. ಊರಿನಲ್ಲಿ, 'ಹುಡುಗಿ ಹೇಗಿದ್ದಾಳೆ?' ಎಂದು ಕೇಳಿದರೆ 'ಮೈಸೂರಿನ ಗೋಕುಲಾಷ್ಟ್ಮಿ ದಿನ, ಕಡೇಲಿ ಬರ್ತದಲ್ಲಾ—ಕಾಲು, ಕೊರಳಿಗೆ ಅರಿಶಿನ ಗೆಜ್ಜೆಗಳನ್ನು ಕಟ್ಕೊಂಡು ತೂಕವಾಗಿ ನಡೆಯೋ—ಆ ಪಟ್ಟದಸಾ ಇದ್ದಂಗದೆ' ಎಂದುಬಿಡೋಣವೆಂದು ಮಾಡಿಕೊಂಡರು.

ಮಾರನೇ ದಿನ, ಶಿವಪ್ಪನವರು ಯುದ್ಧದಲ್ಲಿ ಗೆದ್ದವರಂತೆ ಸೆಜ್ಜೆಗೆ ಹೊರಟರು. ಅವರ ಋಣ ಪಲುಕೂರಿನಲ್ಲಿ ಉಳಿದುಕೊಂಡಿತೋ ಏನೋ ಎನ್ನುವಂತೆ ಅವರು ಮುದ್ದಪ್ಪನವರ ಮನೆಯಲ್ಲಿ ತಮ್ಮ ಛತ್ರಿಯನ್ನು ಮರೆತುಬಿಟ್ಟು ಹೋದರು.

೫

ನಾಗುವಿಗೆ ಈ ಸಂಬಂಧವು ನಿಂತಿತು. ಗಂಡಿನ ಕಡೆಯವರು ಬಂದ ಮೊದಲನೆಯ ದಿವಸವೇ ಇದು ಗೊತ್ತಾಗಿಹೋಯಿತು. ಸೆಜ್ಜೆಯ ಶಿವಪ್ಪನವರೊಡನೆ ಕಳುಹಿಸಿದ ಗುರುತು, ಗಂಡಿನ ಜಾತಕದೊಡನೆ ನಾಲ್ಕೈದು ದಿನಗಳಲ್ಲಿ ಹಿಂದಕ್ಕೆ ಬಂದಿತು. ಮುದ್ದಪ್ಪನವರು ಅದನ್ನು ತಮ್ಮೂರಿನ ಮಹಾಜ್ಯೋತಿಷಿ ಮಲ್ಲಿಕಾರ್ಜುನಪ್ಪನಿಗೆ ತೋರಿಸಿದರು. ಅವರು ಯೋಚಿಸಿ, ಕೊನೆಗೆ 'ಎಂಟು ಕೂಟಗಳು ಸೇರಿಕೊಳ್ಳುತ್ತವೆ' ಎಂದರು.

ಮುದ್ದಪ್ಪನವರು ಊಹಿಸಿದಂತೆ ಜಾತಕಗಳು ಸರಿಬರದೇ ಹೋಗಲಿಲ್ಲ. ಐಶ್ವರ್ಯದ ವಿಷಯ ಮಾತನಾಡೋಣವೆಂದರೆ ಮುದ್ದಪ್ಪನವರಿಗೂ ಶಿವಪ್ಪರವರಿಗೂ ಹೆಚ್ಚು ಅಂತರವಿರಲಿಲ್ಲ. ಇನ್ನೊಂದನ್ನೇ ನಿರೀಕ್ಷಿಸುತ್ತಾ ಕುಳಿತರು.

ಅದೂ ಅನಿರೀಕ್ಷಿತವಾಗಲು ಹೆಚ್ಚು ಕಾಲ ಬೇಕಾಗಲಿಲ್ಲ. ಮುದ್ದಪ್ಪನವರು ಸೆಜ್ಜೆಗೆ ಗಂಡು ನೋಡಲು ಹೊರಡಬೇಕೆಂದು ಕಪನಯ್ಯನವರೊಡನೆ ಸನ್ನಾಹ ಮಾಡಿಕೊಳ್ಳುತ್ತಿದ್ದಹಾಗೆಯೇ ಪಲುಕೂರಿಗೇ ಗಂಡು ಬಂದುಬಿಟ್ಟಿತು. ಗಂಡು ಬರುತ್ತಿದ್ದ ಗಾಡಿಯು ಇನ್ನೂ ಒಂದೆರಡು ಮೈಲಿ ದೂರದಲ್ಲಿರುವಾಗಲೇ ತಾಲ್ಲೂಕಿಗೆ ಹೋಗಿದ್ದ ಪಲುಕೂರಿನ ಉಪ್ಪಲಿಗ ಸಣ್ಣಸೆಟ್ಟಿ ಸೈಕಲ್ ಮೇಲೆ ಹಿಂತಿರುಗಿ ಬರುತ್ತಿದ್ದಾಗ ಸೆಜ್ಜೆಯ ಗಾಡಿಯನ್ನು ಗುರ್ತಿಸಿದನಂತೆ. ಬೇಕೆಂದು 'ಯಾವೂರು? ಎಲ್ಲಿಗೆ'? ಎಂದು ವಿಚಾರಿಸಿದ ಮೇಲೆ ಅವನಿಗೆ ಸ್ಪಷ್ಟವಾಗಿ ತಿಳಿಯಿತು. ಬಂದು, ಕಪನಯ್ಯನವರ ಪಡಸಾಲೆಯ ಮೇಲಿದ್ದ ಮುದ್ದಪ್ಪ ನವರಿಗೆ ಅದನ್ನು ತಿಳಿಸಿದನು. ಗಂಡು ಬಂತು! ಗಂಡು ಬಂತು! ಎಂಬ ಶಬ್ದ ವನ್ನು ಪಲುಕೂರೇ ಪ್ರತಿಧ್ವನಿಸಿತು. ನಾಗುವಿಗೆ ಆ ಮಾತು ಕೇಳಿ ಹೃದ ಯದ ಚಲನೆ ಜೋರಾಯಿತು.

ಸಾಮಾನ್ಯವಾಗಿ ಹೆಣ್ಣಿನ ಮನೆಗೆ ಗಂಡು, ಮದುವೆಗೆ ಮುಂಚೆ ಬರು ತ್ತಿರಲಿಲ್ಲ. ಪಲುಕೂರಿನ ಮದುವೆಗಳಿಗೇ ಇದು ಮೊದಲು. ಗಂಡು ಹೆಣ್ಣು ಗಳು ಮದುವೆಯಾಗುವುದಕ್ಕಿಂತ ಮುಂಚೆ ಒಬ್ಬರನ್ನೊಬ್ಬರು ನೋಡುವುದು ಅಲ್ಲಿಯವರಿಗೆ ಒಂದು ಸೋಜಿಗ. ಹಿಂದಿನ ಕಟ್ಟನ್ನು ಮುರಿದು ಬರುತ್ತಿರುವ ಪಲುಕೂರಿನ ಅಳಿಯ ಯಾವನೋ ಒಬ್ಬ ಅಜಾತಶತ್ರುವೇ ಇರಬೇಕು, ಎಂದು ಊರಿನವರು ತಿರ್ಮಾನಿಸಿಬಿಟ್ಟಿದ್ದರು. ಎಲ್ಲರ ಕಣ್ಣಿಗೂ, ಸದ್ಯ! ಅದೇ ಬೇಕಾಗಿದ್ದುದು. ಮುದ್ದಪ್ಪನವರಿಗೆ ಆಶ್ಚರ್ಯವಾಯಿತು. ಅವರು ಮನಸ್ಸಿಲ್ಲದ ಮನಸ್ಸಿನಿಂದ ಸೆಜ್ಜೆಗೆ ಹೊರಟಿದ್ದರು. ಅಂಥದರಲ್ಲಿ ತಮ್ಮ ತೊಂದರೆಯನ್ನು ತಪ್ಪಿಸಿದ ಮನುಷ್ಯನನ್ನು ಮನಸಾರ ವಂದಿಸಿದರು.

ಪದ್ಧತಿಯನ್ನು ಮುರಿದ ಧೀರ ಊರ ಬಾಗಿಲಿಗೆ ಬಂದೇ ಬಂದನು. ಜೊತೆಯಲ್ಲಿ ಹಿಂದೆ ಬಂದಿದ್ದ ಬಿದಿರಟ್ಟಿ ಶಿವಣ್ಣನೇ ಬಂದಿದ್ದನು. ಬಿದಿರಟ್ಟಿ ಶಿವಣ್ಣ ಈ ಮದುವೆಯನ್ನು ಮಾಡಿಸುವುದಾಗಿ ಪ್ರತಿಜ್ಞೆ ಹೊತ್ತಿರಬೇಕು. ಅದಕ್ಕೆ ಅವನಿಗಿಷ್ಟು ಮುತುವರ್ಜಿ. ಅವನೇ ರಾಜಶೇಖರನಿಗೂ ಮುದ್ದಪ್ಪನವ ರಿಗೂ ಕಪನಯ್ಯನವರಿಗೂ ಭೇಟಿ ಮಾಡಿಸಿದನು.

ರಾಜಶೇಖರ ರೂಪಿನಲ್ಲಿ ಸುಂದರ. ಯಾರಾದರೂ, ಅವನಲ್ಲಿ ಏನಾದರೂ ಐಬು ಕಟ್ಟಿದರೆ ನೋಡಿದವರು ನಕ್ಕುಬಿಡುತ್ತಿದ್ದರು. ಮುದ್ದಪ್ಪನವರಿಗೇ

ನಾಗುವಿನ ಸೌಂದರ್ಯ ಸಾರ್ಥಕವಾಯಿತೆನ್ನಿಸಿತು. ರಾಜುವಿನ ರೂಪೊಂದೇ ಹೆಚ್ಚುಳಿಕೆಯಲ್ಲ ಅವನ ವಿದ್ಯೆಯು ಅವನ ಮುಖದ ಬೆಳಕಾಗಿತ್ತು. ಅಂದರೆ ಅವನೊಬ್ಬ ವಿದ್ವಾಂಸನಲ್ಲ. ಮಾನವ ಸಂಸ್ಕೃತಿಗೆ ಬೇಕಾದಷ್ಟು ವಿದ್ಯೆಯನ್ನು ಪಡೆದವನು ಮಾತ್ರ. ಅವನು ಅಪ್ರತಿಮ ಆಶಾವಾದಿ. ಆದುದರಿಂದ ನಗೆಗಾರ. ನಗುವ ಮುಖವನ್ನು ನೋಡುವುದೇ ಅಂದ. ಅದರಲ್ಲಿ ರಾಜುವಿನ ನಗುಮುಖ ವನ್ನು ನೋಡುವುದು ಎಲ್ಲರಿಗೂ ಆನಂದ ಆದರೆ ರಾಜುವು ಕೊಂಚ ಸಂಕೋಚ ಪ್ರಕೃತಿಯವನೆಂಬುದು ಮಾತ್ರ ಸತ್ಯ.

ಮುದ್ದಪ್ಪನವರು ಕೊನೆಗೆ ತಾವು ಮಾಡಿದುದೇ ಸರಿ ಎಂದುಕೊಂಡರು. ಹಿಂದೆ ಎರಡು ಸಂಬಂಧವನ್ನು ಬಿಟ್ಟದ್ದು ಮೂರನೇ ಈ ಸಂಬಂಧವನ್ನು ಒಪ್ಪಿ ದುದೂ ಎರಡೂ ಚೆನ್ನಾಯಿತು, ಎಂದುಕೊಂಡರು ರಾಜಶೇಖರನನ್ನು ನೋಡಿದ ಮೇಲೆ. ಅವರು ರಾಜುವನ್ನು ಒಪ್ಪಿಕೊಂಡದ್ದಕ್ಕೆ ಇನ್ನೊಂದು ಕಾರಣ ವಿದೆ. ಮದುವೆಗೆ ಮುಂಚೆ ರಾಜು, ತಮ್ಮೂರಿಗೆ ಬಂದು ನಾಗುವನ್ನು ನೋಡು ವುದು ಮುದ್ದಪ್ಪನವರಿಗೆ ಒಪ್ಪಿತ್ತು. ಏಕೆಂದರೆ ರಾಜುವು ನಾಗುವನ್ನು ನೋಡಿ ದನು ಎಂದರೆ ರಾಜುವನ್ನು ನಾಗುವೂ ನೋಡಿಕೊಂಡು ತೀರ್ಮಾನ ಹೇಳುವ ಅವಕಾಶವಿದೆ ಇಂಥ ಅವಕಾಶವನ್ನು ಕಲ್ಪಿಸಿಕೊಟ್ಟ ರಾಜುವನ್ನು ಅವರು ಮೆಚ್ಚರೆ!

ಮುದ್ದಪ್ಪನವರಿಗೆ ಅವರಕ್ಕ ಹೇಳಿದಮೇಲೆ ತಿಳಿಯಿತು ನಾಗು ರಾಜು ವನ್ನು ಈಗಾಗಲೇ ನೋಡಿರುವಳೆಂದು. ರಾಜು, ಪಲುಕೂರಿಗೆ ಬರುವುದಕ್ಕೆ ಕಾರಣ, ತನ್ನ ಸಂಸ್ಕೃತಿಯನ್ನು ತೋರಿಸಿಕೊಳ್ಳುವುದಕ್ಕೋಸ್ಕರ ಮಾತ್ರವೆ.

ರಾಜುವಿಗೋಸ್ಕರ ಸಿಹಿಯೂಟ ಏರ್ಪಾಡಾಯಿತು. ನಾಗುವೇ ಅವನಿಗೆ ನೀರುಕೊಟ್ಟು ಬಡಿಸಲು ನಿಂತಳು. ರಾಜುವಿಗೆ ಅದು ಆನಂದವೆನಿಸಿತು. ನಾಗು ರಾಜು, ಪರಸ್ಪರ ನೋಡಿದ್ದುದರಿಂದ ಅವರು ಪುನಃ ನೋಡುವುದ ಕ್ಕಾಗಿ ಒದ್ದಾಡಲಿಲ್ಲ ಆದರೂ ರಾಜು ತನ್ನ ಹೆಂಡತಿ ನಾಗುವಿನ ಮತ್ತು ನಾಗು, ತನ್ನ ಗಂಡ ರಾಜುವಿನ ದರ್ಶನವನ್ನು ಮಾತ್ರ ಬಹಳ ಭಕ್ತಿಯಿಂದ ಒಂದು ಬಾರಿ ತೆಗೆದುಕೊಂಡರು.

ಪಲುಕೂರಿನ ಚಂದಣ್ಣನೊಬ್ಬನನ್ನು ಬಿಟ್ಟರೆ ಮಿಕ್ಕವರಿಗೆಲ್ಲರಿಗೂ ಈ ಮದುವೆ ಒಪ್ಪಿಗೆ. ಎಂದರೆ, ಚಂದಣ್ಣನಿಗೆ ಈ ವಿಷಯದಲ್ಲಿ, ನಾಗು, ರಾಜು,

ಮುದ್ದಪ್ಪನವರು ಇವರ ಪೈಕಿ ಯಾರ ಮೇಲೂ ದ್ವೇಷವಿರಲಿಲ್ಲ. ತನ್ನನ್ನು ಕಡೆಗೆಣಿಸಿದ ತನ್ನ ಹಣೆಯ ಬರಹವನ್ನು ಬಯ್ದುಕೊಳ್ಳುವಾಗ ಮಾತ್ರ ನಡುವೆ ತಡೆಯಲಾರದೆ 'ಅಯ್ಯೋ! ಹಿಂಗ್ಯಾಕಾಯ್ತು' ಎನ್ನುತ್ತಾನೆ ಅಷ್ಟೆ. ಕಪನಯ್ಯನವರು ಋಣಾನುಬಂಧಕ್ಕೆ ತಮ್ಮ ಕೋಪವನ್ನು ಬಿಟ್ಟುಕೊಟ್ಟು ನಗುಮುಖರಾಗಿಯೇ ಮುದ್ದಪ್ಪನವರ ಈ ಕಾರ್ಯಗಳಲ್ಲಿ ಬಲಗೈ ಆಗಿ ನಿಂತರು.

ರಾಜು, ಎರಡೇ ದಿನ ಇದ್ದು ಸೆಜ್ಜೆಗೆ ಹೊರಟುಹೋದನು. ಬಿದಿರಟ್ಟಿಯ ಶಿವಣ್ಣ ಮಾತ್ರ ಪಲುಕೂರಿನಲ್ಲೇ ಇದ್ದನು. ಅವನಿಂದ ಗಂಡಿನ ಮನೆಯವರ ವಿಷಯಗಳೆಲ್ಲವನ್ನೂ ತಿಳಿದುಕೊಳ್ಳಬಹುದೆಂದು ಮುದ್ದಪ್ಪನವರು ಕುತೂಹಲ ರಾಗಿದ್ದರು. ಅಂತೆಯೇ ರಾಜು ಹೊರಟುಹೋದ ರಾತ್ರಿಯೇ ಪ್ರಾರಂಭಿಸಿದರು.

"ಶಿವಣ್ಣ, ಸೆಜ್ಜೆ ಶಿವಪ್ಪನವರು ಆ ಸುತ್ನಲ್ಲಿ ಹೆಂಗೆ?"

"ಇದೇನು ಮಾವಯ್ಯ, ನೀವೇಳೋ ಮಾತು. ಶಿವಪ್ಪಜೀ ಅಂದರೆ ಆ ಸುತ್ನಲ್ಲಿ ಅವರ ಹೋಬಳಿ ಶೇಕದಾರರಂಗಲ್ಲವಾ!" ಎಂದ ಶಿವಣ್ಣ.

"ಸರಿಯಪ್ಪ........ನಡೆ ನುಡಿ?"

"ನಡೆ ನುಡಿ! ಬಸವಣ್ಣನವರಂಥ ಪ್ರಾಣಿ ಅವರು."

"ಈ ರಾಜಪ್ಪ ಒಬ್ರೇಯೋ—ಮಕ್ಕಳು ಇನ್ನೂ ಇದ್ದಾರೊ?"

"ಸೋಮಶೇಕರಪ್ಪ ಅಂಥ ಇನ್ನೊಬ್ಬರು ಅವ್ರೆ!"

"ವಯ್ಸು?"

"ಏನು ಹದಿನೈದು ಇರಬೋದು."

"ಅವ್ರೂನೂ, ರಾಜಪ್ಪನ ಹಂಗೇ ಇದ್ದರಾ?"

"ಇರದು, ಅಂದ್ರೆ ರೂಪು, ಗುಣ, ಎರಡೂ ಒಂದೇ; ಆದರೆ ರಾಜಪ್ಪ ನಷ್ಟು ಸೋಮಪ್ಪ ಓದಿಲ್ಲ."

"ಸರಿ ಸರಿ! ಓದೇನಾಗ್ಬೇಕು. ರಾಜಪ್ಪ ತಾನೇ ಓದಿ ಏನು ಪಾಯ್ದೆ ಬಟ್ಟಿ ಬರೀಗಷ್ಟು ದುಡ್ಡು ಕೇಡು ಹೇಳು!"

"ಅಲಲೆ, ನಿಮಗ್ಗೊತ್ತೇ ಇಲ್ವಾ! ರಾಜಪ್ಪನಿಗೆ ತಿಂಗಳಿಗೆ ಅರುವತ್ತು ರೂಪಾಯಿ ಸಂಬಳ. ಅವರಿರೋದು ಮೈಸೂರ್ನಲ್ಲಿ!"

"ಹಾ!"

ಮುದ್ದಪ್ಪನವರಿಗೆ ಇದು ಹೊಸ ಸಮಾಚಾರ. ರಾಜು, ಏನೋ ಒಂದು ಸ್ವಲ್ಪ ವಿದ್ಯಾಭ್ಯಾಸ ಮಾಡಿ, ಮಿಕ್ಕಿದ್ದೆಲ್ಲ ನಾಗರೀಕತೆಯೆಂದು ತಿಳಿದು ನಡೆಯುತ್ತಿದ್ದ ರೀತಿ ಎಂದು ಮುದ್ದಪ್ಪನವರು ಭಾವಿಸಿಕೊಂಡಿದ್ದರು. ಈಗಿನ ವಿದ್ಯಾಭ್ಯಾಸಕ್ಕೆ ಬೆರಗಾಗಿ ಅದರ ಅಂತಿಮ ಧ್ಯೇಯವಾದ ನೌಕರಿಯ ಗುಲಾಮತನಕ್ಕೆ ಅವನು ಸಿಕ್ಕಿರುವುದು ಅವರಿಗೆ ಸಂತೋಷದಿದ್ದರೂ ರಾಜುವಿನ ವಿಷಯದಲ್ಲಿ ಅವರಿಗೆ ಬೇಜಾರು ಮಾತ್ರ ಆಗಲಿಲ್ಲ.

ಪಲುಕೂರಿನ ಮಿಕ್ಕ ಜನಗಳಿಗೆ ಇದು ಬಹಳ ಸಂತೋಷದ ವಿಷಯ. ಅರುವತ್ತು ರೂಪಾಯಿ! ಎಂದರೆ ದಿನಕ್ಕೆರಡು ರೂಪಾಯಿ!! ಅಷ್ಟೇ ಅಲ್ಲಿಯ ಎಷ್ಟೋ ಜನರ 'ತಿರುಕನ ಕನಸು.' ಅವರಿಗೆ ರಾಜುವು ಸರ್ಕಾರದ ಒಂದು ಅಂಗವಾಗಿ ತೋರಿದನು. ಪಲುಕೂರೇ ರಾಜುವನ್ನು ಹೊಗಳಲಾರಂಭಿಸಿತು. ಮುದ್ದಪ್ಪನವರು ಲಗ್ನ ಕಟ್ಟಿಸಿದರು.

ಕಂಬಳೀಗುಡ್ಡದ ಹತ್ತಿರ 'ಮುನೇಸ್ವರ'ನ ಓಡಾಟವಿದೆಯಂತೆ. ಅಲ್ಲಿ ಹೊತ್ತುಮೀರಿ ಹೋಗುವ ಗಾಡಿಗಳನ್ನು ಮನುಷ್ಯರನ್ನು ದಾರಿ ತಪ್ಪಿಸಿ ಕಾಡು ಬೀಳಿಸುವುದು ಆ 'ಮುನೇಸ್ವರ'ನ ಮನೋರಂಜನೆಯಿರಬಹುದು. ಹಾಗೆಯೇ 'ಏಳಸ್ವಾಗೆ' ಗಾಡಿಯೊಂದನ್ನು ದಾರಿ ತಪ್ಪಿಸಿ, ಗುಡ್ಡವನ್ನಿಳಿಯುತ್ತಿದ್ದ ಗಾಡಿಯೊಂದು ಮಗುಚಿಹೋದ ಸಮಾಚಾರ ಆ ಪ್ರಾಂತವನ್ನೆಲ್ಲಾ ಆಕ್ರಮಿಸಿತ್ತು. ಅದು ನಾಗುವಿನ ಕಿವಿಗೆ ಬಿದ್ದಾಗ ಮತ್ತೊಂದು ಪ್ರಸಂಗ ಜ್ಞಾಪಕಕ್ಕೆ ಬಂತು.

ಅಂಗಳದ ಹಿಂದೆ ಬಿದಿರಟ್ಟಿಮದುವೆಯ ಮನೆಯಿಂದ ಬರುತ್ತಿದ್ದ ಸೆಜ್ಜೆಯ ಗಾಡಿ ಉರುಳಿದ ಮೇಲೆ ನಾಗುವು ಉರುಳಿದ ಗಾಡಿಯನ್ನೇ ಆಗಲಿ, ಅದರೊಡನೆ ಉರುಳಿದ ಮನುಷ್ಯರನ್ನೇ ಆಗಲಿ ಪುನಃ ನೋಡಿರಲಿಲ್ಲ. ಏನಾಯಿತೋ ಏನೋ ಎಂಬ ಕುತೂಹಲ ಅವಳಿಗೆ ಬರುವುದುಂಟು. ಆಗ ಹಿಂದಿನಿಂದ ಬಂದ ತಮ್ಮಾರು ಗಾಡಿಯವರು 'ಏನೂ ಅಪಾಯವಿಲ್ಲ' ವೆಂದ ಮಾತು ಸಮಾಧಾನ ತರುತ್ತಿತ್ತು. ಈಗ್ಗೆ ಕೆಲವು ದಿನಗಳ ಹಿಂದೆ, ಉರುಳಿದ ಅದೇ ಗಾಡಿಯನ್ನೂ ಉರುಳಿದವರ ಪೈಕಿ ಒಬ್ಬ ಮನುಷ್ಯನನ್ನೂ ಕಂಡಳು.

ರಾಜು! ನಾಗುವಿನ ಗಂಡನಾಗುವನು. ಅದು ನಾಗುವಿಗೆ ಸ್ಥಿರವಾಗಿ ಹೋಗಿತ್ತು. ನಾಗುವಿಗೆ ಅದರಲ್ಲಿ ತೃಪ್ತಿ ಅತೃಪ್ತಿಗಳೆರಡೂ ಇರಲಿಲ್ಲ. ಮುದ್ದ

ಪ್ಪನವರ 'ಗಂಡಸಾಗಲಿ ಹೆಂಗುಸಾಗಲಿ, ಹುಟ್ಟಿದಮೇಲೆ ಮದುವೆ ಆಗಲೇ ಬೇಕು!' ಎಂಬ ಮಾತೇ ಅವಳ ಭಾಗಕ್ಕೆ ಸಮಾಜದ ನಿಯಮ. ಅದರಂತೆ ನಡೆಯಲು ಅವಳು ಮನಃಪೂರ್ವಕವಾಗಿ ಸಿದ್ಧಳಾದಳು.

ನಾಗು, ತಮ್ಮೂರಿಗೆ ಬಂದು ತನ್ನ ಕೈಯಲ್ಲಿರುವ ಅನ್ನವನ್ನು ತೆಗೆದು ಕೊಂಡು ಬಟ್ಟಲ ಮುಂದೆ ಕುಳಿತಿದ್ದ ರಾಜುವಿನ ಬಳಿಗೆ ಹೋದಾಗ, ರಾಜುವಿನ ತಲೆಯ ಮತ್ತು ಮೈಯ ಸುಗಂಧ ಅವಳ ಮೇಲೆ ಬೀಸಿತ್ತು. ಅವನು ಕಾಲು ತೊಳೆಯುತ್ತ ತೊಟ್ಟಿಯ ಬಿಸಿಲಿನಲ್ಲಿ ನಿಂತಿದ್ದಾಗ, ಅವನ ಬಿಳಿಯ ಉಡುಪಿನ ಕಾರಣವಾಗಿ ಬೆಳಕು ನಾಗುವಿನ ಕಣ್ಣನ್ನು ಕೋರೈಸಿತ್ತು. ರಾಜು, 'ಅನ್ನ ಸಾಕು' ಎಂದಾಗ ಅವನ ಎಡಗೈಯಿನ ಚಿನ್ನದ ಗಡಿಯಾರ ನಾಗುವಿನ ಕಣ್ಣು ಮುಂದೆ ತೂಗಾಡಿತ್ತು. ಒಂದೇ ಒಂದು ಬಾರಿ, ಅದೂ ತಲೆಯೆತ್ತಿ ನೀರು ಕುಡಿ ಯುತ್ತಿದ್ದಾಗ ತನ್ನ ಬಲ ಭುಜದ ಮೇಲೆ ಸೆರಗೆಳೆದುಕೊಳ್ಳುವ ನೆವದಿಂದ ನೋಡಿದ ಅವನ ಮುಖ ನಾಗುವಿನ ಹೃದಯದ ಸಮೀಪಕ್ಕೆ ಹೋಗಿ ಮೆಲ್ಲನೆ ಅದನ್ನು ತಟ್ಟಿತ್ತು.

ಆದರೆ, ಅವಳಿಗೆ ರಾಜುವಿನ ನಡವಳಿಕೆಗಳು ಇನ್ನೂ ಬೇಕಾದಷ್ಟು ತಿಳಿಯಬೇಕಾದದ್ದಿತ್ತು. ಅತ್ತೆ ಅಪ್ಪಂದಿರು ಮಾತಾಡಿಕೊಳ್ಳುತ್ತಿದ್ದಾಗ ಮಾತ್ರ ರಾಜುವು ಒಳ್ಳೆಯವನೆಂದು ತಿಳಿಯುತ್ತಿತ್ತು. ನಾಗುವಿಗೆ ಈಗ ಚಂದ ಣ್ಣನ ಯೋಚನೆಯೇ ಇಲ್ಲ. ತಾನು ನಡೆಯುತ್ತಿದ್ದಾಗ ತನಗಾಗಿ ಆಲೋಚಿ ಸುತ್ತಿದ್ದ ನಾಗುವಿನ ಕಣ್ಣುಗಳು ಅವನ ಕಣ್ಣೆದುರಿಗೇ ಇನ್ನೂ ನಿಂತಿವೆ. ಆದರೆ ನಾಗುವಿಗೆ ಅದನ್ನು ಯಾರಾದರೂ ಜ್ಞಾಪಿಸಿದರೆ ನೆನಪಾದೀತು. ಅವಳ ಗಮನವೀಗ ತನ್ನನ್ನೇ ಗಮನಿಸುತ್ತಿರುವ ರಾಜುವೆಂಬ ವ್ಯಕ್ತಿಯ ಕಡೆಗೆ ಮಾತ್ರವಿದೆ.

ಲಗ್ನದ ದಿನ ಹತ್ತಿರಕ್ಕೆ ಬರುತ್ತಿದೆ. ರಾಜುವಿಗೂ ನಾಗುವಿಗೂ ಆ ದಿನ ವನ್ನು ನೆನಸಿಕೊಂಡರೆ ತುಂಬ ಭಯ, ಭಕ್ತಿ. ಅವರ ಮನೆಗಳಿಗೆ ಸಡಗರ. ಇದರ ಮಧ್ಯೆ ಸೆಜ್ಜೆಯ ಶಿವಪ್ಪನವರಿಗೆ ತಮ್ಮ ಮನೆಗೆ ಬರುವ ಆ ರತ್ನದಂಥ ಹುಡುಗಿಯ ಆಗಮನಕ್ಕಾಗಿ ಕೊಂಚ ಹೆಚ್ಚು ಸಂತೋಷ. ಆ ಹೆಚ್ಚು ಸಂತೋಷ ಮುದ್ದಪ್ಪನವರಿಂದ ಕಿತ್ತುಕೊಂಡಂತಿತ್ತು.

ಮುದ್ದಪ್ಪನವರಿಗೆ ಸಾಗುವಿನ ಮದುವೆಯೆಂದರೆ 'ಲೇಹ್ಯ' ದಂತೆ. ಸಿಹಿಯಿದ್ದರೂ ಔಷಧಿ ಎನ್ನುವ ಬಿಕ್ಕಟ್ಟು.

ಮುದ್ದಪ್ಪನವರ ಮನೆಯ ಚಪ್ಪರ ಬುಧವಾರದ ದಿವಸ. ವೀಳ್ಯದ ಶಾಸ್ತ್ರ, ಕಂಕಣಧಾರಣೆ ಎಲ್ಲ ಆ ದಿವಸ ಮುಗಿಯಲೇ ಬೇಕು. ಸೆಜ್ಜೆಯಿಂದ ಮಂಗಳ ವಾರದ ದಿನ ಹೊರಡುವುದೆಂದು ತೀರ್ಮಾನವಾಗಿದ್ದರೂ, ಗಂಡಿನವರು, ನೆಂಟರುಗಳನ್ನು ಜಮಾಯಿಸುವ ಪಂಚಾಯಿತಿಯಲ್ಲೇ ಮಂಗಳವಾರದ ಸೂರ್ಯನು ಬಿದ್ದು ಹೋದನು. ಸೈಕಲ್ ಮೇಲೆ ಬಂದಿದ್ದ ಸೆಜ್ಜೆ, ಮದುವೆ ಮನೆಯ ಬೇಹುಗಾರ, ಗಂಡಿನವರು ಬುಧವಾರದ ಬೆಳಗ್ಗೆ ಕೋಳಿ ಕೂಗುವ ಹೊತ್ತಿಗೆ ಸೆಜ್ಜೆಯನ್ನು ಬಿಡುತ್ತಾರೆ, ಎಂದು ಪಲುಕೂರಿನವರಿಗೆ ತಿಳಿಸಿ ಹೋದನು. ಮುದ್ದಪ್ಪನವರಿಗೆ ಅದೇ ಯೋಚನೆ. ಸೆಜ್ಜೆಯಿಂದ ಪಲುಕೂರಿಗೆ ಬರುವ ದಾರಿಯೂ ಅಷ್ಟಷ್ಟರಲ್ಲೇ. ಅವರು ಹೊತ್ತಿಗೆ ಮುಂಚೆ ಪಲುಕೂರಿಗೆ ಬರುವರೋ ಇಲ್ಲವೋ ಎಂಬುದೇ ಅವರ ಸಂದೇಹ.

ಕಪನಯ್ಯನವರು ತಮ್ಮ ಎರಡು ಜೊತೆ ಎತ್ತುಗಳನ್ನು, ಸೆಜ್ಜೆಯ ದಾರಿಯ ಕಡೆಗೆ ಹೊಡಸಿ ಕಳುಹಿಸಿ, ತಾವು ಮದುವೆ ಅಡಿಗೆಯ ಮನೆಯ ಕಡೆ ಹೊರಟರು. ಮುದ್ದಪ್ಪನವರು ಎಲ್ಲೆಲ್ಲಿಯೂ ತಿರುಗಾಡುತ್ತಿದ್ದರು. ಗಂಡಿನ ವರ ಬೀಡಾರಕ್ಕೆ ಕಪನಯ್ಯನವರ ಮನೆಯನ್ನೇ ಸಜ್ಜುಗೊಳಿಸಿ ಕಪನಯ್ಯ ನವರ ಮನೆಯವರೆಲ್ಲ ಹೆಣ್ಣಿನ ಮನೆಗೇ ಬಂದುಬಿಟ್ಟಿದ್ದರು. ಚಂದಣ್ಣ ನಿರ್ವಾಹವಿಲ್ಲದೇ ಮದುವೆಯ ಮನೆಯ ಕೆಲಸಗಳನ್ನು ಮಾಡುವವನ ಹಾಗೆ ಕಂಡನು. ಆದರೂ ಅವನ ಚಮತ್ಕಾರ ಬುದ್ಧಿ ಶಕ್ತಿಗಳಿಲ್ಲದಿದ್ದರೆ ಮುದ್ದಪ್ಪ ನವರ ಮನೆಯ ಮುಂದೆ ಅಷ್ಟು ಸೊಗಸಾದ ಚಪ್ಪರವಿರುವುದಕ್ಕೆ ಸಾಧ್ಯವಿರು ತ್ತಿರಲಿಲ್ಲ. ಆ ಓರಣವಾದ ಚಪ್ಪರದಡಿಯಲ್ಲಿ ಆಲಾಪನೆಯಿಂದ ವೈತೂಗು ತ್ತಿದ್ದ ಆ ಓಲಗ್ಗದವರನ್ನೂ ಚಂದಣ್ಣನೇ ಕರೆತಂದಿದ್ದವನು. ಆ ಓಲಗದವರ ಸುತ್ತಲೂ ಹೊಸ ಬಟ್ಟೆಯುಟ್ಟ ಗಂಡು ಹೆಣ್ಣು ಹುಡುಗರು, ನೆಟ್ಟ ಗಣ್ಣಿ ನಿಂದ ಅವರನ್ನೇ ನೋಡುತ್ತ ನೆರೆದಿದ್ದರು. ನೆಂಟರೆನಿಸಿಕೊಳ್ಳುವವರು ಪಡ ಸಾಲೆಯಲ್ಲಿ ಸೇರಿಬಿಟ್ಟರು. ಪಲುಕೂರಿನ ಯುವಕರು ಮಾತ್ರ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಪಂಚೆಯನ್ನು ಎತ್ತಿ ಕಟ್ಟಿ ಓಡಾಡುತ್ತಿದ್ದರು. ಆ ಮನೆಯಲ್ಲಿ ಅತಿ ಗಂಭೀರವಾಗಿದ್ದವರು ಇಬ್ಬರೇ. ಹೊರಗಿನ ಪಡಸಾಲೆಯ ಕಂಬವನ್ನೊರಗಿ

ಇನ್ನೊಬ್ಬರ ಪ್ರಶ್ನೆಗೆ ಮಾತ್ರ ಉತ್ತರ ಕೊಡುತ್ತಿದ್ದ ಮುದ್ದಪ್ಪನವರೊಬ್ಬರು; ಬಹಳ ಒಳಗೆ, ಆ ಓಲಗದ ಸದ್ದಿನಲ್ಲಿಯೂ ನಿದ್ದೆಗೆ ತೊಡಗುತ್ತಿದ್ದ ಕೆಂಪ ಮ್ಮನ ಮಗುವನ್ನು ತಟ್ಟಿ ಮಲಗಿಸುತ್ತಾ ಇದ್ದ ನಾಗು, ಒಬ್ಬಳು.

ಎಂದರೆ ಅವರಿಬ್ಬರಿಗೂ ಈ ಮದುವೆ ಬೇಡವೆಂದಲ್ಲ. ಮುದ್ದಪ್ಪನವರಿಗೆ ನಾಗುವನ್ನು ಬೀಳ್ಕೊಡುವ ಚಿಂತೆಯಾದರೆ ನಾಗುವಿಗೆ ತನ್ನ ಮುಂದಿನ ಜೀವನದ ಚಿಂತೆ—ಅಷ್ಟೆ. ನಾಗುವಿಗೆ ಮುದ್ದಪ್ಪನವರ ಯೋಚನೆ ಕೂಡ ಬರುತ್ತದೆ. ತನ್ನ ಮನೆಯನ್ನು ಬಿಟ್ಟು ಹೊರಗೆ ಹೊರಡಬೇಕೆಂದು ತಿಳಿ ದಾಗಲೆಲ್ಲ ನಾಗುವಿಗೆ ಮುದ್ದಪ್ಪನವರ ಮೇಲಿನ, ತನ್ನ ಅತ್ತೆಯವರ ಮೇಲಿನ ಪ್ರೀತಿಯಿಂದ ಕತ್ತು ಉಬ್ಬಿಹೋಗುವುದುಂಟು. ಆದರೆ ಮದುವೆಯಾಗಲೇ ಬೇಕು!

ಕಾದು ಕಾದು ಸಾಕಾಯಿತು. ಗಂಡಿನ ಕಡೆಯವರು ಬರುವರೊ ಅಥವಾ ಇಲ್ಲವೇ ಇಲ್ಲವೋ ಎಂಬ ಭ್ರಾಂತಿ ಮುದ್ದಪ್ಪನವರನ್ನಾಕ್ರಮಿಸಿತು. ಅವರೇ ಊರಿಂದ ಹೊರಗಿರುವ ಆ ಭಾರಿ ಬೇವಿನ ಮರದ ತುದಿಗೆ ಒಬ್ಬನನ್ನು ಹತ್ತಿಸಿ ನೋಡಿಸಿದರು. ಗಾಡಿಗಳ ಸುಳಿವೇ ಇಲ್ಲ. ಮುಚ್ಚಂಜೆಯಾದರೂ ಸೆಜ್ಜೆಯವರ ಸದ್ದೇ ಇಲ್ಲ. ಮುದ್ದಪ್ಪನವರು ಕಾಯುವುದಕ್ಕೆ ಸಿದ್ಧರಾಗಿದ್ದ ಮಾತ್ರಕ್ಕೆ ಸೂರ್ಯನು ಕಾಯುವನೆ! ರಾತ್ರಿಯಾಯಿತು. ಲಾಟೀನ್, ದೊಣ್ಣೆಗಳನ್ನು ಕೊಟ್ಟು ಜನರನ್ನು ಸೆಜ್ಜೆಯ ದಾರಿಗಟ್ಟಿದರು.

ಸೆಜ್ಜೆಯ ಗಾಡಿಗಳ ಎತ್ತಿನ ಗೆಜ್ಜೆಯ ಗಲಗು ಕೇಳಬೇಕೆಂದರೆ ಎಂಟು ಗಂಟೆ ರಾತ್ರಿಯಾಗಿಹೋಗಿತ್ತು. ಕಡೆಗೂ ಗಂಡಿನ ಕಡೆಯವರು ಬಂದರು. ಬಂದ ಎಂಟು ಜೊತೆ ಗಾಡಿಗಳ ಮೂಕಿಗಳನ್ನೂ ಬಸವನಗುಡಿಯ ಮುಂದಿನ ಪಾಳಿನಲ್ಲಿ ಇಳಿಸಿದರು. ಮುಂದಿನ ಗಾಡಿಯಲ್ಲಿದ್ದ ಈ ಸಿಸ್ತುಗಾರ ರಾಜುವಿನ ಕೈಗೊಂದು ಹುಡುಗಿಯನ್ನು ಕೊಡಿಸುವುದಕ್ಕೆಂದು ಹೆಂಗಸರು, ಗಂಡಸರ ಕಡೆಗೆ ಚಿಳ್ಳೆಪಿಳ್ಳೆಗಳೆಲ್ಲ ಸೆಜ್ಜೆಯಿಂದ ಪಲುಕೂರಿಗೆ ಬಂದಿದ್ದರು.

ಹತ್ತು ಗಂಟೆ ರಾತ್ರಿಯಲ್ಲಿ ರಾಜುವಿಗೆ ಮಂಗಳಸ್ನಾನವಾಯಿತು. ಹಳ್ಳಿ ಗಾಡಿನ ಕಡೆಯ ಮಾಮೂಲೇ ಹಾಗಂತೆ. ಎಷ್ಟು ಜಾಗ್ರತೆಯೆಂದರೂ ಗಂಡಿನ ಮೈ ತೊಳಸುವುದು ರಾತ್ರಿಯಲ್ಲೇ ಹೊರತು ಹಗಲಿನಲ್ಲಿ ಆಗುವುದೇ ಇಲ್ಲ. ಗಂಡಿನ ಕಡೆಯವರಿಂದ ವಸ್ತ್ರಗಾರದ ಸಾಮಾನುಗಳು, ಹೊಂಬಾಳೆ ಆದಿಯಾಗಿ

ಓಲಗ ಮಾಡಿಸಿಕೊಂಡು ಹೆಣ್ಣಿನ ಮನೆಗೆ ಹೊರಟುವು. ಕಂಕಣ ಧಾರೆಯೂ ಯಿತು. ಚಂದಣ್ಣನಿಗೆ ಬುದ್ಧಿ ತೀರ ಕೆಟ್ಟುಹೋಯಿತು. ಅವನು ಒಬ್ಬರ ಕಣ್ಣಿಗೂ ಸಿಕ್ಕಲೇ ಇಲ್ಲ.

ಗಂಡು, ಹೆಣ್ಣಿನ ಮನೆಗೆ ಹೊರಟುಹೋಯಿತು. ಗಂಡು ಹೆಣ್ಣುಗಳು ಬೇರೆ ಬೇರೆಯಾಗಿ ಸ್ತಂಭಪೂಜೆ ಮಾಡಿದುವು. ಅಷ್ಟು ಹೊತ್ತಿಗೆ ಬೆಳಗಿನ ಝಾವ ಮೂರು ಗಂಟೆ ಸಮಯವಾಗಿಹೋಗಿತ್ತು. ನಾಳೆಯ ದಿನಕ್ಕೆ ಇನ್ನು ಮೂರೇ ಗಂಟೆ ಪಿಕ್ಕಿದೆ. ಆಗ ಗಂಡು ಹೆಣ್ಣು ಎರಡಕ್ಕೂ ಕೊಂಚ ವಿಶ್ರಾಂತಿ ಸಿಕ್ಕಿತು.

ನಾಗು ಗಂಭೀರವಾಗಿ ತನಗೆಂದು ಏರ್ಪಡಿಸಿದ್ದ ಕೊಠಡಿಯೊಳಕ್ಕೆ ಹೊರಟುಹೋದಳು. ನೀರು ತರಿಸಿಕೊಂಡು ಕುಡಿದಳು. ಕೊಂಚ ತಿಂಡಿ ಎಲೆ ಅಡಕೆ ಹಾಕಿಕೊಂಡಳು. ಮನಸ್ಸು ಕೆಲಸ ಮಾಡುತ್ತಲೇ ಇತ್ತು. ನಾಳೆಯ ದಿವಸ ಇನ್ನೊಂದು ವ್ಯಕ್ತಿಗೂ ತನಗೂ ಕಾಣದ ಕೈ ಒಂದು ಬಂದು ಗಂಟುಹಾಕಿ ಹೋಗುತ್ತದೆ, ಎಂಬ ಭಾವನೆ ನಾಗುವಿಗೆ ಬಂದಾಗ ಎದೆಯ ಬಡಿತ ಜೋರಾಗುತ್ತಿತ್ತು. ಅವನಿಗೆ ತಾನು ಒಳ್ಳೆಯವಳು ಹೌದೋ, ಇಲ್ಲವೊ? ತನ್ನ ರುಚಿಗಳು ಸರಿಹೋಗುವುದೋ, ಇಲ್ಲವೋ? ಅವನ ಭಾಗಕ್ಕೆ ತಾನು ಪೆದ್ದಿಯೋ ಏನೊ? ಮುಂದೆ ತನ್ನವರು ಕೋಪಿಸಿಕೊಂಡು ಬಿಟ್ಟುಬಿಡು ವರೋ ಏನೋ? ಇದೇ ನಾಗುವಿನ ಗೊಂದಲಗಳು. ಆದರೆ ನಾಗುವು ಇನ್ನೂ ಹುಡುಗಿ. ಅವಳಿಗೆ ನಿದ್ದೆ ಬಂದುಬಿಟ್ಟಿತು. ಪಾಪ! ನಾಲ್ಕು ಗಳಿಗೆ ಮಲಗಿ ಕೊಂಡಿರಲಿ.

ಬೆಳಕು ಹರಿಯಿತು. ಬೆಳಕು ಹರಿಯುವುದಕ್ಕಿಂತ ಮುಂಚೆಯೇ ಮಂಗಳ ವಾದ ಉದಯರಾಗವು ಓಲಗದಿಂದೀಚೆಗೆ ಹರಿದುಬಂತು. ನಾಗುವು ಎದ್ದಳು. ಅವಳಿಗೆ ಮುಖ ತೊಳೆದಾಯಿತು. ಅಲಂಕಾರವೂ ಆಯಿತು. ಆಭರಣಗಳೆಲ್ಲ ಕತ್ತಲಲ್ಲಿ ಮಿರುಗುತ್ತಿದ್ದುವು. ಅವುಗಳನ್ನೆಲ್ಲಾ ಅವರತ್ತೆಯೇ ತೊಡಿಸಿದರು. ಆದರೆ ಆ ಕರೀಮಣಿಸರದ ನಡುವೆ ಭಂಗಾರದ ಚಂದ್ರನನ್ನು ತೂಗಿ ಬಿಟ್ಟಿರುವ ಆ ಸಣ್ಣ ಹಾರವನ್ನು ಮಾತ್ರ ರಾಜುವೇ ಕಟ್ಟಬೇಕು. ಅದೊಂದಕ್ಕೆ ಅದೆಷ್ಟು ಗದ್ದಲ, ಅದೆಷ್ಟು ಭಾರಿ ಅಡಿಗೆ, ಅದೆಷ್ಟು ಭಾರಿ ಚಪ್ಪರ, ಅದೆಷ್ಟು ಖರ್ಚು!

ಇವೆಲ್ಲ ನಾಗುವಿನ ಮನಸ್ಸಿಗೆ ಬಂದದ್ದು ಆಶ್ಚರ್ಯ. ಅವಳು ತನ್ನ ಸಂಗಾತಿಯ
ರೊಡನೆ ಅದನ್ನು ಹೇಳಿಕೊಂಡು ನಕ್ಕುಬಿಟ್ಟಳು.

ಹತ್ತುಗಂಟೆಗೆ ಧಾರೆ. ಮಂಟಪ ಹಜಾರದ ಮಧ್ಯೆ ಶೃಂಗಾರವಾಗಿ
ನಿಂತಿದೆ. ಆ ಮಂಟಪದ ಹಿಂಬದಿಯ ಗೋಡೆಯ ಮೇಲೆ ಹಸೇ ಜಗಲಿ ಬರೆ
ದಿದೆ. ಹೆಣ್ಣಿನ ಬಾಸಿಂಗ ಗಂಡಿನ ಬಾಸಿಂಗವನ್ನು ಅದರೊಳಗೆ ಚೆನ್ನಾಗಿ ಬರೆ
ದಿದ್ದಾರೆ. ಹೆಣ್ಣು ಬಾಸಿಂಗ ಬರೆದಿರುವ ಕಡೆ ಎಂದರೆ ಬಲಗಡೆ ಹೆಣ್ಣಿನ
ಕೊಠಡಿಯಿದೆ. ಈ ಪಕ್ಕದಲ್ಲಿ ಗಂಡಿನ ಬಿಡಾರವಿದೆ ಗಂಡು ಹೆಣ್ಣುಗಳಿಗೆ
ಬಾಸಿಂಗ ಧಾರಣೆಯೂ ಆಯಿತು. 'ಐಗಳು' ಮಂತ್ರಘೋಷ ಮಾಡುತ್ತಿ
ದ್ದರು. ಅಂತರಪಟ ಹಿಡಿದು ಮುಗಿಸಿದರು. ಫಲ ಮಂತ್ರಾಕ್ಷತೆಗಳನ್ನು
ಹೆಣ್ಣು ಗಂಡುಗಳೆರಡು ಕಡೆಯಲ್ಲೂ ಕೊಟ್ಟು ಧಾರೆಗೆ ಪ್ರಾರಂಭವಾಯಿತು.

ಗಂಡು ಹೆಣ್ಣುಗಳೆರಡೂ ಎದುರು ಬದುರು ಕುಳಿತಿದ್ದುವು ಅವರಿಬ್ಬರ
ಕೈಗಳನ್ನು ಸೇರಿಸಿದ ಹಾಗೆ ಫಲವೀಳ್ಯಗಳು ಕುಳಿತಿದ್ದುವು. ಅದರ ಕೆಳಗೆ
ದೊಡ್ಡ ತಟ್ಟೆ ಇಟ್ಟಿದ್ದರು. ಮೇಲಿಂದ ಧಾರೆ ಎರೆದ ನೀರು ಆ ತಟ್ಟೆಯಲ್ಲಿ
ತುಂಬಿಕೊಳ್ಳುತ್ತಿತ್ತು. ಹೆಣ್ಣು ತಲೆತಗ್ಗಿಸಿ ಕುಳಿತಿತ್ತು. ತಟ್ಟೆಯಲ್ಲಿ ಹೆಣ್ಣಿಗೆ
ಗಂಡಿನ ಮುಖ ಕಾಣುತ್ತಿತ್ತು. ಆ ಗುಟ್ಟು ಪಾಪ! ಗಂಡಿಗೆ ತಿಳಿಯಲಿಲ್ಲ.

ಡೋಲು ಒಂದೇ ಸಮನೆ ಬಾರಿಸಿತು. ಪಲುಕೂರಿನ ಸುತ್ತಿಗೆಲ್ಲ
ಮಾಂಗಲ್ಯ ಧಾರಣೆಯಾಗುತ್ತಿದೆ ಎಂದು ವಾದ್ಯ ಮೇಳ ತಿಳಿಸುತ್ತಿತ್ತು. ಹಿರಿ
ಯರ ಕೈಲೆಲ್ಲ ಮುಟ್ಟಿಸಿ ತಂದ ಮಾಂಗಲ್ಯವನ್ನು ರಾಜುವು ನಾಗುವಿನ ಕೊರ
ಳಿಗೆ ಕಟ್ಟಿದನು. ವಾದ್ಯಗಳು ಮತ್ತೂ ಮೊಳಗಿದುವು. ಅದರ ನಾದವು ಗಾಳಿ
ಯಲ್ಲಿ, ಕಣ್ಣಿಗೆ ಕಾಣದ ಹೊಗೆಯಂತೆ ತೇಲಿಕೊಂಡು ಕಪನಯ್ಯನವರ ರಾಚನ
ಹೊಲದವರೆಗೂ ಹೋಯಿತು. ಅಲ್ಲಿ ಒಂದು ಹೊಂಗೇಮರದ ಮೇಲೆ ಹತ್ತಿ
ಕುಳಿತಿದ್ದ ಚಂದಣ್ಣನ ಕಿವಿಗೂ ತಲಪಿತು. ಚಂದಣ್ಣನಿಗೆ ಗಾಳಿಯ ಮೇಲೂ
ಕೋಪ ಬಂತು.

ಅಂತೂ ನಾಗು ರಾಜುವಿನ ಹೆಂಡತಿಯಾಗಿಯೇ ಹೋದಳು. ಹಾಗಾಗಿ
ಆಗಲೇ ಎರಡು ದಿನಗಳಾಗಿ ಹೋದುವು. ಮುದ್ದಪ್ಪನವರು ಅಳಿಯನನ್ನು
ಬೀಳ್ಕೊಡುವ ದಿನವೂ ಬಂದಿತು. ಮೊದಲನೇ ಬಾರಿ, ನಾಗು, ತನ್ನ ಗಂಡನ
ಮನೆಗೆ ಹೊರಟಳು. ಬಸವನಗುಡಿ ಮುಂದೆ ನೆಲದ ಮೇಲಿದ್ದ ನೊಗಗಳೆಲ್ಲಾ

ಎತ್ತಿನಕೊರಳುಗಳ ಮೇಲೆ ನೆಗೆದು ಕುಳಿತುವು, ಗಾಡಿಗಳು ಸಾಲಾಗಿ ನಿಂತುವು. ಮುಂದಿನ ಗಾಡಿಯೇ ಗಂಡುಹೆಣ್ಣಿನದು. ಸುಮಾರು ಇಪ್ಪತ್ತು ಮೈಲಿಯ ಪ್ರಯಾಣ ಗಾಡಿಯಲ್ಲಿಯೇ ಆಗಬೇಕು. ನಾಗುವೇನೋ ಒಂದು ಬಾರಿ ಇಂಥ ಪ್ರಯಾಣ ಮಾಡಿದ್ದಾಳೆ. ರಾಜುವಿಗೆ ಇದು ರೂಢಿಯಿಲ್ಲ. ಆದರೂ ಇಂದು ಅವನಿಗೆ ಅದರಲ್ಲಿ ಬೇಜಾರಿಲ್ಲ. ಏಕೆಂದರೆ ಅವನೇ ಆ ಗುಂಪಿನ ರಾಜ. ಆದರಲ್ಲೂ ತನ್ನ ಹೊಸ ಹೆಂಡತಿಯು ಕುಳಿತ ಗಾಡಿಯ ಜವಾಬ್ದಾರಿ ಅವನಿಗೇ ಬಿಟ್ಟಿದೆ. ಸಂಕೋಚಪಟ್ಟುಕೊಳ್ಳುವುದಕ್ಕೆ ಅವನ ಗಾಡಿಯಲ್ಲಿ ಹಿರಿಯರೂ ಇಲ್ಲ. ಜೊತೆಗೆ ಅವನಿಗೆ ಕೊಂಚ ಸಂಕೋಚ ಹೆಚ್ಚಾದರೂ ಹಕ್ಕಿರುವ ಕಡೆ ಅದನ್ನು ಬಿಡಬಹುದೆಂಬ ಧೈರ್ಯ ಬೇರೆ.

ನಾಗುವಿನ ಜೊತೆಗೆಂದು ಬಂದಿದ್ದವರು ಇಬ್ಬರು ಹುಡುಗಿಯರು. ನಾಗು ಎನ್ನುವ ಇನ್ನೊಂದು ಹುಡುಗಿ, ಗೌರಮ್ಮ ಎನ್ನುವುದೊಂದು. ನಾಗುವಿನ ಅತ್ತೆಯವರು ಬಂದಿದ್ದರೂ ಅವರು ಹಿಂದಿನ ಗಾಡಿಯ ಯಾರೋ ಸಮವಯಸ್ಕ ಹೆಂಗಸರೊಂದಿಗೆ ಮಾತಿಗೆಂದು ಸೇರಿಕೊಂಡಿದ್ದರು. ರಾಜುವಿನ ಉತ್ಸಾಹವೇ ಉತ್ಸಾಹ. ಅವನ ಗಾಡಿಯು ಹಿಂದಿನ ಗಾಡಿಗೆ ನಾಲ್ಕು ಹೆಜ್ಜೆ ಹೆಚ್ಚು ಮುಂದೆಯೇ ನಡೆಯುತ್ತಿತ್ತು. ಅದಕ್ಕೆ ಅವನ ಕೈಗಳೇ ಕಾರಣ. ಲೊಟ್ಟೆ ಹಾಕುವುದು, ಹಾಡು ಹೇಳುವುದು, ಸಿಗರೇಟು ಸೇದುವುದು ಎಲ್ಲ ಉಂಟು. ಆಗಾಗ್ಗೆ ನಾಗುವನ್ನು ನೋಡುವುದಂತೂ ನಿಸರ್ಗ ನಿಯಮ.

ನಾಗು, ತಲೆ ತಗ್ಗಿಸಿ ಕುಳಿತಿದ್ದರೂ ರಾಜುವಿನ ಈ ಉತ್ಸಾಹ ಈ ಚಡಪಡಿಸುವಿಕೆಗಳೆಲ್ಲ ಗೊತ್ತು. ಅವಳೂ ಅವನನ್ನು ನೋಡಿದುದುಂಟು. ಆದರೆ ಅವಳು ನೋಡಿದುದನ್ನು ಪತ್ತೆ ಹಚ್ಚಲು ದೇವರ ಕೈಲೂ ಅಸಾಧ್ಯ. ನಾಗುವಿಗೆ ತನಗೆ ಸಿಕ್ಕಿದ ಗಂಡನ ವಿಷಯದಲ್ಲಿ ಆದರ ತುಂಬಿಕೊಂಡಿತ್ತು. ಅವನ ಕೆನ್ನೆಗೆ ಬಿಸಿಲು ಬೀಳುತ್ತಿರುವುದೂ ಅವಳಿಗೆ ಸಹಿಸದ ವಿಷಯ. ಆದರೆ ಅವನನ್ನು ಹಿಂದಕ್ಕೆ ಕುಳಿತುಕೊಳ್ಳಲು ಹೇಳುವವರಾರು? ಬೆಕ್ಕಿನ ಕತ್ತಿಗೆ ಗಂಟೆ ಕಟ್ಟುವ ವಿಷಯ ಅದು. ಅವಳ ಗೆಳತಿಯರೂ ಅವನೊಡನೆ ಮಾತನಾಡುತ್ತಿರಲಿಲ್ಲ. ತಾನಂತೂ ಇಲ್ಲವೇ ಇಲ್ಲ. ತನ್ನ ಗಂಡನೆದುರು ಬೇರೆ ವಿಷಯವನ್ನೂ ಮಾತನಾಡುವ ಹಾಗಿಲ್ಲ. ಹೀಗಾಗಿ ಹಿಂದಿನ ಗಾಡಿಯ ಜನರ ಗುಜುಗುಜು ಶಬ್ದ, ಮಕ್ಕಳ ಅಳು, ಚಕ್ರಗಳ ಶಬ್ದ, ಜೊತೆಯಲ್ಲಿ ರಾಜುವಿನ

ಸಿಳ್ಳಿನ ಧ್ವನಿ. ಇಷ್ಟಕ್ಕೆ ಕಿವಿಗೊಟ್ಟು ಆ ಪುಟ್ಟ ಪುಟ್ಟ ಹುಡುಗಿಯರು ಪ್ರಯಾಣ ಬೆಳಸಿದ್ದರು.

ಅದೇನು ಬಂತೋ ಮನಸ್ಸಿಗೆ, ರಾಜುವು ಗಾಡಿಯನ್ನು ವೇಗವಾಗಿ ಓಡಿಸಿದನು. ನಾಗುವು ಕುಲುಕಾಡಿದಳು. ಅತಿ ಮೆಲ್ಲಗೆ ಒಂದು ಮಾತನ್ನು ಆಡಿದಳು.

"ಗಾಡಿ ಗೀಡಿ ಮಗುಚ್ಕೊಂಡಾತು!"

ಅದು ಅವಳ ಸ್ನೇಹಿತೆ ಗೌರಮ್ಮನಿಗೆ ಮಾತ್ರ ಕೇಳಿಸಬೇಕಾಗಿದ್ದದ್ದು; ಅವಳಿಗೆ ಕೇಳಿಸಿತು. ನಾಗುವು ತನ್ನ ಗಂಡನನ್ನು ಮಾತನಾಡಿಸಬಿಟ್ಟಷ್ಟು ಹಾಸ್ಯಾಸ್ಪದವಾಗಿ ತೋರಿತು. ಅವಳು ನಕ್ಕುಬಿಟ್ಟಳು. ಬಿದಿರಟ್ಟೆಯ ಮದುವೆಯ ಸಂದರ್ಭದಲ್ಲಿ ರಾಜುವಿನ ಗಾಡಿ ಮಗುಚಿಕೊಂಡ ಪ್ರಸಂಗ ನಾಗುವಿಗೆ ಜ್ಞಾಪಕಕ್ಕೆ ಬಂದು ಅವಳೂ ನಕ್ಕಳು. ಆ ಇನ್ನೊಂದು ನಾಗುವು ವಿಷಯವೊಂದೂ ತಿಳಿಯದೆ ಗಟ್ಟಿಯಾಗಿ ನಕ್ಕುಬಿಟ್ಟಳು. ರಾಜುವಿಗೂ ಅದು ಕೇಳಿಸಿತು. ಏಕೆಂದರೆ ಆ ಇನ್ನೊಂದು ನಾಗುವು ರಾಜುವಿನ ಬೆನ್ನಹಿಂದೆಯೇ ಕುಳಿತಿತ್ತು. ರಾಜುವಿಗೆ ಅವರು ನಕ್ಕದ್ದು ಏಕೆ ಎಂಬ ಕುತೂಹಲವುಂಟಾಯಿತು. ಸ್ವಲ್ಪ ಹೊತ್ತಾದಮೇಲೆ ರಾಜು,

"ನಿನ್ನ ಹೆಸರೇನಮ್ಮ?" ಎಂದನು.

"ನಾಗು!"

ಈ ಉತ್ತರದಿಂದ ರಾಜು, ಪೆಚ್ಚಾಗಿ ಹೋದನು. ಗೌರಮ್ಮ ಇನ್ನೂ ನಕ್ಕಳು. ನಾಗುವಿನ ಮುಖ ನಾಚಿಕೆಯಿಂದ ಬಿಸಿಯಾಯಿತು ರಾಜು ಸ್ವಲ್ಪ ಹೊತ್ತಾದ ಮೇಲೆ, ಗಾಡಿಯನ್ನು ನಿಧಾನಮಾಡಿ ಅದೇ ಹುಡುಗಿಯನ್ನು,

"ಅದೇನು ನೀವೆಲ್ಲ ನಗತಿದ್ರಲ್ಲ!" ಎಂದನು.

ಅದಕ್ಕೆ ಈ ನಾಗು, ಕಾರಣ ವಿಚಾರಿಸಬೇಕಾಗಿತ್ತು. ಗೌರಮ್ಮನಲ್ಲಿ ವಿಚಾರಿಸಿ ಆಮೇಲೆ ಹೇಳಿದಳು.

"ನಾಗಕ್ಕ, ಗಾಡೀ ಗೀಡೀ ಉರುಳ್ಕಂಡೀತು ಅಂದ್ರಂತೆ" ಅಷ್ಟು ಹೊತ್ತಿಗೆ ನಾಗುವು, ಈ ನಾಗುವನ್ನು ಬಲವಾಗಿ ಚಿವುಟಿರಬೇಕು. ಈ ನಾಗು, 'ಲ್ಯ್! ಹ್ಹಾ!' ಎಂದು ಕೂಗಿಕೊಂಡಳು.

ಈ ಬಾರಿಯೂ ರಾಜುವೇ ಸೋತವನು. ಅವನಿಗೂ ಜ್ಞಾಪಕ ಬಂತು. ಬಿದಿರಟ್ಟಿಯಿಂದ ಬರ್‍ತಾ ಬರ್‍ತಾ ಅಂಗಳದ ಹತ್ತಿರ ತಮ್ಮ ಗಾಡಿ ಉರುಳಿದು ದನ್ನು ಜ್ಞಾಪಿಸಿಕೊಂಡೇ ನಾಗುವು ಆ ಮಾತಂದಿರಬೇಕೆಂದು ಅವನು ತಿಳಿದು ಕೊಂಡನು. ಆದರೆ ಆ ವಿಷಯ ಅವನಿಗೆ ಕೋಪ ತರಲಿಲ್ಲ. ಇಲ್ಲದಿದ್ದರೆ ಅವನು,

"ಹ್ಞೂ, ಆಗ ಆ ಗಾಡಿಯಲ್ಲಿ ಇರಬೇಕಾದವರು, ಇರಲಿಲ್ಲ. ಇದ್ದಿದ್ದರೆ ಮಗುಚ್ಕೊತಿರಲಿಲ್ಲ ಎನ್ನುತ್ತಿದ್ದನೆ?"

ಆಮೇಲೆ ಇನ್ನೊಂದೆರಡು ಮೈಲಿ ಮೌನವಾಗಿ ಸಾಗಿತು. ಅನಂತರ ಗೌರಮ್ಮ ದೊಡ್ಡದಾಗಿ ಆಕಳಿಸಿ, ಎಲೆ ಅಡಕೆಯನ್ನು ತನ್ನ ಉಡಿಯಿಂದ ತೆಗೆದಳು. ಬೇಜಾರಿಗೋಸ್ಕರ ಹಾಕಿಕೊಳ್ಳುವ ಎಲೆ ಅಡಕೆ. ಆ ತುಂಟ ನಾಗುವೂ ಎಲೆ ಅಡಕೆ ಅಗಿಯಲು ಸಿದ್ಧಳಾದಳು. ಆದರೆ ನಾಗು ಮಾತ್ರ ತೆಗೆದುಕೊಳ್ಳಲಿಲ್ಲ. ಗೌರಮ್ಮ ಬಲವಂತ ಮಾಡಿದರೂ ನಾಗುವು ಎಲೆ ಅಡಕೆ ಹಾಕಲೊಪ್ಪಲಿಲ್ಲ. ಗೌರಮ್ಮ, ಏನು ಹೊಳೆಯಿತೋ ಏನೋ. ಒಂದಷ್ಟು ಎಲೆ ಅಡಕೆ ಸುಣ್ಣಗಳನ್ನು ರಾಜುವಿಗೆ ಆ ತುಂಟ ನಾಗುವಿನ ಮುಖಾಂತರ ತಲ ಪಿಸಿದಳು. ರಾಜು ಅದು ತನ್ನ ನಾಗುವಿನಿಂದ ಬಂದಿರಬೇಕೆಂದು ತಿಳಿದು ಪ್ರಸಾದದಂತೆ ಸ್ವೀಕರಿಸಿದನು.

ಒಂದೆರಡು ಘಳಿಗೆಯಲ್ಲೇ ನಾಗುವಿನ ತುಟಿ ಕೆಂಪಾಯಿತು.

೬

ಹೊತ್ತಿಗೆ ಮುಂಚೆಯೇ ಗಂಡು ಹೆಣ್ಣುಗಳು ಸೆಜ್ಜೆಯನ್ನು ಸೇರಿದುವು. ಸೆಜ್ಜೆಯಲ್ಲಿ, ರಾಜುವಿನ ದಾಯಾದಿಗಳ ಮನೆಯೊಂದರಲ್ಲಿ ಗಂಡುಹೆಣ್ಣುಗಳ ಮೊದಲ ಬಿಡಾರಕ್ಕೆ ಏರ್ಪಾಡಾಗಿತ್ತು. ಎಲ್ಲದಕ್ಕಿಂತ ವಿಶೇಷವೇನೆಂದರೆ ಆ ಮನೆಯ ಮುಂದೆ ಒಂದು ಮೋಟಾರು ನಿಂತಿದ್ದುದು. ಅದು ರಾಜುವಿನ ಸ್ನೇಹಿತ ಮೈಸೂರಿನಿಂದ ಬಾಡಿಗೆಗೆ ಮಾಡಿ ಕಳುಹಿಸಿದ್ದ 'ಟ್ಯಾಕ್ಸಿ.' ಅದು ಅನಿರೀಕ್ಷಿತವಾದ ವಿಜೃಂಭಣೆಗೆ ಕಾರಣವಾಗಿತ್ತು.

ಸಾಯಂಕಾಲ ಆ ಮನೆಯಿಂದ ಗಂಡಿನ ಮನೆಗೆ ಗಂಡುಹೆಣ್ಣುಗಳು ಮೆರವಣಿಗೆಯಲ್ಲಿ ಹೊರಟುವು. ಮೆರವಣಿಗೆಯ ಸಂಪೂರ್ಣ ಜವಾಬ್ದಾರಿ

ರಾಜುವಿನ ತಮ್ಮ ಸೋಮಣ್ಣನದು. ಅವನ ಉತ್ಸಾಹಕ್ಕೆ ಇತಿಮಿತಿಯೇ ಇರಲಿಲ್ಲ. ಲೈಟುಗಳನ್ನು ಸರಿಮಾಡುವವನೂ ಅವನೇ, ಕಾರಿಗೆ ಹೂವಿನ ಅಲಂಕಾರ ಮಾಡುವವನೂ ಅವನೇ, ವಾಲಗದವರನ್ನು ನಿಂತ ಜಾಗದಿಂದ ಮುಂದಕ್ಕೆ ಕದಲಿಸುವವನೂ ಅವನೇ. ಹೀಗೆ ಎಲ್ಲೆಲ್ಲಿಯೂ ಅವನೇ ಹಾರಾಡುತ್ತಿದ್ದನು.

ಊರಿನವರೆಲ್ಲ ಗಂಡುಹೆಣ್ಣಿನ ಜೊತೆಯನ್ನು ಕಂಡು ತುಂಬಾ ಸಂತೋಷಪಟ್ಟರು. ನಾಗು ಅಂಥ ಹುಡುಗಿ ಆ ಸುತ್ತಿನಲ್ಲೇ ಇಲ್ಲವೆಂಬುದನ್ನು ಹೆಂಗಸರ ಗುಂಪಿನಲ್ಲಿ ಸರ್ವಾನುಮತದಿಂದ ಅಂಗೀಕರಿಸಲಾಯಿತು. ಸೋಮಣ್ಣನಿಗಂತೂ ತನ್ನ ಅಣ್ಣ ಅತ್ತಿಗೆಯರೆಂದು ಅವರನ್ನು ಹೇಳಿಕೊಳ್ಳುವುದಕ್ಕೆ ತುಂಬಾ ಹೆಮ್ಮೆಯೆನಿಸಿತು. ಸೆಜ್ಜೆಯ ಶಿವಪ್ಪನವರಂತೂ ಹಿರಿಹಿರಿ ಹಿಗ್ಗಿ ಹೋಗಿದ್ದರು. ಅವರಿಗೆ ತಮ್ಮ ಸೊಸೆ ಬೆಳಕಿನಲ್ಲಿ ಮಾಡಿದ ಮೂರ್ತಿಯಂತೆ ಕಂಡಳು. ನಾಗು ಮೌನವಾಗಿಯೇ ಇದ್ದಳು. ಅವಳ ಪಕ್ಕದಲ್ಲಿ ಪಲುಕೂರಿನ ಇನ್ನೊಬ್ಬ ನಾಗುವೂ ಕುಳಿತಿದ್ದಳು. ರಾಜುವನ್ನು ಕಂಡರೆ ಅಲ್ಲಿಯ ಹುಡುಗರಿಗೇನೋ ಒಂದು ದೊಡ್ಡ ಭಾವನೆ. ಆದುದರಿಂದ ಅವನ ಪಕ್ಕಕ್ಕೆ ಯಾರೂ ಸೇರಿರಲಿಲ್ಲ. ಮಂದಗಮನದಿಂದ ಕಾರು ರಾಜುವಿನ ಮನೆಯಮುಂದೆ ಬಂದು ನಿಂತಿತು.

ಗಂಡುಹೆಣ್ಣುಗಳು ಇಳಿದುವು. ಬಾಗಿಲಲ್ಲಿ ಆರತಿಯಾಯಿತು. ಗಂಡು ಹೆಣ್ಣುಗಳು ದೇವರ ಮನೆಯೊಳಕ್ಕೆ ಹೋಗಿ ದೇವರಿಗೆ ನಮಸ್ಕಾರ ಮಾಡಿ ಹಿರಿಯರಿಗೆ ನಮಸ್ಕಾರ ಮಾಡಲು ಹೊರಗೆ ಬರೋಣವೆನ್ನುವಾಗಲೇ ಆರತಿ ಮಾಡಿದ ಮರಮ್ಮ ಬಾಗಿಲ ಬಳಿ ಸೊಗಸಿನಿಂದ ಕೈಕಾಲನ್ನು ಅಡ್ಡಲಾಗಿಟ್ಟುಕೊಂಡು ನಿಂತಿದ್ದಳು. ರಾಜುವಿಗೆ ಅರ್ಥವಾಯಿತು.

"ನಾಗು ಅಂತ; ದಾರಿ ಬಿಡಕ್ಕ" ಎಂದುಬಿಟ್ಟನು. ಮರಮ್ಮನಿಗೆ ಅತೃಪ್ತಿಯಾಯಿತು. ಸಂಕೋಚಪಟ್ಟುಕೊಂಡು ಹೇಳಿದಷ್ಟೂ ಅದರಲ್ಲಿ ಸ್ವಾರಸ್ಯವಿರುತ್ತದೆ ಎಂದು ಅವಳ ಭಾವನೆ. ರಾಜು, ತನ್ನ ಪ್ರಶ್ನೆಗಿಂತ ಮುಂಚೆ ಅಷ್ಟು ಬೇಗನೆ ತನ್ನ ಹೆಂಡತಿಯ ಹೆಸರು ಹೇಳಿಬಿಡಬಾರದಾಗಿತ್ತು ಎಂದವಳಿಗನ್ನಿಸಿತು. ನಾಗುವಿನ ಸರದಿ ಬಂತು.

ರಾಜು ತನ್ನ ಹೆಸರನ್ನು ಹೇಳಿದಾಗಲೇ ನಾಗುವಿನ ಮೈಯೆಲ್ಲ ಬಿಸಿಯಾಗಿ ಕೆನ್ನೆಯೆಲ್ಲಾ ಕೆಂಪಾಗಿ ಹೋಗಿತ್ತು. ಈಗ ತಾನು ಹೇಳಬೇಕು. ಬಲವಂತ ವಿಪರೀತವಾಗಿಬಿಟ್ಟಿತ್ತು. ನಾಗುವು ಅಂಥ ಬಾಗಿಲನ್ನು ಎಷ್ಟೋಬಾರಿ ದಾಟಿದ್ದಾಳೆ. ಆದರೆ ಈ ಸಮಯದಲ್ಲಿ ಆ ಒಂದು ಹೊಸ್ತಿಲನ್ನು ದಾಟುವುದು ಅವಳಿಗೆ ಅಸಂಭವವೆಂದೇ ತೋರಿತು. ತನ್ನೆರಡು ತುಟಿಗಳ ನಡುವೆ ತನ್ನ ಗಂಡನ ಹೆಸರು ಬರುವವರೆಗೆ ನಾಗು ಆ ಬಾಗಿಲನ್ನು ದಾಟುವ ಹಾಗಿಲ್ಲ. ಹೊರಗೆ ಶಿವಪ್ಪನವರು ಬೇರೆ ಹೊತ್ತಾಯಿತೆಂದು ಘಾಬರಿ ಪಡಿಸುತ್ತಿದ್ದಾರೆ. ಕಡೆಗೆ ರಾಜುವೇ,

"ಅವಳ ಗಂಡನ ಹೆಸರು ರಾಜಶೇಖರ ಅಂತ, ಹೋಗೋಣ ದಾರಿ ಬಿಡು ಮರಕ್ಕ" ಎಂದನು ಮರಮ್ಮ ಜಗ್ಗಲಿಲ್ಲ. ಹೆಂಗಸರೆಲ್ಲ 'ಘೊಳ್' ಎಂದರು. ಪುನಃ ರಾಜು ನಾಗುವನ್ನೇ ಕುರಿತು,

"ಹೇಳಿಬಿಡು" ಅಂದನು.

ಹೆಂಗಸರಿಗೆ ಆ ಮಾತು ಕೇಳಿ ಹೊಟ್ಟೆ ಬಿರಿಯುವಷ್ಟು ನಗು ಬಂತು. ನೂರಾರು ಹಿತ್ತಾಳೆ ಪಟ್ಟಿಗಳು ತೆಂಗಿನಮರದೆತ್ತರದಿಂದ ಗಾರೆ ನೆಲದ ಮೇಲೆ ಬಿದ್ದ ಶಬ್ದದ ಹಾಗಿತ್ತು ಅವರ ಶಬ್ದ ಸಂಭ್ರಮ. ಅವುಗಳ ಮಧ್ಯೆ ಚಳಿಯಲ್ಲಿ ಕುಳಿತ ಪಾರಿವಾಳದಂತೆ ಕುಗ್ಗಿ ನಿಂತಿದ್ದ ನಾಗುವು ತಗ್ಗಿಸಿದ ತಲೆಯಿಂದ ಸಣ್ಣಗೆ

"ರಾಜಶೇಖರಸ್ವಾಮಿ" ಎಂದುಬಿಟ್ಟಳು.

ಅದು ಒಬ್ಬಿಬ್ಬರಿಗೆ ಕೇಳಿಸಿತೋ ಇಲ್ಲವೋ ತಿಳಿಯದು. ಮರಮ್ಮನಿಗಂತೂ ಕೇಳಿಸಿತು. ಅವಳಿಗೆ ಅಷ್ಟರಲ್ಲೇ ನಾಗುವಿನ ಮೇಲೆ ಕರುಣೆ ಬಂದುಬಿಟ್ಟಿತು. ಅವಳು ದಾರಿ ಬಿಟ್ಟುಬಿಟ್ಟಿದ್ದಳು. ಎಷ್ಟೋ ಜನದ ಅಸಮಾಧಾನದ ಮೇಲೆ ನಡೆದುಕೊಂಡು ರಾಜು, ನಾಗು ಅಡಿಗೆಮನೆಯನ್ನು ಪ್ರವೇಶಿಸಿದರು.

ಅಲ್ಲಿ ಒಲೆಯ ಮೇಲೆ ಒಂದು ಪಾತ್ರೆಯಲ್ಲಿ ಹಾಲು ತುಂಬಿರಿಸಿತ್ತು ಅದಕ್ಕೆ ರಾಜು ಸೌದೆ ತಂದುಕೊಟ್ಟ ಶಾಸ್ತ್ರ ಮಾಡಿಸಿದರು. ನಾಗು ಒಲೆ ಊದಿದಳು. ಮೊದಲೇ ಕಾದಿದ್ದ ಹಾಲು, ನೊರೆ ನೊರೆಯಾಗಿ ಮೇಲೇರಿ ಮೇಲೇರಿ ಉಕ್ಕುಕ್ಕಿ ಒಲೆ, ಬೆಂಕಿ, ಸೌದೆ ಎಲ್ಲದರ ಮೇಲೂ ಹರಿದುಬಿತ್ತು. ಹಾಲು

ಉಚ್ಚರಿಸುವ ಶಾಸ್ತ್ರವೂ ನೆರವೇರಿದ ಮೇಲೆ, ಗಂಡು ಹೆಣ್ಣುಗಳು ಆರತಿ ಅಕ್ಷತೆಗೆಂದು ಮಂಟಪಕ್ಕೆ ಬಂದುವು.

ಮದುವೆಯ ಸಂಭ್ರಮಗಳೆಲ್ಲ ಹೀಗೆಯೇ ಒಂದೊಂದಾಗಿ ಕಳೆದು ಹೋದುವು. ನಾಗು ಇನ್ನೂ ನಾಲ್ಕಾರು ದಿನಗಳು ಸೆಜ್ಜೆಯಲ್ಲೇ ಇರಬೇಕೆಂದಾಗಿತ್ತು. ರಾಜು ಅಲ್ಲಿಂದಲೇ ರಜೆ ಅರ್ಜಿ ಬರೆದು ಮೈಸೂರಿಗೆ ಒಬ್ಬನನ್ನು ಕಳುಹಿಸಿದ. ಅವನು ಆ ರಜದ ದಿನಗಳನ್ನು ಕಳೆದಷ್ಟು ಸಂತೋಷವಾಗಿ ಹಿಂದೆಂದೂ ಕಳೆದಿರಲಿಲ್ಲ. ನಾಗುವಿಗೂ ಅಷ್ಟೆ. ಕಂಡು ಕೇಳಿದವರೊಬ್ಬರೂ ಇಲ್ಲವಲ್ಲ, ಎಂಬುದೊಂದೇ ಕೊರತೆ. ಮಿಕ್ಕ ಯಾವ ವಿಷಯಗಳಲ್ಲೂ ಕುಂದು ಬರದಿರಲು, ನಾಗುವಿನ ಹೆಣ್ಣು ತಂದ ಅತ್ತೆ, ದುಡಿಯುತ್ತಿದ್ದರು.

ನಾಗುವನ್ನು ಕಂಡರೆ ನೋಡಿದವರಿಗೆಲ್ಲ ಪ್ರೀತಿ ಬರುವುದಕ್ಕೆ ಅವಳ ಮುದ್ದು ಮುಖವೇ ಕಾರಣವಿರಬಹುದು. ಎಲ್ಲರ ಮೆಚ್ಚಿಗೆಯನ್ನೂ ಪಡೆದುದರ ಜೊತೆಗೆ ಅವಳು ತನಗೋಸ್ಕರವೆಂದು ಮರಮ್ಮನನ್ನು ಸಂಪಾದಿಸಿ ಕೊಂಡಿದ್ದಳು. ಮರಮ್ಮ ನಾಗುವಿನಂತೆಯೇ ಸೆಜ್ಜೆಯ ಸೊಸೆ, ಎಂದರೆ ಅವಳು ಮತ್ತು ಅವಳ ಸ್ನೇಹ ನಾಗುವಿಗೆ ಶಾಶ್ವತ. ಇದೇ ಆಸೆಯಿಂದಲೇ ಮರಮ್ಮನೂ ನಾಗುವನ್ನು ಪ್ರೀತಿಸುತ್ತಿದ್ದುದು. ನಾಗುವಿಗಿಂತ ಮರಮ್ಮನಿಗೆ ಆರುವರ್ಷ ವಯಸ್ಸು ಜಾಸ್ತಿಯಾಗಿದ್ದರೂ ಮರಮ್ಮನ ಮನಸ್ಸು ಅವಳನ್ನು ನಾಗುವಿನ ವಯಸ್ಸಿನ ಹೆಣ್ಣಾಗಲು ಅನುಮತಿ ಕೊಟ್ಟಿತ್ತು. ಅವರಿಬ್ಬರೂ ಒಬ್ಬರ ತೊಡೆಯಮೇಲೊಬ್ಬರು ತಲೆಹಾಕಿ ಮಲಗುವಷ್ಟು ಗೆಳತಿಯರಾದರು.

ರಾಜುವಿಗೆ ಇನ್ನೇನೂ ಕೆಲಸವೇ ಇಲ್ಲ. ಬೆಳಗಿಂದ ಹಿಡಿದು ಹೊತ್ತು ಮುಳುಗುವವರೆಗೆ, ತನ್ನದೇ ಆದ ಆ ಪನ್ನೇರಳೇ ಮರವಿರುವ ತೋಟಕ್ಕೂ, ಮನೆಗೂ ಅಲೆದಾಡುತ್ತಿರುವುದು, ಸದಾ ತನ್ನ ಭಾವೀ ಸಂಸಾರದ ಕನಸುಗಳನ್ನು ಕಟ್ಟುತ್ತಿರುವುದೇ ಅವನ ಕೆಲಸ. ಅವನ ಆ ಪನ್ನೇರಳೇ ಮರ ಅವನ ಜೀವನದಲ್ಲಿ ಅಸಾಧಾರಣ ಸ್ಥಾನ ಉಳ್ಳದ್ದು. ಅದರ ವ್ಯಕ್ತಿತ್ವವು ಅವನ ವ್ಯಕ್ತಿತ್ವಕ್ಕೆ ಹೊಂದಿಕೊಂಡಿತ್ತು.

ಆಗ ಅವನು ಪುಟ್ಟ ಹುಡುಗ. ಅವನ ಎಂಟನೇ ವರ್ಷದಲ್ಲಿ ಒಮ್ಮೆ ಮೈಸೂರಿಗೆ ಹೋಗಿದ್ದನಂತೆ. ಆಗ ಮಾರ್ಕೆಟ್ಟಿನ ಬಳಿ ಜನದ ಗಲಾಟೆಯಲ್ಲಿ

ತಪ್ಪಿಸಿಕೊಂಡುಬಿಟ್ಟನಂತೆ. ಪೋಲೀಸಿನವರು ಅವನನ್ನೆತ್ತಿಕೊಂಡು ಹೋಗಿ ಪೋಲೀಸ್‌ಸ್ಟೇಷನ್ನಿನ 'ಡ್ರೆಸ್‌ಬಾಕ್ಸ್' ಒಂದರ ಮೇಲೆ ಅವನನ್ನು ಕೂಡಿಸಿ ಅವನ ಮುಂದೆ ಒಂದಷ್ಟು ಕಡಲೇಪುರಿ, ಒಂದಷ್ಟು ಗೋಲಿಪೆಪ್ಪರಮೆಂಟು, ಒಂದೆರಡು ಪನ್ನೇರಳೇ ಹಣ್ಣುಗಳನ್ನು ಹಾಕಿದ್ದರು. ಪೋಲೀಸ್ ಮುನಿಯಪ್ಪ ತನ್ನ ತಂದೆಯನ್ನು ಕರೆದುಕೊಂಡೇ ಬರುವೆನೆಂಬ ನಂಬಿಕೆ ಅವನಿಗೆ ಬಂದಮೇಲೆ, ಅಳುವುದನ್ನು ನಿಲ್ಲಿಸಿ ಮುಂದೆ ಬಿದ್ದಿದ್ದ ತಿಂಡಿಗಳ ಕಡೆ ಗಮನವಿಟ್ಟನು. ಅವನು ಪನ್ನೇರಳೇ ಹಣ್ಣನ್ನೇ ಮುಂಚೆ ತಿಂದದ್ದು. ಆಮೇಲೆ ಕೊಂಚಹೊತ್ತಿನಲ್ಲೇ ಶಿವಪ್ಪನವರ ಜೊತೆಯಲ್ಲಿ ಮುನಿಯಪ್ಪ ಹಿಂತಿರುಗಿದುದರಿಂದ ಎಲ್ಲ ತಿಂಡಿಯನ್ನೂ ಜೇಬಿಗೆ ತುಂಬಿಕೊಂಡು ಎದ್ದನು. ಕಡಲೇಪುರಿ ಪೆಪ್ಪರಮೆಂಟುಗಳೆಲ್ಲ ತೀರಿಹೋದರೂ ಆ ಪನ್ನೇರಳೇ ಬೀಜಗಳು ಮಾತ್ರ ಅವನ ಜೇಬಿನಲ್ಲೇ ಉಳಿದುಕೊಂಡುವು. ಅವನ ಕೋಟಿನ ಜೊತೆಯಲ್ಲೇ ಅವು ಸಜ್ಜೆಗೂ ಬಂದು ತಲಪಿದುವು. ರಾಜುವಿನ ಅಮ್ಮ ಅವನ ಕೊಳಕು ಕೋಟನ್ನು ಒಗೆಯುವಾಗ ಭಾವಿಯ ಹತ್ತಿರ ಎಸೆದ ಆ ಬೀಜಗಳ ಪೈಕಿ ಒಂದು ಮೊಳಕೆಯೊಡೆದು ಎರಡು ಎಲೆಗಳನ್ನೂ ಬಿಟ್ಟು ಎಳೆಯ ಮಾವಿನ ಸಸಿಯಂತೆ ನಿಂತಿತು. ಅದನ್ನು ರಾಜುವೇ ಅತ್ಯಂತ ಪ್ರೀತಿಯಿಂದ ಎತ್ತಿಕೊಂಡುಹೋಗಿ ತಮ್ಮ ದ್ಯಾವರಗುಡ್ಡದ ತೋಟದ ಮೂಲೆಯಲ್ಲಿ ಹುಟ್ಟುಹಾಕಿದನು ಅದಕ್ಕೆ ತೃಪ್ತಿಯಾಗಿ ನೀರು ಸಿಗಲಿಲ್ಲ, ಕಸಿ ಮಾಡಲಿಲ್ಲ, ಗೋಡು ಹಾಕಲಿಲ್ಲ, ಪಾತಿ ಕಟ್ಟಲಿಲ್ಲ. ಆದರೂ ಅದೊಂದು ಮರವಾಯಿತು. ಅದು ಎಷ್ಟು ದೊಡ್ಡದಾಯಿತೆಂದರೆ ರಾಜುವು 'ಎಸೆಸೆಲ್ಸಿ' ಪರೀಕ್ಷೆಯ ವರ್ಷದ 'ಕ್ರಿಸ್‌ಮಸ್' ರಜದಲ್ಲಿ, ತನ್ನ ಪನ್ನೇರಳೇ ಮರದ ಮೇಲೆಯೇ ಕುಳಿತು ಓದುತ್ತಿದ್ದನು. ಅವನಿಗೀಗಲೂ ಆ ಮರದಿಂದಲೇ ತನಗೆ 'ಎಸೆಸೆಲ್ಸಿ' ಪಾಸಾಯಿತೆಂದು ನಂಬಿಕೆ. ಅವನಿಗೆ ಆ ಮರದಲ್ಲಿ ಬಹಳ ವಿಶ್ವಾಸ. ಅದೇ ಅವನ ಬೋಧಿವೃಕ್ಷ. ಅದರ ಹಣ್ಣುಗಳು ರಾಜುವನ್ನು ತೃಪ್ತಿಪಡಿಸಿತೋ ಇಲ್ಲವೋ, ಅದು ಮುಖ್ಯವಲ್ಲ. ಅದರ ಮೇಲೆ ಅವನು ಕುಳಿತು ಮಾಡಿದ ಯೋಚನೆಗಳೆಲ್ಲ ನನಸಾದುವಂತೆ. ಅವನು ಅದರ ಮೇಲೆ ಕುಳಿತು ನಾಗುವು ತನ್ನ ಹೆಂಡತಿಯಾಗುವಳೋ, ಇಲ್ಲವೋ ಎಂಬ ಪ್ರಶ್ನೆಯನ್ನು ತನಗೆ ತಾನೇ ಹಾಕಿಕೊಂಡಾಗ, ನವಿಲಿನ ತಲೆಯಮೇಲಿನ ಕಿರೀಟದಂತಹ ಒಂದು ಪನ್ನೇರಳೇ ಹೂವು ಅವನ ತೊಡೆಯಮೇಲೆ ಬಿದ್ದು

'ಹ್ಞೂ' ಎಂದು ಸೂಚಿಸಿತಂತೆ. ಆದುದರಿಂದ ರಾಜುವು ಯೋಚನಾಪರವಶ ನಾದಾಗಲೆಲ್ಲ ಆ ಗಿಡದಮೇಲೇ ಕಾಣಸಿಗಬೇಕು.

ನಾಗುವನ್ನು ಇನ್ನೊಂದು ತಿಂಗಳು ಉಳಿಸಿಕೊಳ್ಳಬೇಕೆಂದು ಸೆಜ್ಜೆಯ ಶಿವಪ್ಪನವರು ಇಷ್ಟಪಟ್ಟರು. ಕರೆದುಕೊಂಡು ಹೋಗಲು ಬಂದಿದ್ದ ಮುದ್ದಪ್ಪ ನವರು ಅವರಿಷ್ಟವನ್ನು ಪ್ರತಿಭಟಿಸದೇ ಯತ್ನವೂ ಇಲ್ಲದೆ ಹಿಂತಿರುಗಿದರು. ನಾಗು, ಎಷ್ಟೇ ಗಟ್ಟಿಮನಸ್ಸು ಮಾಡಿದರೂ ಮುದ್ದಪ್ಪನವರು ಹೋದುದಕ್ಕಾಗಿ ಮರಮ್ಮನೆದುರು ಕಣ್ಣೀರು ಹಾಕಿಕೊಳ್ಳದೇ ಇರುವುದಕ್ಕಾಗಲಿಲ್ಲ. ಅಂಥ ಕಷ್ಟಗಳನ್ನು ಅನುಭವದಿಂದ ತಿಳಿದ ಮರಮ್ಮ ಅವಳನ್ನು ಸಮಾಧಾನಮಾಡಿ ತಾನು ಕಣ್ಣೀರು ಹಾಕಿದಳು. ಮುದ್ದಪ್ಪನವರು ಪಲುಕೂರಿಗೆ ಹೋಗುವಾಗ ನಾಗುವಿನ ಸ್ಥಿತಿ ಏನಿರಬಹುದು ಎಂದು ರಾಜು ಊಹಿಸಿ ತನ್ನ ಸ್ನೇಹಿತರೊಡನೆ ತಾನೂ ಪೆಚ್ಚಾಗಿದ್ದನು. ಇದನ್ನು ಹೇಗೋ ತಿಳಿದ ಕೊರಮ ಸಿದ್ದಯ್ಯ, "ನಿಮ್ಮವ್ವನೂ ಈಗ ಗಂಡನ ಮನೆ ಕಂಡ್ರೆ ಹೆದರ್ಕತರಾ ರಾಜು? ಹುಡುಗಿ ಅಳೋದು ಸ್ವಭಾವ. ಅದೆಲ್ಲ, ಬತ್ತಾತ್ತಾ ಸರೋಯ್ತದೆ" ಎಂದನು.

ಇನ್ನೆರಡು ದಿನಕ್ಕೆ ರಾಜುವಿನ ರಜ ಪೂರ್ತಿಯಾಗುತ್ತದೆ, ಎನ್ನುವಾ ಗಲೇ ಅವನಿಗೆ ಯೋಚನೆಗಿಟ್ಟುಕೊಂಡುಬಿಟ್ಟಿತು. 'ನಾನೂ ಮೈಸೂರಿಗೆ ಹೊರಟು ಹೋದರೆ, ನಾಗುವಿಗೆ ಹೆದರಿಕೆಯಾಗೋದಿಲ್ಲವೇ?' ಎಂಬುದೇ ಅವನ ಯೋಚನೆ. ರಾಜುವು ಹೆಣ್ಣಾಗಿ ನಾಗುವಿನ ಕಷ್ಟವನ್ನು ಅನುಭವಿಸಿ ದನು. ಆಗ 'ನಾನೂ ಸೋಮಣ್ಣನ ಹಾಗೇ ಊರಲ್ಲೇ ಇದ್ದುಬಿಡುವ ಹಾಗಿ ದ್ದರೆ ಎಷ್ಟು ಚೆನ್ನಾಗಿರುತ್ತಿತ್ತು' ಎಂದುಕೊಂಡನು.

ನಿಜಕ್ಕೂ ರಾಜುವು ಯೋಚಿಸಿದಂತೆಯೇ ಆಗಿತ್ತು. ರಾಜುವಿನ ವಿಷಯ ವನ್ನು ಮುದ್ದಪ್ಪನವರಷ್ಟು ವಿಸ್ತಾರವಾಗಿ ನಾಗುವು ತಿಳಿದುಕೊಂಡಿರಲಿಲ್ಲ. ಈಗ ಮರಮ್ಮನ ಮೂಲಕ ತಿಳಿಯಿತು. ತನ್ನ ಗಂಡ ಮೈಸೂರಿನಲ್ಲಿ ಸರ್ಕಾರೀ ಕೆಲಸದಲ್ಲಿರುವನೆಂದು. ಅವಳಿಗೆ ಅದರಲ್ಲೇನೂ ಅಭ್ಯಂತರವಿರಲಿಲ್ಲ. ಸದ್ಯಕ್ಕೆ ಅವರು ಮೈಸೂರಿಗೆ ಹೊರಟುಹೋದ ಮೇಲೆ ತಾನು ಇನ್ನೊಂದು ತಿಂಗಳು ಇಲ್ಲಿದ್ದು ತಾನೇ ಏನು ಪ್ರಯೋಜನ, ಅಥವಾ ಅತ್ತೆ ಮಾವಂದಿರು ತನ್ನನ್ನು ಇರಿಸಿಕೊಂಡು ತಾನೇ ಏನು ಪ್ರಯೋಜನ ಎಂದವಳಿಗೆ ಅನಿಸಿತು. ಏಕೆಂದರೆ ಅವಳು ಸದ್ಯಕ್ಕೆ ಗಂಡನ ಮನೆಯಲ್ಲಿ ಏನೂ ಕೆಲಸ ಮಾಡುವ ಹಾಗಿರಲಿಲ್ಲ.

ರಾಜುವಿನ ಊಟವಾದ ಮೇಲೆ ಊಟಮಾಡುವುದು, ಮರಮ್ಮನ ಜೊತೆಯಲ್ಲಿ ಅಣ್ಣೆಕಲ್ಲೊ, ಅಳಿಗುಳಿಮಣೆಯೋ, ಆಡುತ್ತ ಕುಳಿತಿರುವುದು. ದಿನಕ್ಕೊಂದು ಬಾರಿ ರಾಜುವು ಮನೆಯಲ್ಲೇ ಇದ್ದಾಗ ತೋಟಕ್ಕೆ ಹೋಗಿ ಬರುವುದು, ಇಷ್ಟೇ ಕೆಲಸ. "ಮರಮ್ಮತಾನೇ ಹೀಗೇ ಎಷ್ಟುದಿನ ತನ್ನ ಜೊತೆಯಲ್ಲಿರುವುದು ಸಾಧ್ಯ? ನಾಳಿನಿಂದ ಅವಳೂ ಬರದೇ ಹೋಗಿ ಅಪರೂಪವಾಗಿಬಿಡಬಹುದು. ಆಗ ಗತಿಯೇನು?" ಈ ಆಲೋಚನೆಗಳು ನಾಗುವನ್ನು ಪೆಚ್ಚುಮಾಡುತ್ತಿದ್ದುವು.

ಅಂದು ಸಂಜೆ ಕಣಿಯನ ಗುಡ್ಡದ ನೆತ್ತಿಯ ಮೇಲಕ್ಕೆ ಹೋಗಿ ಏನನ್ನೋ ಓದುತ್ತ ಕುಳಿತಿದ್ದ ರಾಜುವು ಹೊತ್ತು ಬೀಳುವುದನ್ನು ಕಂಡು ಗುಡ್ಡವನ್ನು ಇಳಿಯ ಹತ್ತಿದನು. ಸಂಜೆಯ ಅರ್ಧ ಸೂರ್ಯ ಚೆಲುವಾಗಿದ್ದನು. ಸ್ವಲ್ಪ ದೂರದಲ್ಲೇ ಇದ್ದ ಸೆಜ್ಜೆಯ ಹತ್ತಿರದ ತೆಂಗಿನಗಿಡದ ಗರಿಗಳ ಮೇಲೆಲ್ಲ ಹೊಂಬಣ್ಣವು ತುಂಬಿಕೊಂಡಿತ್ತು. ಸೆಜ್ಜೆಯ ದಾರಿಗಳಲ್ಲಿ ದನದ ಗೊರಸಿನಿಂದಾದ ಧೂಳು ಊರಿಗೆ ಧೂಪ ಹಾಕಿದಂತಿತ್ತು. ಊರ ಮಗ್ಗುಲಿನ ಕೆರೆಯಲ್ಲಿ ಪಶ್ಚಿಮ ಭಾಗದ ಆಕಾಶದಂಚೆಲ್ಲವೂ ಕೆಂಚಗೆ ಪ್ರತಿಫಲಿಸಿತ್ತು. ಗಾಳಿಯು ಮೆಲ್ಲಗೆ ಸುಳಿದಾಡುತ್ತಿತ್ತು. ರಾಜುವಿಗೆ ಎಲ್ಲವೂ ಮಂಗಳವಾಗಿ ಕಂಡಿತು. ಅಷ್ಟು ಹೊತ್ತಿಗಾಗಲೇ ರಾಜು ಊರವರ ಹುಲ್ಲು ಹಿತ್ತಿಲುಗಳ ಬಳಿಗೆ ಬಂದಿದ್ದನು. ಎಲ್ಲರ ಮನೆಯ ಜೀತಗಾರರೂ ತಮ್ಮ ತಮ್ಮ ಶಕ್ತ್ಯನುಸಾರ ಹುಲ್ಲಿನ ಹೊರೆಯನ್ನು ಕಟ್ಟಿ ತಲೆಗೇರಿಸುತ್ತಿದ್ದರು. ಅಲ್ಲಿಯವರೆಗೂ ಮಳ್ಳಿಯಂತಿದ್ದ ಬೂದು ಮೋಡಗಳು ಕಪ್ಪು ಬಣ್ಣಕ್ಕೆ ತಿರುಗಿ ಹೆದರಿಸಲಾರಂಭಿಸಿದುವು. ಕೆಂಪು ಬಣ್ಣದ ಬಿಸಿಲ ಮೇಲೆಯೇ ಹನಿಗಳು ಎರಚಾಡಲು ಮೊದಲಿಟ್ಟಿತು. ರಾಜುವು ಆತುರವಾಗಿ ಮನೆಯ ಕಡೆಗೆ ನಡೆದನು.

ಮನೆಯ ಒಳಬಾಗಿಲಿಗೆ ರಾಜುವು ತಲೆ ಹಾಕುವುದಕ್ಕೂ ರಾಜುವಿನ ಅಮ್ಮ 'ಹಾಹಾ! ಒಳಗೆ ಬರಬೇಡ ಹೊರಗೇ ಇರು' ಎನ್ನುವುದಕ್ಕೂ ಸರಿಯಾಯಿತು. ರಾಜು ಕಾರಣ ತಿಳಿಯದೆ ಹೊರಜಗಲಿಗೆ ಬಂದನು. ಮರಮ್ಮ ಮನೆಯಿಂದ ಹೊರಕ್ಕೆ ಬಂದಳು. ರಾಜು 'ಅಕ್ಕಾ—ಅದೇನು?' ಎಂದನು. ಮರಮ್ಮ ಮುಖ ಕೆಂಪಗೆ ಮಾಡಿಕೊಂಡು ತೀರಾ ನಾಚಿಕೆಯಿಂದ ತನ್ನ ಚಿಗುರು ತುಟಿಗಳ ಮೇಲೆ ನಗೆಯನ್ನು ಕುಲುಕಿಸಿ ಓಡಿಹೋದಳು. ರಾಜುವಿಗೆ ಇದಕ್ಕೂ

ಕಾರಣ ಸಿಕ್ಕಲಿಲ್ಲ ರಾಜು ಮತ್ತೊಂದು ಗೊಂದಲಕ್ಕೆ ಬಿದ್ದನು. ಪುನಃ ಮನೆಯಿಂದ ಹೊರಕ್ಕೆ ಯಾರೂ ಬರಲಿಲ್ಲ. ರಾಜು, ರೂಮಿನೊಳಕ್ಕೆ ಹೋದನು. ಆ ರೂಮಿನ ಈ ಪಕ್ಕದಲ್ಲಿ ಯಾರೋ ಇಬ್ಬರು ಮೂವರು ಮಾತನಾಡಿಕೊಳ್ಳುತ್ತಿರುವಂತೆ ತೋರಿತು. ಅದನ್ನು ಎಷ್ಟು ಗಮನವಿಟ್ಟರೂ ಕೇಳಲಾಗಲಿಲ್ಲ. ಆ ಗುಂಪಿನಲ್ಲಿ ಸೋಮಣ್ಣ ಇದ್ದುದರಿಂದ, ರಾಜುವು ವಿಚಾರಿಸೋಣವೆಂದುಕೊಂಡು ಹೊರಗೆ ಬಂದನು.

"ಏನು ಸೋಮು ಇದು ?" ಎಂದನು.

ಸೋಮಣ್ಣ ತುಂಬಾ ಮೆದು ಮನುಷ್ಯ. ಅವನ ಒರಟಾಟವೆಲ್ಲ ಹೊಲ ಗದ್ದೆ ತೋಟಗಳ ಕೆಲಸದ ಮೇಲ್ವಿಚಾರಣೆಯಲ್ಲೇ ಹೊರತು, ಅವನೆದುರಿಗೆ ನಿಂತ ಹಿರಿಯರೆದುರಿನಲ್ಲಿ ಅವನು ತಗ್ಗಿಸಿದ ತಲೆ ಎತ್ತುತ್ತಿರಲಿಲ್ಲ. ಅವರ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿರಲಿಲ್ಲ. ಅವನ ಭಾಗಕ್ಕೆ ರಾಜುವೂ ಒಬ್ಬ ಯಜಮಾನನೇ. ಸೋಮಣ್ಣ ತನ್ನಣ್ಣನೆದುರಿಗೂ ಹೆಚ್ಚು ಮಾತನಾಡುತ್ತಿರಲಿಲ್ಲ. ಅವನು ಸುಮ್ಮನೆ,

"ಏನೂ ಇಲ್ಲ" ಎಂದುಬಿಟ್ಟು ಅತ್ತ ನಡೆದುಬಿಟ್ಟನು.

ಇನ್ನು ಆ ಗುಂಪಿನ ಮುಂದಾಳೆಂದರೆ ಆ ಪೋಕರಿ ಚನ್ನಬಸವ. ರಾಜು ಅವನನ್ನೇ "ಏನ್ರೋ ಇದು ನಿಮ್ಮ ಗಲಾಟೆ?" ಎಂದನು. ಚನ್ನಬಸವ ತಕ್ಷಣ, ಮುಚ್ಚಿಟ್ಟುಕೊಂಡಿದ್ದ ಒಂದು ಸಣ್ಣ ಕೊಳದಪ್ಪಲೆಯನ್ನು ಮೆಲ್ಲಗೆ ಈಚೆಗೆ ತೆಗೆದನು. ಅದರೊಳಗಿದ್ದ ಪದಾರ್ಥ ಹಳದಿ ಬಣ್ಣಕ್ಕಿತ್ತು. ಪುನಃ ರಾಜು ಬಾಯಿಬಿಚ್ಚುವುದರೊಳಗೆ 'ಇದು ಏನೂ ಇಲ್ಲ' ಎಂದವನೇ ಆ ಕೊಳದಪ್ಪಲೆಯನ್ನೇ ರಾಜುವಿನ ಕಡೆಗೆ ಬೀಸಿಬಿಟ್ಟನು. ರಾಜುವಿನ ಗೋಲ್ಡು ಸ್ಟಾಂಡರ್ಡ್ ಷರಟು, ಬೊಂಬಾಯಿ ಪಂಚೆಯೆಲ್ಲ ಅರಿಶಿನ ಬಣ್ಣವಾಯಿತು. ರಾಜುವಿಗೆ ಅವನ ಅದ್ಭುತ ಸಿಟ್ಟಿನೊಡನೆ ಪರಿಸ್ಥಿತಿಯ ಅರ್ಥವೂ ಆಯಿತು. ಹುಡುಗರೂ ಓಡಿಹೋಗಿದ್ದರು. ಅವರು ಸಿಕ್ಕಿದ್ದರೂ ಅವರನ್ನು ಶಿಕ್ಷಿಸುವ ಅಧಿಕಾರ ರಾಜುವಿಗಿರುತ್ತಿರಲಿಲ್ಲ. ಅವನು ಕೋಪ, ನಾಚಿಕೆ, ಸಂತೋಷಗಳನ್ನು ಬೆರಸಿ ಒಂದು ನಗುವನ್ನಾಗಿ ಮಾಡಿ, ಅದನ್ನು ನಕ್ಕು ಬಟ್ಟೆಗಳನ್ನು ಕೊಡವಿಕೊಳ್ಳುತ್ತಾ ರೂಮಿನೊಳಕ್ಕೆ ಹೊರಟುಹೋದನು.

ಮರುದಿನವೇ ಪುನಃ ಮುದ್ದಪ್ಪನವರು ಸೆಜ್ಜೆಗೆ ಬಂದರು. ಶಿವಪ್ಪನವರು ಮುದ್ದಪ್ಪನವರನ್ನು ಕರಸಿದ ಕಾರಣವನ್ನು ತಿಳಿಸಿದರು. ಮುದ್ದಪ್ಪನವರಿಗೆ ಸಂತೋಷವಾಯಿತು. ನಾಗುವನ್ನು ತಮ್ಮೂರಿಗೆ ಕರೆದುಕೊಂಡು ಹೋಗಬಹುದಲ್ಲಾ ಎಂಬುದೇ ಅವರ ಸಂತೋಷದ ಕಾರಣ. ನಾಗು, ರಾಜು ವಿರಲಿ, ಯಾರ ಕಣ್ಣಿಗೂ ಬೀಳದೇ ಮರಮ್ಮನೊಡನೆ ಇದ್ದುಬಿಟ್ಟಿದ್ದಳು. ಮುದ್ದಪ್ಪನವರು ಹೋಗಿ,

"ನಾಗು, ಹುಸಾರಾಗಿದೀಯಾ ?" ಎಂದರು.

ಅಲಲೆ, ಆ ಮಾತಿನಲ್ಲಿ ಎಷ್ಟು ಮಮತೆ ತುಂಬಿತ್ತು ! ಹಸು, ಕರುವನ್ನು ನೆಕ್ಕಿದಾಗ ಕರುವಿಗಾಗುವಷ್ಟು ಆನಂದ ನಾಗುವಿಗೆ ಆ ಮಾತಿನಿಂದಾಯಿತು. ತಮ್ಮಪ್ಪನನ್ನು ಇಷ್ಟುಬೇಗ ನೋಡುವುದಾಯಿತಲ್ಲ ಎಂದು ಹಿಗ್ಗಿದಳು. ಅವಳ ತುಂಬುಧ್ವನಿಯಿಂದ ಕೂಡಿದ 'ಹ್ಞು' ಎಂಬುದು ಓಂಕಾರದಷ್ಟು ಗಂಭೀರವಾಗಿ ಮುದ್ದಪ್ಪನವರ ಕಿವಿಗೆ ಬಿದ್ದು, ಅವಳ ನೆಮ್ಮದಿಗೆ ಅವರು ಸಂತೋಷಿಸಿದರು.

ರಾಜುವು ಸರಿಯಾಗಿ ನಾಗುವನ್ನು ನೋಡಿ ಐದಾರು ದಿನಗಳಾಗಿತ್ತು. ಇವತ್ತು, ನಾಗು ಪಲುಕೂರಿಗೆ ಹೊರಟುಹೋಗುತ್ತಾಳೆ. ಇವತ್ತು ಕೂಡ ನಾಗುವನ್ನು ರಾಜುವು ನೋಡಕೂಡದಂತೆ. ನಾಗುವಿಗೆ ಕೂಡ, ಹೋಗುವಾಗ ಒಂದು ಬಾರಿ ರಾಜುವನ್ನು ನೋಡಬೇಕೆಂಬ ಆಸೆಯಿದ್ದರೂ ಎಂದಿನಂತಲ್ಲದ ಈ ಪರಿಸ್ಥಿತಿಯಲ್ಲಿ ಅವಳಿಗೆ ಅದು ಅಸಾಧ್ಯ ಮತ್ತು ನಾಚಿಕೆಗೇಡು ಎನಿಸಿ ಸುಮ್ಮನಾಗಿದ್ದಳು. ಅಕಸ್ಮಾತ್ ಕಣ್ಣಿಗೆ ಬಿದ್ದರೆ ಅದೇ ಪುಣ್ಯವೆಂದುಕೊಂಡಿದ್ದ ಅವರಿಬ್ಬರಿಗೂ ಆ ಪುಣ್ಯ ಒದಗಲಿಲ್ಲ. ಎಲ್ಲರ ಬಲವಂತವೂ ಸೇರಿ ರಾಜುವನ್ನು ರೂಮಿಗೆ ಕೂಡಿ ಹಾಕಿತ್ತು. ಅದೆಷ್ಟು ಹೊತ್ತಿನಲ್ಲಿ ಗಾಡಿ ಮನೆ ಬಾಗಿಲಿಗೆ ಬಂತೋ, ಅದೆಷ್ಟು ಹೊತ್ತಿನಲ್ಲಿ ನಾಗು, ಮುದ್ದಪ್ಪನವರು ಹತ್ತಿದರೋ, ಅದೆಷ್ಟು ಹೊತ್ತಿನಲ್ಲಿ ಗಾಡಿಹೊರಟಿತೋ ಅದೊಂದೂ ರಾಜುವಿಗೆ ತಿಳಿಯದು. ಅವನನ್ನು ಅವರು ಬಿಡುಗಡೆ ಮಾಡಿದುದು, ಗಾಡಿಯು ಸೆಜ್ಜೆಯ ಊರು ಬಿಟ್ಟಮೇಲೆಂದು ಕಾಣಿಸುತ್ತದೆ. ಆದರೂ ರಾಜುವು ಯಾರಿಗೂ ತಿಳಿಯದಂತೆ ತೋಟಕ್ಕೆ ಆದಷ್ಟು ಜಾಗ್ರತೆ ಹೋಗಿ ಪನ್ನೇರಳೇ ಮರವನ್ನು ಹತ್ತಿದನು. ಅತಿ ದೂರದಲ್ಲಿ ಎತ್ತರವಾದ ಬೇಲಿಗಳಾಚೆ, ಆ ಏರಿನಲ್ಲಿ ಪಲುಕೂರಿನ ತನ್ನ ನಾಗುವನ್ನು ಕೂಡಿಸಿಕೊಂಡು ಹೋಗುತ್ತಿದ್ದ ಗಾಡಿಯು ಅಸ್ಪಷ್ಟವಾಗಿ

ಕಾಣಿಸಿತು. ಅದೇ ಅವನ ಅದೃಷ್ಟ. ಕೊಂಚಹೊತ್ತು ಅಲ್ಲೇ ಇರಲಾರದೆ ಇದ್ದು ಊರಿಗೆ ಬಂದನು. ಅವನಿಗೆ ಸೆಜ್ಜೆಯೇ ಶೂನ್ಯವಾಗಿ ತೋರಿತು. ಸೂರ್ಯನಿದ್ದೂ 'ಗವ್' ಎನ್ನುತ್ತಿದ್ದ ತನ್ನ ಮನೆಯಲ್ಲಿ ಇರುವ ಬೆಳಕನ್ನೂ ಇಲ್ಲವೆಂದುಕೊಂಡು, ರಾಜು, ಬೇಸರಪಡುತ್ತಿದ್ದನು.

ಮುದ್ದಪ್ಪನವರು ನಾಗುವಿನೊಡನೆ ಸೆಜ್ಜೆಯಲ್ಲಿ ಆಡಿದುದೇ ಮಾತು. ನಾಗುವು ಅಲ್ಲಿ ಕೊಟ್ಟದ್ದೇ ಉತ್ತರ. ಪುನಃ ಏನೂ ಮಾತನಾಡಲಿಲ್ಲ. ಒಂದು ಸರ್ತಿ ಮಾತ್ರ ತಮ್ಮ ಜೇಬಿನಿಂದಲೇ 'ತಗೋ ಕೂಸು' ಅಂದು ಎಲಡಕೆ ಕೊಟ್ಟರು. ಒಂದು ಸರ್ತಿ ತಾವು ಹಾಕಿಕೊಂಡಿದ್ದ ದಿಂಬನ್ನು 'ಎಲ್ಲಿ ವಸಿ ಅರ್‌ಗಾಗು' ಎಂದು ಹೇಳಿ ನಾಗುವಿನ ಬೆನ್ನಿಗೆ ಕೊಟ್ಟರು. ಇಷ್ಟಲ್ಲದೇ ಅವ ರಿಬ್ಬರಿಗೂ ಏನೂ ಮಾತನಾಡುವುದಕ್ಕಾಗಲೇ ಇಲ್ಲ. ಮೌನವಾಗಿದ್ದರೂ ಅವರಿಬ್ಬರಿಗೂ ಬೇಸರವಾಗಲೇ ಇಲ್ಲ. ಮಂಗಳವಾದ ಕಷ್ಟ ಸುಖಗಳ ಯೋ ಚನೆಯಲ್ಲೇ ತಂದೆಮಕ್ಕಳಿಬ್ಬರೂ ಪಲುಕೂರನ್ನು ಸೇರಿದರು.

ನಾಗುವು ಮನೆಯೊಳಕ್ಕೆ ಕಾಲಿಟ್ಟಾಗಲೇ ಅವಳಿಗೊಂದು ಕತ್ತಲೆ ಕೊಠಡಿ ಏರ್ಪಾಡಾಗಿತ್ತು. ಕೈಕಾಲು ತೊಳೆದುಕೊಂಡು ನೇರವಾಗಿ ಅಲ್ಲಿಗೆ ಹೊರಟು ಹೋದಳು. ನಾಗುವಿನತ್ತೆ ನಾಗುವನ್ನು ನೋಡಿದರು. ಲೋಕ ಪದ್ಧತಿಯಂತೆ ಅವರಿಗೆ ನಾಗು ತೀರ ಇಳಿದುಹೋಗಿರುವಂತೆ ತೋರಿತು. ಅದನ್ನು ಒಂದೆರಡು ಬಾರಿ ಆಡಿಯೂ ನಾಗುವಿನಲ್ಲಿ ತಮಗಿದ್ದ ಪ್ರೀತಿಯನ್ನು ವ್ಯಕ್ತಪಡಿಸಿಕೊಂಡರು. ಅಂದಿನಿಂದ ನಾಗುವಿಗೆ ಉಪಚಾರಕ್ಕೆ ಆರಂಭ ವಾಯಿತು.

ಸಜ್ಜಿಗೆ ತುಪ್ಪಗಳೇ ನಾಗುವಿನ ಹೊಟ್ಟೆಯನ್ನೆಲ್ಲಾ ತುಂಬಿಸಿಬಿಡು ತ್ತಿತ್ತು. ಇನ್ನು ಆ ಅನ್ನವನ್ನು ಸೇರಿಸುವುದೆಲ್ಲಿಗೆ? ಅವಳು ಆ ಅನ್ನ ತಿಂಡಿಗಳ ನ್ನೆಲ್ಲಾ ಕದ್ದು ಮುಚ್ಚಿಟ್ಟುಬಿಡುತ್ತಿದ್ದಳು. ಇವೆಲ್ಲ ಒಂದು ದಿನ ಮುದ್ದಪ್ಪನವರ ಅಕ್ಕನಿಗೆ ತಿಳಿದುಹೋಗಿ,

"ನಾಗು, ನಿನ್ನ ಶರೀರಕ್ಕೆ ನೀನೇ ಶತ್ರುವಾದರೆ ಹೇಗಮ್ಮ! ಮುಂದಕ್ಕೆ ನೀನೇ ಅನುಭವೆಯಿ[illegible]ಯೆ ನನ್ಗೇನು!' ಎಂದರು. ನಾಗುವಿನ ವಿಷಯದಲ್ಲಿ ಮುದ್ದಪ್ಪನವರ ಅಕ್ಕ ಉಪಯೋಗಿಸಿದ ಅತಿ ಕಠಿಣವಾದ ಮಾತುಗಳು. ಇಷ್ಟು ಮಾತಿಗೇ ನಾಗುವು ಹೆದರಿಹೋದಳು. ಅನಂತರ ಕಷ್ಟವೋ ಸುಖವೋ ಅತ್ತೆ,

ಹೇಳಿದ ಹಾಗೆ ನಡೆಯುವುದೆಂದು ತೀರ್ಮಾನಿಸಿದಳು. ಅವಳು ಕೊಟ್ಟಿದ್ದನ್ನೆಲ್ಲಾ ಬಲವಂತವಾಗಿ ನುಂಗಿದಳು. ಮಲಗಿ ಮಲಗಿಯೇ ಅರಗಿಸಿದಳು.

ಈಚೆಗೆ ಮುದ್ದಪ್ಪನವರು ತೀರ ಹದಗೆಟ್ಟರು. ರೂಢಿಯಂತೆ ಹದಿನಾರನೇ ದಿನಕ್ಕೆ 'ಶೋಭನ' ಮಾಡಿಬಿಡೋಣವೇ ಎಂದರೆ ನಾಗುವಿಗೆ ಇನ್ನೂ ಹದಿಮೂರು ವರ್ಷ. ಮಾಡದೆ ಉಳಿಸೋಣವೆಂದರೆ ಈಗ ನಾಗು ತಮ್ಮವಳು ಮಾತ್ರವಲ್ಲ. ಅವರನ್ನೂ ಕೇಳಿಕೊಳ್ಳಬೇಕು. ಒಂದೊಂದು ಬಾರಿ 'ಅವರನ್ನೇನು ಕೇಳೋದು! ಎಂದಿದ್ದರೂ ಕೊಟ್ಟ ಹೆಣ್ಣು ಕುಲದ ಹೊರಗೆ. ನಾಳೆ ಅವರ ಮನೆಗೆ ಹೋಗೋ ನಾಗು, ಇವತ್ತೇ ಹೋಗಲಿ' ಎನ್ನಿಸುವುದು. ಆದರೆ ಮರುಕ್ಷಣ ನಾಗುವಿನ ಸ್ವಭಾವ, ರೂಪುಗಳು ಅವರ ಮುಂದೆ ಬಂದು ನಕ್ಕು, ಅತ್ತು, ನಿಂತಾಗ ಮುದ್ದಪ್ಪನವರು ಮಂಕಾಗುವರು.

ಮುದ್ದಪ್ಪನವರ ಅಕ್ಕ ಅವತ್ತು, ಮೌನವಾಗಿದ್ದ ಮುದ್ದಪ್ಪನವರನ್ನು ಕೇಳಲೇಬೇಕಾಯಿತು.

"ಅಲ್ಲ–ಆಗ್ಲೇ ಆರು ದಿನಗಳಾಗಿಹೋಯ್ತು. ಇನ್ನೂ ಒಂದೂ ಮಾತಾಡ್ದೇ ಕೂತಿದೀಯಲ್ಲ. ಸಿದ್ಧಮಾಡ್ಕೊಳ್ಳೋರ್ಗೆ ಸುದ್ದಿ ಕೊಡಬೇಡವೇ —ಇದೇನು ಮಾನಾ ಉಳಿಸಿಕೊಳ್ಳೋಣ ಅಂತ ಮಾಡಿದ್ದೀಯೋ ಅಥವಾ ಹೋದ್ರೂ ಪರವಾಗಿಲ್ಲವೊ?" ಎಂದರು.

ಮುದ್ದಪ್ಪನವರಿಗೆ ನಗಬೇಕೋ ಅಳಬೇಕೋ ತಿಳಿಯಲಿಲ್ಲ. ಅವರು ಆಶ್ರಯಜೀವಿಗಳಂತೆ "ನನಗೇನೂ ತೋರೋದೇಇಲ್ಲ. ನೀವು ಹೆಂಗ್ಹೇಳಿದರೆ ಹಂಗೆ" ಎಂದರು.

ಈ ಮಾತಿನ ಅಭಿಪ್ರಾಯ ಅವರ ಅಕ್ಕನಿಗಾಯಿತು. ಪಾಪ! ತನ್ನ ಮಗಳನ್ನು ಮನೆಬಿಟ್ಟು ಕಳುಹಿಸುವುದಕ್ಕೆ ಯೋಚನೆಮಾಡ್ತಾ ಇದಾನೆ. ಘಾಬರಿಯಾಗಿದಾನೆ ಎನ್ನುವುದು ಅವರಿಗೆ ಸರಿಯಾಗಿ ತಿಳಿಯಿತು. ಆದರೂ "ನಾನೇನು ನಿನ್ನಹಂಗೆ ಮನೆಗೆ ಯಜಮಾನನಾ?" ಎಂದರು. ಮುದ್ದಪ್ಪನವರ ತಲೆಯ ಮೇಲೆ ದೊಡ್ಡ ಭಾರವೇ ಬಿದ್ದಹಾಗಾಯಿತು.

"ಅಕ್ಕ, ನನ್ನ ಮೇಲೇನೇ ಎಲ್ಲಾನೂ ಹಾಕಿಬಿಡ್ತೀಯಾ?" ಎಂದರು. ಅವರಿಗೆ ದುಃಖವೆನ್ನುವುದು ತುಟಿಗಳ ವರೆಗೂ ಬಂದುಬಿಟ್ಟಿತ್ತು. ಅವರಕ್ಕ ಆಮೇಲೆ ನಿಧಾನವಾಗಿ, "ಹಂಗಾದರೆ ನಾ ಹೇಳ್ದಂಗೆ ಮಾಡು. ನೀನು ನಾಳೆಯೇ

ಸೆಜ್ಜೆಗ್ಹೋಗಿ ಬರೋ ವರ್ಷ ಮಾಡಿಕೊಳ್ಳೋಣ ಅಂದುನೋಡು. ಅವರು ಹಂಗೇನಾದರೂ ಆಗೋದೇ ಇಲ್ಲ, ಅಂದರೆ ನಮ್ಮ ಹಣೇಬರ, ಹೆಂಗೋ ಆಯ್ತು ಅನ್ನಿಸಿಬಿಟ್ಟು ನಿಶ್ಚಯಮಾಡ್ಕಂಡು ಇದ್ದುಬಿಡೋಣ" ಅಂದರು.

ಮುದ್ದಪ್ಪನವರ ಮನಸ್ಸಿನಲ್ಲಿದ್ದುದೂ ಇದೇ ಮಾತುಗಳು. ಹೆಚ್ಚೇನು, ಇದೇ ಪದಗಳು. ಅಕ್ಕ ಇನ್ನೆರಡು ಮಾತಿನಲ್ಲಿ ನಿರ್ಧಾರವನ್ನು ಮುದ್ದಪ್ಪ ನವರಿಗೇ ವಹಿಸಿಬಿಟ್ಟಿದ್ದರೆ ಆಗ ಮುದ್ದಪ್ಪನವರೂ ಇದೇ ಮಾತಾಡುತ್ತಿದ್ದರು. ಅವರಿಗೆ ಈ ಮಾತಿನಿಂದ ಕೊಂಚ ಸಮಾಧಾನವಾಯಿತು. ಅಲ್ಲಿಂದ ಎದ್ದು ಹೋಗಿ ಕಪನಯ್ಯನವರಲ್ಲಿ ಏಕಾಂತವಾಡಿ ನೋಡಿದರು. ಅಲ್ಲಿಯೂ ಅದೇ ಸರಿ ಎನ್ನಿಸಿತು. ಮುದ್ದಪ್ಪನವರು ಪುನಃ ಸಜ್ಜೆಗೆಂದು ಹೊರಟರು.

ಮುದ್ದಪ್ಪನವರು ಸೆಜ್ಜೆಗೆ ಹೋದಾಗ ರಾಜುವು ಇರಲಿಲ್ಲ. ಅವನು ಮೈಸೂರಿಗೆ ಹೊರಟುಹೋಗಿ ಆಗಲೇ ಮೂರು ದಿನಗಳಾಗಿದ್ದವು. ಹೋದ ಗಳಿಗೆಯಲ್ಲೇ ಸೆಜ್ಜೆಯ ಶಿವಪ್ಪನವರ ಹೆಂಡತಿ ಪಲುಕೂರಿನಿಂದ ಹೊಸಗೆಯ ಆಹ್ವಾನದ ಶಾಸ್ತ್ರದ ಸಾಮಾನುಗಳು ಬರದೇ ಮುದ್ದಪ್ಪನವರು ಬಂದಾಗಲೇ ಊಹಿಸಿದರು. ಹೀಗಿರಬಹುದು ಸಮಾಚಾರ, ಎಂದು ತಮ್ಮ ಗಂಡನಿಗೆ ಸೂಕ್ಷ್ಮಕೊಟ್ಟರು.

ಅವತ್ತು ರಾತ್ರಿ ಶಿವಪ್ಪನವರೂ ಮುದ್ದಪ್ಪನವರೂ ಊಟ ಮುಗಿಸಿ ಹಪ್ಪಳವನ್ನು ತಿನ್ನುತ್ತಾ ಎಲಡಕೆ ತಟ್ಟೆಯನ್ನು ಮುಂದಿಟ್ಟುಕೊಂಡು ಕುಳಿತಿದ್ದರು. ಸೀಮೇಯೆಣ್ಣೆ ಲಾಟೀನು ಮಂಕಾಗಿ ಉರಿಯುತ್ತ ಸೂರಿನಲ್ಲಿ ತೂಗಾಡುತ್ತಿತ್ತು. ಇಬ್ಬರಲ್ಲೂ ಆಡಬೇಕಾದ ಒಡೊಂದು ವಿಷಯಗಳಿದ್ದುದರಿಂದ ಇಬ್ಬರೂ ಮಾತಾಡುತ್ತಿರಲಿಲ್ಲ. ಅವರಿಬ್ಬರ ಗಾಢಮೌನವನ್ನು ಒಡೆದ ಪುಣ್ಯ ಶಿವಪ್ಪನವರ ಎದುರುಮನೆಯ, ಮರಮ್ಮನ ಮಾವ ಸುಬ್ಬಪ್ಪನಿಗೆ ಸೇರಿತು.

ಸುಬ್ಬಪ್ಪ ತಾನೂ ಊಟ ಮುಗಿಸಿಕೊಂಡು ಇವರಿಬ್ಬರೂ ಜಗಲಿಯ ಮೇಲೆ ಕುಳಿತಿದ್ದುದನ್ನು ಕಂಡು ತಾನೂ ಬಂದನು. ಬರುತ್ತ ಬರುತ್ತಲೇ "ಓಹೊ! ಇನ್ನೊಂದು ಸೀಯೂಟದ ಹೊತ್ತೂ ಬಂದುಬಿಡ್ತು. ಮುದ್ದಪ್ಪ ನವರು ಬಂದುಬುಟ್ಟವ್ರೆ" ಎಂದುಕೊಂಡು ಬಂದನು.

ಶಿವಪ್ಪ "ಹ್ಞೂ,—ಇನ್ನೇನು ಮನುಷ್ಯರಾದಮೇಲೆ ಈ ನಾಟಕ ಎಲ್ಲಾ ಉಂಟೇ ಉಂಟಲ್ಲ" ಎಂದರು.

ಶಿವಪ್ಪ, ಸುಬ್ಬಪ್ಪ ಇಬ್ಬರೂ ನಕ್ಕರು; ಮುದ್ದಪ್ಪನವರು ನಗಲಿಲ್ಲ. ಸುಬ್ಬಪ್ಪ ಇದನ್ನು ಕಂಡು "ಇನ್ನೇನು ಮುದ್ದಪ್ನೋರೆ, ಇನ್ನು ಒಂಭತ್ತೇ ದಿನ ತಾನೇ ಉಳಿದಿರೋದು" ಎಂದನು.

ಮುದ್ದಪ್ಪನವರು 'ಇಲ್ಲ' ಎನ್ನುವುದಕ್ಕೂ ಸುಬ್ಬಪ್ಪನ ಮನೆಯವರ್‍ಯಾರೋ ಅವನನ್ನು ಕೂಗಿಕೊಳ್ಳುವುದಕ್ಕೂ ಸರಿಹೋಯಿತು. ಸುಬ್ಬಪ್ಪ ಎದ್ದುಹೋದನು. ಅವನಿಗೆ ಬಹುಶಃ 'ಇಲ್ಲ' ವೆನ್ನುವ ಶಬ್ದ ಕೇಳಿರಲಾರದು. ಅದು ಕೇಳಬೇಕಾಗಿದ್ದ ಶಿವಪ್ಪನವರಿಗೆ ಕೇಳಿಸಿಯೂ ಇಲ್ಲದಂತೆ ಕೇಳಿಸಿತು. ಅವರು ಅಪನಂಬಿಕೆಯಿಂದ ಪಾರಾಗುವುದಕ್ಕೋಸ್ಕರ ಪ್ರಾರಂಭಿಸಿಯೇಬಿಟ್ಟರು.

"ಇವಳು ಉದ್ದಿನಮೂಡೆ ಬಿಚ್ಚಿಸೀ ಬಿಚ್ಚಿಸೀ ಅಂತ ನಾಲ್ಕು ದಿನದಿಂದ ತಗಾದೇ ಮಾಡ್ತಾ ಇದಾಳೆ. ನಿಮ್ಮೂರಿಂದ ಯಾರಾದರೂ ಬರ್‍ಲೀ ಆಮೇಲೆ ಆಗ್ಲೀ ಅಂತೇಳಿ ತಳ್ತಾ ಬತ್ತಿದ್ದೆ" ಎಂದರು.

ಮುದ್ದಪ್ಪನವರಿಗೆ ಅದು ಸ್ಪಷ್ಟವಾಯಿತು. "ಹ್ಞೂ ಪಾಪ! ಅವರಿಗೆ ಗಾಬರಿಯಲ್ಲವೇ, ಹಪ್ಪಳ ಸಂಡಿಗೆ ಅಂತ" ಎಂದರು, ಕೆಳದನಿಯಲ್ಲಿ.

"ಅದಕ್ಕೇ ನೋಡಿ............" ಎಂದರು ಶಿವಪ್ಪ. ಆ ಎರಡು ಪದಗಳು ಮುದ್ದಪ್ಪನವರ ಹೃದಯದ ಎರಡು ಪಕ್ಕದಲ್ಲಿ ನಿಂತು ಗುದ್ದಿದ ಹಾಗಾಯಿತು. ಅವರು ದಿಙ್ಮೂಢರಾಗಿ,

"ಈ ವರ್ಷವೇ ಆಗ್ಬೋಗ್ಲೀ ಅಂತೀರ?" ಎಂದರು.

ಅದಕ್ಕೆ ಶಿವಪ್ಪನವರು "ಹಾಗಂದ್ರೆ?" ಎಂದು ಕೇಳಿದರು.

"ಅಂದ್ರೆ, ಹುಡುಗಿ ಇನ್ನೂ ಮೈಕಟ್ಟಿಲ್ಲಾ, ನಮಗೂ ಕೊಂಚ ತೊಂದರೆ ಇತ್ತು. ಏನೋ ದಯ್ವಿಟ್ಟು ಈ ವರ್ಷ ಪುರಸೊತ್ತು ಕೊಟ್ರೆ, ಬರೋ ವರ್ಷ ನಮ್ಮ ಯೋಗ್ಯತಾನುಸಾರ ನಡಸಿಕೊಟ್ಬುಡ್ತೀವಿ" ಎಂದು, ಮುದ್ದಪ್ಪನವರು ಹೇಳಿದುದರ ಜೊತೆಗೆ ಕೈಯನ್ನೂ ಜೋಡಿಸಿಬಿಟ್ಟರು.

ಶಿವಪ್ಪನವರು ಸ್ವಾತಂತ್ರ್ಯವನ್ನು ಕಳೆದುಕೊಂಡರು. ಅವರಿಗೆ ಮುದ್ದಪ್ಪನವರ ಮನಸ್ಸು ಗೊತ್ತು. ಆದರೆ ರಾಜುವಿನ ಮನಸ್ಸು ತಿಳಿಯದು. ಮನೆಯ ಹೆಂಗಸರು ಏನು ಹೇಳುವರೊ? ಇವೆಲ್ಲ ಯೋಚನೆಗಳೂ ಶಿವಪ್ಪನವರ ಕೈಲಿ ಒಂದು ಮಾತನಾಡಿಸಿತು:

"ನನ್ನ ನೀವು ಕೇಳ್ಕೊಳ್ಬೇಕೆ? ವಿಷಯಗಳು ಹೀಗಿವೆ ಅಂದಿದ್ರೆ ಸಾಕಾಗಿತ್ತು. ಆದ್ರೆ ನೋಡಿ, ಅವರೆಲ್ಲ ಈಗಿನ ಕಾಲದ ಹುಡುಗರು. ಅವರ ಮನಸ್ಸು ಹೇಗೋ ಏನುಕತೆಯೋ! ಅದೇ ಒಂದು ಪಂಚಾಯಿತಿ" ಅಂದರು. ಮುದ್ದಪ್ಪನವರು ಅದಕ್ಕೆ ತಕ್ಷಣ ಸಮಾಧಾನ ಕೊಡಲು ಸಿದ್ಧರಾದರು.

"ನಾನು ನಾಳೆಯೇ ಮೈಸೂರಿಗೆ ಹೋಗಿ ಅವರನ್ನ ಕಾಣ್ತೀನಿ. ತಮ್ಮ ಒಪ್ಗೆ ಒಂದಾದರೆ........ಅವರು ತಮ್ಮ ಮಾತು ಮೀರೋ ಅಷ್ಟು ನಾಗರಿಕರಾಗಿಲ್ಲ" ಎಂದು ಧೈರ್ಯವಾಗಿ ಅಂದರು.

ಶಿವಪ್ಪನವರು ಸಿಕ್ಕಿಹೋದರು. "ನಂದೇನೂ, ಎಲ್ಲ ಅವನ ಸಂತೋಷ, ನಾಳೆ ನನಗೂ ಅವನೇ ಯಜಮಾನ" ಅಂದುಬಿಟ್ಟರು.

ಮಾರನೆಯ ದಿನವೇ ಮುದ್ದಪ್ಪನವರು ಮೈಸೂರಿಗೆ ಸಂತೋಷದಿಂದ ಹಾರಿಹೋದರು. ಇವರು, ಮತ್ತು ರಾಜು, ಇಬ್ಬರೂ ಒಂದೇ ಘಳಿಗೆಯಲ್ಲಿ ರೂಮಿನ ಹತ್ತಿರ ಸೇರಿದರು.

ಅವತ್ತು ರಾತ್ರಿ ಮುದ್ದಪ್ಪನವರು ಯಾವ ಪ್ರಸ್ತಾಪವನ್ನೂ ಎತ್ತಲಿಲ್ಲ. ಆದರೂ ರಾಜುವು ಹೇಗೋ ತಿಳಿದುಕೊಂಡುಬಿಟ್ಟನು. ಮಾರನೇ ಬೆಳಗ್ಗೆ ಮುದ್ದಪ್ಪನವರು ಎಲ್ಲವನ್ನೂ ವಿವರಿಸಿದರು. ಬಸ್ಸಿನ ಹತ್ತಿರ ರಾಜು ಮುಖ ಸಪ್ಪಗಾಗಿರುವುದನ್ನು ತೋರ್ಪಡಿಸಿಕೊಳ್ಳದೇ 'ಹಿರಿಯರ ಮಾತಿಗೆ ಪ್ರತಿಯೇ ಇಲ್ಲ' ಎಂದನು. ಮುದ್ದಪ್ಪನವರಿಗೆ ರಾಜು ಪೆಚ್ಚಾಗಿದ್ದುದನ್ನು ಅರ್ಥಮಾಡಿಕೊಳ್ಳುವಷ್ಟು ಶಾಂತಿ ಸಿಕ್ಕಿತ್ತು. ಅವರು ಸಣ್ಣಗೆ ನಕ್ಕರು.

ಪಲುಕೂರಿನಲ್ಲಿ ಅಕ್ಕನಿಗೆ ಈ ಸಮಾಚಾರ ತಿಳಿಸಿದರು. ಬಸ್ಸು ಸ್ಟಾಂಡಿನಲ್ಲಿ ಕಂಡ ರಾಜುವಿನ ಪೆಚ್ಚುಮೋರೆಯನ್ನು ಅಕ್ಕನಿಗೆ ವರ್ಣಿಸಿ ಹೇಳಿ, ಅಲ್ಲೂ ಒಂದು ಬಾರಿ ತೃಪ್ತಿಯಾಗಿ ನಕ್ಕರು. ಆದರೆ ಕತ್ತಲು ಕೋಣೆಯ ಒಳಗೆ ಅವಿತು ಕುಳಿತಿದ್ದ ನಾಗುವಿಗೆ ಇದು ಸಹಿಸಲಿಲ್ಲ. 'ಅಯ್ಯೋ! ಅವರು ಸಪ್ಪಗಿದ್ದರಂತೆ' ಎಂಬುದು, ಅವಳನ್ನು ಸಪ್ಪಗೆ ಮಾಡಿತ್ತು.

೭

ರಾಜುವಿಗೆ ಹೋಟಲಿನವರ ಅನ್ನ, ಸ್ನಾನದ ಜೊತೆಗೆ ಗುದ್ದಾಡಿ ಗುದ್ದಾಡಿ ಸಾಕಾಗಿಹೋಗಿತ್ತು. ಎಣ್ಣೆ ನೀರು ಎನ್ನುವುದು ಸೆಜ್ಜೆಗೆ ಬಂದಾ

ಗಲೆ. ಆದರೆ ಅವನು ತನ್ನ ಮೈಸೂರು ವಾಸದ ವಿಷಯದಲ್ಲಿ ಬಹಳ ಸುಳ್ಳು ಗಳಾಡಿದ್ದನು. ಇಲ್ಲದಿದ್ದರೆ ಲಕ್ಷ ರೂಪಾಯಿ ಸಂಬಳವಿದ್ದರೂ ರಾಜುವನ್ನು ಅವರ ತಂದೆತಾಯಿಗಳು ಕೆಲಸದಿಂದ ಬಿಡಿಸಿಬಿಡುತ್ತಿದ್ದರು. ರಾಜು ವರ್ಷ ವರ್ಷಕ್ಕೆ ಫೇಲಾಗದೆ ಮುನ್ನಡೆದುದೇ ಅವನ ತಪ್ಪು. ಈಗ ಅರುವತ್ತು ರೂಪಾಯಿಗೆ ಆರುನೂರರಷ್ಟು ಕಷ್ಟಪಡುತ್ತಿದ್ದಾನೆ. ಅದನ್ನೆಲ್ಲಾ ಸಹಿಸಿ ಕೊಂಡೂ ಅವನು ಮೈಸೂರಿನಲ್ಲೇ ಒದ್ದಾಡುತ್ತಿರಬೇಕಾದರೆ ಏನೋ ಅದರ ಹಿಂದೊಂದು ಲೋಪವಿದ್ದೇ ಇರಬೇಕು.

ಕಾಲೇಜಿಗೆ, ರಾಜು ಪ್ರವೇಶಿಸಿದ ವರ್ಷ ಅವನಿಗೆ ಒಂದು ಬಾರಿ ಅವರ ಇಂಗ್ಲೀಷ್ ಉಪಾಧ್ಯಾಯರ ಮನೆಗೆ ಹೋಗುವಷ್ಟು ಪರಿಚಯ ಸಿಕ್ಕಿತು. ಆಗಲೇ ಅವನಿಗೆ ನಾಗರೀಕ ಸಂಸಾರದ ಸವಿ ತೋರಿದುದು. ಅವರ ವೇಷ್ಟು್ರ. ತಮಗೆ ಬರುತ್ತಿದ್ದ ಎಪ್ಪತ್ತು ರೂಪಾಯಿಯಲ್ಲೇ ತಮ್ಮದೊಂದು ಸುಂದರವಾದ ಸಂಸಾರವನ್ನು ಹೂಡಿಕೊಂಡಿದ್ದರು. ಅವರಿಗೆ ಸುಮಾರು ಮೂವತ್ತು ಮೂವತ್ತೆರಡು ವರ್ಷವಿರಬಹುದು. ಅವರ ಹೆಂಡತಿಗೆ ಸುಮಾರು ಇಪ್ಪತ್ತೈದು ವರ್ಷವಾದರೂ ಅವರಿಗಿದ್ದದ್ದು ಒಂದೇ ಹೆಣ್ಣು ಕೂಸು. ಅವರ ಆ ಗಂಧರ್ವರಂತಹ ಸಂಸಾರವನ್ನು ರಾಜು ಬೆಕ್ಕಸಬೆರಗಾಗಿ ನೋಡುತ್ತಿದ್ದನು. ಅವನಿಗೆ ಹೀಗೊಂದು ಸಂಸಾರ ಹೂಡದೇ ಇದ್ದರೆ ತಾನು ಸಂಸಾರಿಯಾಗುವುದೇ ಬೇಡವೆನಿಸಿತ್ತು.

ತನಗೆ ಎಂದಿದ್ದರೂ ಪಾಲಿಗೆ ಬರುವವಳು ಹಳ್ಳಿಯ ಹುಡುಗಿಯೇ ಎಂಬುದು ಮೊದಲಿಂದಲೂ ತಿಳಿದಿತ್ತು. ಆದರೂ ಅವನಿಗೆ ಒಂದು ಧೈರ್ಯ. ತನ್ನ ಹೆಂಡತಿಯನ್ನು ತನ್ನಂತೆ ಮಾಡಿಕೊಳ್ಳುವುದು ಬಹು ಸುಲಭವೆಂದು ತಿಳಿದುಕೊಂಡಿದ್ದನು. ಅವನ ಕಣ್ಣಿಗೆ ಸರಿಯಾದ ಹುಡುಗಿಯರು ಸೆಜ್ಜೆ ಯಲ್ಲಿ ಸಿಕ್ಕಲೇ ಇಲ್ಲ. ಆದುದರಿಂದಲೇ ಬಿದಿರುಟ್ಟೆಯಲ್ಲಿ ನಾಗುವಿನ ಆ ರೂಪು, ನಡತೆಗಳಿಗೆ ಶರಣುಹೋಗಿದ್ದನು. ಮೂರನೆಯವರಿಂದ ತನ್ನ ತಂದೆಗೆ ನಾಗುವಿನ ವಿಷಯ ತಿಳಿಸಿದವನೂ ಅವನೇ; ಕಡೆಗೆ ತಾಲಿ ಕಟ್ಟಿ ನಾಗುವನ್ನು ಜೇಬಿಗಿಳಿಬಿಟ್ಟವನೂ ಅವನೇ.

ನಾಗುವು ಒಳ್ಳೆಯ ಗೃಹಿಣಿಯಾಗುವುದರಲ್ಲಿ ರಾಜುವಿಗೆ ಸಂದೇಹವೇ ಇರಲಿಲ್ಲ. ಅವಳನ್ನು ನೆನೆಸಿಕೊಂಡಾಗಲೆಲ್ಲ, ರಾಜುವಿಗೊಂದೊಂದು ಬಹು

ಮಾನ ಸಿಕ್ಕಿದಷ್ಟು ಆನಂದವಾಗುತ್ತಿತ್ತು. ನಾಗುವಿನ ಕಣ್ಣುಗಳಲ್ಲಿ ಬೆಳಗುತ್ತಿರುವ ಬೆಳಕು ತನ್ನ ಜೀವನದ ತುಂಬಾ ಆವರಿಸಿಕೊಂಡು ಎಲ್ಲವೂ ಯಾವಾಗಲೂ ಸ್ಪಷ್ಟವಾಗಿಯೇ ಇರುತ್ತದೆ ಎಂದುಕೊಂಡನು. ಅವಳ ಲಕ್ಷ್ಮಿಯಂತಹ ನಿಲುವು ಸದಾ ತನ್ನ ಆಸರೆಯಾಗಿರುತ್ತದೆ ಎಂದವನ ನಂಬಿಕೆ. ಅವಳ ತಾವರೆ ಬಣ್ಣದ ಮುಖವು ತನ್ನ ಸುಖದ ಆವಾಸವೆಂದವನ ನಿರ್ಧಾರ.

ಅಂತಹ ನಾಗುವನ್ನು ಮೈಸೂರಿಗೆ ಕರೆತಂದು ಅವಳು ಮಾಡಿದಡಿಗೆಯನ್ನು ಊಟಮಾಡಬೇಕು. ಅವಳು ಎರೆದ ನೀರಿನಲ್ಲಿ ಮೀಯಬೇಕು. ಅವಳ ಚಿಕ್ಕ ಚಿಕ್ಕ ಮಧುರವಾದ ಆಸೆಗಳನ್ನು ಕೈಗೂಡಿಸಿಕೊಡಬೇಕು. ಅವಳನ್ನು ಇಲ್ಲೇ ಇರುವ ಸ್ವರ್ಗದಲ್ಲಿ ವಿಹರಿಸುವಂತೆ ಮಾಡಬೇಕು. ಎಂಬ ಇಂತಹ ನೂರಾರು 'ಬೇಕು' ಗಳ ಗಡಿಬಿಡಿಯಲ್ಲಿ ಈ ಒಂಟಿ ಬಾಳಿನ 'ಸಾಕು' ಎನ್ನುವ ಪದಕ್ಕೆ ಉಳಿಗಾಲವೆಲ್ಲಿ. ರಾಜು, ತನ್ನ ಮೈಮೇಲೆ ಅರಿಶಿನದ ನೀರು ಬಿದ್ದ ದಿನವೇ ತನ್ನ ಕನಸುಗಳೆಲ್ಲ ನನಸುಗಳಾದುವೆಂದು ಹಿರಿಹಿರಿ ಹಿಗ್ಗಿದ್ದನು. ತನ್ನ ನಾಗು ತನ್ನೊಡನೆ ಎಲ್ಲಿಗೆ ಹೋದರೆ ಅಲ್ಲಿಗೆ ಬರುವಳು. ದುಃಖವನ್ನು ಹಂಚಿಕೊಂಡ ಹಾಗೆಯೇ ಸುಖವನ್ನೂ ಹಂಚಿಕೊಳ್ಳುವಳು. ನಾನು ಅತ್ತರೆ ಅವಳು ನಗಿಸುವಳು, ನಾಗು ಅತ್ತರೆ ನಾನು ನಗಿಸುವೆನು. ಎಂದು ಹೂಡಿಕೊಂಡಿದ್ದ ಸಾವಿರ ಯೋಜನೆಗಳನ್ನೆಲ್ಲ ಮೈಸೂರಿಗೆ ಬಂದ ಮುದ್ದಪ್ಪನವರ ಆ ಮಾತು ಒಂದು ವರ್ಷ ಮುಂದಕ್ಕೆ ಹಾಕಿಬಿಟ್ಟಿತು. ಮುದ್ದಪ್ಪನವರು ಮೈಸೂರಿಗೆ ಬಂದೇ ಇನ್ನೂ ಸರಿಯಾಗಿ ನಾಲ್ಕು ತಿಂಗಳಾಗಿಲ್ಲ; ಇನ್ನೂ ಎಂಟು ತಿಂಗಳನ್ನು ಇದೇ ನರಕದಲ್ಲಿ ಕಳೆಯುವುದಾದರೂ ಹೇಗೆ, ಎನ್ನಿಸಿ ರಾಜುವು ಕುಗ್ಗಿಹೋದನು.

ರಾಜು, ತನ್ನ ರೂಮನ್ನು ಖಾಲಿಮಾಡಿ ಒಂದು, ಮನೆಯನ್ನೇ ಬಾಡಿಗೆಗೆ ತೆಗೆದುಕೊಂಡನು. ಅದನ್ನು ಅಚ್ಚುಕಟ್ಟು ಮಾಡುವುದೇ ಅವನು ಆಫೀಸಿನಿಂದ ಬಂದಮೇಲೆ ಮಾಡುತ್ತಿದ್ದ ಉದ್ಯೋಗ. ಅದರಲ್ಲೇ ಅವನೊಂದು ಸುಖವನ್ನನುಭವಿಸುತ್ತಿದ್ದನು. ಆ ಮನೆಯಲ್ಲಿ ನಾಗುವು ಓಡಾಡಿದರೆ ಹೇಗೆ ಎಂದು ಅವನಿಗವನೇ ಪ್ರಶ್ನಿಸಿಕೊಳ್ಳುತ್ತಿದ್ದನು. ಅದರ ಉತ್ತರಗಳು ಒಂದೆರಡು ರಾತ್ರಿ ಅವನ ಕನಸ್ಸಿನಲ್ಲಿ ಸಿಕ್ಕಿಬಹುದು.

ಈ ರೀತಿ ನಾಗುವೂ ಒಂದೆರಡು ಬಾರಿ ರಾಜುವನ್ನು ಭೇಟಿಮಾಡಿದ್ದಳು. ಅವಳಿಗೂ ಏಕೋ ರಾಜುವಿಲ್ಲದ ತನ್ನ ತೌರುಮನೆ ಬೇಸರವಾಗತೊಡಗಿತು. ಆದರೆ ಅವಳಿಗೆ ಆಗಾಗ ತೋರುತ್ತಿದ್ದ ಭಯವೆಂದರೆ ತಾನು ಮೈಸೂರಿನಲ್ಲಿ ಹೇಗೆ ಸಂಸಾರ ನಿರ್ವಹಿಸುವುದೆಂದು. ಒಂದೊಂದುಬಾರಿ ಪುಟ್ಟ ಹುಡುಗಿಯಂತೆ, ತಾನು ಮೈಸೂರಿನಲ್ಲಿರುವಾಗ ರಾಜುವೇನಾದರೂ ಕೋಪಿಸಿಕೊಂಡು ಬಯ್ದರೆ ತನ್ನನ್ನು ವಹಿಸಿ ಮಾತಾಡುವವರು ಇರುವುದಿಲ್ಲವಲ್ಲಾ, ಎಂಬ ಹೆದರಿಕೆಯೂ ಅವಳಿಗೆ ಆಗುತ್ತಿತ್ತು. ಏನೇ ಆಗಲಿ, ಇನ್ನು ಮುಂದೆ ತನ್ನ ಗಂಡನ ಮನೆಯೇ ತನಗೆ ಮನೆ ಎಂದು ನಾಗುವಿಗೆ ತಿಳಿದುಹೋಗಿತ್ತು.

ನಾಗು-ರಾಜುಗಳಿಗಿದ್ದ ಕಷ್ಟಸಷ್ಟಗಳೇ ಅಲ್ಲ. ಆದರೆ ಚಂದಣ್ಣನ ಕಷ್ಟ ಪರಮಾತ್ಮನಿಗೇ ಗೊತ್ತು. ಅವನು ಈ ಒಂದು ವರ್ಷಕ್ಕೆ ಆರು ವರ್ಷ ವಯಸ್ಸಾದವನಂತೆ ತೋರುತ್ತಿದ್ದನು. ದೇವರು ನಾಗುವನ್ನು ತೊರೆಯಿಸಿದ ದಿನದಿಂದ ಪ್ರಪಂಚಕ್ಕೆ ಸಂಬಂಧಪಟ್ಟ ಒಂದೊಂದು ಸಾಸುವೆಯ ಕಾಳಿನ ಮೇಲೂ ಅವನಿಗೆ ದ್ವೇಷ. ಅವನು ಊಟಮಾಡುತ್ತಿದ್ದ ಅನ್ನ ಅವನ ಮೈ ಹತ್ತುತ್ತಿಲ್ಲವೆಂಬುದು ಸತ್ಯ. ಈ ಸಮಾಚಾರ ಸೂಕ್ಷ್ಮವಾಗಿ ನೀಲಮ್ಮನಿಂದ ನಾಗುವಿಗೆ ತಿಳಿದಿತ್ತು. ಅವಳಿಗೆ ತುಂಬಾ ಹೆದರಿಕೆಯಾಯಿತು.

ಕಪನಯ್ಯನವರು ಚಂದಣ್ಣನ ಈ ಸ್ಥಿತಿಗಾಗಿ ತುಂಬಾ ಮರುಗಿದರು. ಅಂಗಳದ ನಂಜಪ್ಪನ ಹುಡುಗಿಯನ್ನು ಚಂದಣ್ಣನಿಗೆ ಕರೆದುಕೊಂಡುಹೋಗಿ ತೋರಿಸಿ ಅವನ ಮನಸ್ಸನ್ನು ಕೇಳಿದರು. ಅವನು ಸನ್ಯಾಸಿಯಂತೆ "ಹೆಣ್ಣೇನೋ ಸರಿಯಾಗಿದೆ. ಆದರೆ ಗಂಡೇ ಸರಿಯಾಗಿಲ್ಲ" ಎಂದುಬಿಟ್ಟನು. ಕಪನಯ್ಯನವರು ಮುದ್ದಪ್ಪನವರಲ್ಲಿ ಈ ವಿಷಯವನ್ನು ಹೇಳಿಕೊಂಡು ಅತ್ತರು.

ಮುದ್ದಪ್ಪನವರಿಗೆ ಚಂದಣ್ಣನು ಸಿಕ್ಕುತ್ತಲೇ ಇರಲಿಲ್ಲ. ಕಂಡರೂ ಮಾತನಾಡದೇ ಗೌರವವನ್ನು ತೋರಿಸುತ್ತಾ ತಲೆ ತಗ್ಗಿಸಿ ಹೊರಟು ಹೋಗುತ್ತಿದ್ದನು. ಅನೇಕ ವೇಳೆ ಮುದ್ದಪ್ಪನವರೇ ಚಂದಣ್ಣನನ್ನು ಮನೆಗೆ ಕರೆಕಳುಹಿಸಿದ್ದರು. ಆಸಾಮಿ ಯಾವಾಗಲೂ ರಾಚನ ಹೊಲದಲ್ಲೇ ಇರುತ್ತಾನೆಂದು ತಿಳಿಯಿತು. ಆದರೂ ಒಂದು ದಿನ ಬೀದಿಯಲ್ಲೇ ಚಂದಣ್ಣ ಅವರಿಗೆ ಸಿಕ್ಕಿಬಿದ್ದನು. ಮುದ್ದಪ್ಪನವರು ಚಂದಣ್ಣನನ್ನು ಜಗಲಿಗೆ ಕರೆದರು. ಮೌನವಾಗಿ ಚಂದಣ್ಣ ಜಗಲಿಗೆ ಬಂದು ಕುಳಿತನು. ಮುದ್ದಪ್ಪನವರು,

"ಯಾಕೆ ಚಂದಣ್ಣ ಮೈಗೆ ಸರಿಯಿಲ್ಲವೇ?" ಎಂದರು.

"ಇಲ್ಲ. ಸರಿಯಾಗಿದೀನಿ"

"ಮತ್ತೆ ಈಚೀಚೆಗೆ ದಿನ ದಿನಕ್ಕೆ ಮುದುಕರಂಗಾಯ್ತಾ ಬತ್ತಿದೀಯೆ?"

"ಅಯ್........ಇಲ್ಲಾ"

"ನೀನಂದರೆ ನಾ ಕೇಳ್ಬೇಕಲ್ಲ. ನಿಮ್ಮಪ್ಪ ಸುಮ್ನೆ ನನ್ನೆದುರಿಗೆ ಕಣ್ಣೀರು ಹಾಕ್ಕಂತರಲ್ಲ ಚಂದಣ್ಣ. ಹಿಂಗೆಲ್ಲ ಆಡದು ನ್ಯಾಯವಾ?"

"ನಾನೇನುಮಾಡ್ದೆ ಮಾವಯ್ಯಾ?"

"ನೀನೇನೂ ಮಾಡ್ಲಿಲ್ಲ. ಸುಮ್ನೆ ಕೂತ್ಕಂಡ್ಬುಟ್ಟಿ, ಅಂತ್ಲೇ ನಿನ್ನ ಮೇಲಿನ ದೂರು. ನಿಮ್ಮಪ್ಪನಿಗೆಷ್ಟು ವರ್ಷ ಗೊತ್ತಾ?"

"ಅದ್ನೇ ಹೇಳ್ತಿರ್ತಾರೆ ಅವ್ರು"

"ಮತ್ತೆ ಮುಪ್ನಲ್ಲಿ ಒಬ್ಬರ ಕೈಕೆಳಗಿನ ಅನ್ನಾನೇ ಗತಿ ಅಂತ ತಿಳ್ಕೊಂಡೇನೇ ಮನುಷ್ಯರು, ಮದುವೆ, ಹೆಂಡತಿ, ಮಕ್ಕಳು...........ಅಂತ ಮಾಡ್ಕಳದು."

"ಹಂಗಂದರೇ!"

"ಹಂಗಂದರೂ ಇಲ್ಲ, ಹಿಂಗಂದರೂ ಇಲ್ಲ. ಸುಮ್ನೆ ದೊಡ್ಡವರ ಮಾತ್ಕೇಳು. ನಂಜಪ್ಪನ ಹುಡುಗಿ ಒಪ್ಕೋ. ಮುಂದಿನ ತಿಂಗಳಲ್ಲೇ ಆಯ್ತು ಅನ್ನಸ್ಬುಡ್ತೀವಿ ಮದುವೇನಾ"

"ನನಗೇನೂ ಮಾತಾಡ್ಬೇಕೂ ಅನ್ನೋದೇ ತಿಳ್ಯೋದಿಲ್ಲ ಮಾವಯ್ಯ"

"ಅದಕ್ಕೇ ಹಿರೀಕರೂ ಅನ್ನೋರು ಹೇಳ್ದಂಗೆ ಕೇಳೂ ಅನ್ನೋದು. ನೀನೇ ಯೋಚ್ನೆಮಾಡು. ನನ್ನ ಬಲವಂತಕ್ಕೆ ಹ್ಞೂ, ಅನ್ನಬೇಕಾದ್ದಿಲ್ಲ"

ಚಂದಣ್ಣ ಬದುಕಿಕೊಂಡನು. ಯೋಚನೆಮಾಡುವುದಕ್ಕೆ ಅಂತಾದರೂ ಅವಕಾಶ ಸಿಕ್ಕುವುದಲ್ಲಾ, ಎಂಬ ಧೈರ್ಯವಾಯಿತು. ಮೌನದಲ್ಲಿ ಮುಗಿದ ಆ ಸಂಭಾಷಣೆಯು ಚಂದಣ್ಣನಲ್ಲಿ ಆಗ ಏನೂ ಪರಿಣಾಮ ಮಾಡಲಿಲ್ಲ. ಆದರೂ ಮುದ್ದಪ್ಪನವರ ಮಾತುಗಳ ಪೈಕಿ, ಮನುಷ್ಯನಿಗೆ ಮದುವೆ ಏಕೆ ಅಗತ್ಯವೆನ್ನುವ ವಿಷಯದಿಂದ ಕೂಡಿದ ಮಾತು ಮಾತ್ರ ಅವನ ಮನಸ್ಸಿನಲ್ಲಿ ನಿಂತಿತು. ಇವತ್ತು ತನ್ನನ್ನು ನಂಬಿದ ಕಪನಯ್ಯನವರು ಮುದುಕರಾದರೆ ನಾಳೆ ನಾನು ಹೀಗೇ ಇರುತ್ತೇನೆಯೇ? ಪ್ರಾಯದಲ್ಲಿ ಕಷ್ಟಗಳನ್ನು ಕಾಣು

ವಷ್ಟು ಉದಾಸೀನವಾಗಿ ಆಗಲೂ ಕಾಣಲು ಸಾಧ್ಯವೆ? ಮುಂತಾದ ಘನ ವಾದ ಯೋಚನೆಗಳು ಅವನಲ್ಲಿ ಖಂಡಿತ ಬರುತ್ತಿದ್ದುವು. ಆದರೆ ತಾವು ಮದುವೆಯಾಗುವುದಾದರೆ ಆಗುವುದು ನಾಗುವನ್ನಲ್ಲವಲ್ಲಾ ಎಂಬ ಯೋಚನೆ ಬಂದಾಗ ಪ್ರಪಂಚವೇ ಬೇಡವೆನ್ನುವ ಸನ್ಯಾಸಿಯಾಗುತ್ತಾನೆ ಚಂದಣ್ಣ ಸನ್ಯಾಸಿಗೆ ಯಾರು ಸತ್ತರೆ ತಾನೇ ಏನು?

ನೀಲಮ್ಮ ಸುಮಾರಾಗಿ ಚಂದಣ್ಣನ ಮನಸ್ಸನ್ನು ಊಹಿಸಿದ್ದಳು. ನಾಗುವಿನ ಮದುವೆಯು ಹಿಂದಿನ ವರ್ಷದ ಲಾಗಾಯ್ತು ಈ ದಿನದ ವರೆಗೂ ಇದೇ ದೃಷ್ಟಿಕೋನದಲ್ಲೇ ತನ್ನ ತಮ್ಮ ಚಂದಣ್ಣನನ್ನು ಗಮನಿಸುತ್ತಾ ಬಂದಿದಾಳೆ; ಚಂದಣ್ಣನ ಮನಸ್ಸಿನಲ್ಲಿ ನಾಗುವಿಗೆ ಎಂತಹ ಸ್ಥಾನವಿದೆ, ಎನ್ನುವುದನ್ನು ತೀರ್ಮಾನಿಸುವುದರಲ್ಲಿ ನೀಲಮ್ಮ ಮುಕ್ಕಾಲುಪಾಲು ಜಯವನ್ನು ಗಳಿಸಿದ್ದಾಳೆ. ಅವಳಿಗೂ ಗಂಡುಹೆಣ್ಣಿನ ಸಮಸ್ಯೆಗಳ ಪರಿಚಯವಿದೆ. ಗಂಡು ಈ ವಿಷಯದಲ್ಲಿ ಹೆಚ್ಚು ಹಟ ಹೂಡಬಹುದು. ಆದರೆ ಹೆಂಗಸಿಗೆ ಅದು ಸಾಧ್ಯವಿಲ್ಲ. ಅದನ್ನೇ ಕೊನೆಮುಟ್ಟಿಸುವಷ್ಟು ಸಾಹಸವು ಗಂಡಿನಲ್ಲಿರಬಹುದಾದರೂ, ಯಾರೂ ಹಾಗಾಗಬಾರದೆಂದೇ ಅವಳ ತೀರ್ಮಾನ.

ಇದನ್ನೆಲ್ಲಾ ಸೂಕ್ಷ್ಮವಾಗಿ ನಾಗುವಿಗೆ ತಿಳಿಸಿದಳು. ಆದರೆ ನಾಗುವೇನು ಮಾಡಬಲ್ಲಳು! ಅದು ಅವಳ ತಪ್ಪಲ್ಲ ಅವಳ ವ್ಯಕ್ತಿತ್ವದಲ್ಲಿದ್ದ ಆಕರ್ಷಣೆಯ ತಪ್ಪು. ಅವಳು ಚಂದಣ್ಣ ತನ್ನ ಮೇಲಿಟ್ಟಿರುವ ವೃಥಾಭಿಮಾನಕ್ಕಾಗಿ ತುಂಬಾ ಮರುಗಿದಳು. ಸಂಯಮದ ಮೂರ್ತಿಯಾಗಿದ್ದ ನಾಗುವಿಗೆ ಮನುಷ್ಯರ ಮನಸ್ಸು ಹೀಗೆ ಕಟ್ಟುಗಳನ್ನು ಮೀರಿ ವರ್ತಿಸುತ್ತದೆ ಎಂಬುದೇ ತಿಳಿಯದು. ಅವಳು ಚಂದಣ್ಣನಿಗಾಗಿ ಒಂದು ದಿನ ಕಣ್ಣೀರನ್ನೂ ಹಾಕಿದಳು ಆದರೇನು, ಚಂದಣ್ಣ ತನ್ನ ತಪ್ಪುಮಾರ್ಗ ಬಿಟ್ಟಹಾಗಾಯಿತೇನು?

ನೀಲಮ್ಮನಿಗೆ ಚಂದಣ್ಣನು ಬದುಕಬೇಕಾಗಿದ್ದರೆ ನಾಗುವಿನಲ್ಲೂ ಕೊಂಚ ಕರ್ತವ್ಯವಿದೆ ಎನ್ನಿಸುತ್ತದೆ ಒಂದು ಪಕ್ಷ ನಾಗುವೇನಾದರೂ ಒಂದು ಮಾತು ಹೇಳಿದರೆ ಚಂದಣ್ಣನ ಮನಸ್ಸು ಸ್ಥಿಮಿತಕ್ಕೆ ಬರಬಹುದೆಂದು ಯೋಚಿಸಿದ್ದಳು. ಆದರೆ ನಾಗುವು ಚಂದಣ್ಣನನ್ನು ಸಂಧಿಸಿ ಮಾತನಾಡುವುದು ಕತ್ತಲೆಯಲ್ಲಿ ಸೂರ್ಯನಿದ್ದ ದಿನ ಮಾತ್ರ ಸಾಧ್ಯವೆನಿಸಿತ್ತು. ಒಂದು ಕಡೆ ದಿನೇದಿನೇ ಹುಚ್ಚನಂತಾಗುತ್ತಿದ್ದ ತಮ್ಮನಾದ ಚಂದಣ್ಣ, ಒಂದು ಕಡೆ ದಿನೇದಿನೇ ಕೊರಗಿ ಕೃಶ

ವಾಗುತ್ತಿರುವ ತಂದೆ. ನಾಳೆ, ಕುಪಿತರಾದ ಕಪನಯ್ಯನವರು ಒಂದು ಮಾತು ಹೆಚ್ಚಾಗಿ ಆಡಿದರೆ ಚಂದಣ್ಣನೆಲ್ಲಿ ಪ್ರಾಣಬಿಡುವನೋ ಎಂಬ ಭಯ. ಈ ಒಂದು ದೊಡ್ಡ ಗೊಂದಲವು ಆ ವಿಧವೆಯಾದ ನೀಲಮ್ಮನನ್ನು ದಿಙ್ಮೂಢಳನ್ನಾಗಿ ಮಾಡುತ್ತಿತ್ತು.

ಪಲುಕೂರಿನ ನಾಗುವಿನ ಸ್ನೇಹಿತೆಯೆಂದರೆ ಚಂದಣ್ಣನ ಅಕ್ಕ ನೀಲಮ್ಮನೇ ಆದರೆ ಈಚೀಚೆಗೆ ಯಾವಾಗ ನೋಡಿದರೂ ನೀಲಮ್ಮ ಮೌನವಾಗಿರುತ್ತಿದ್ದಳು. ಅಥವಾ ಬಾಯಿಬಿಟ್ಟರೆ ಅವಳಾಡುತ್ತಿದ್ದುದು ಚಂದಣ್ಣನ ವಿಷಯವಲ್ಲದೇ ಬೇರೆಯಲ್ಲ. ಇದರಿಂದ ನಾಗುವಿಗೆ ಒಮ್ಮೊಮ್ಮೆ ಬೇಸರವಾಗುವುದೂ ಉಂಟು. ನಾಗುವಿಗೂ ಚಂದಣ್ಣನಲ್ಲಿ ಒಂದೆರಡು ಸಮಾಧಾನದ ಮಾತುಗಳನ್ನಾಡಿ ಅದರಿಂದ ಚಂದಣ್ಣನೇನಾದರೂ ದಾರಿಗೆ ಬಂದರೆ ಅಲ್ಲಿಗೆ ಈ ಸಮಸ್ಯೆ ಮುಗಿಯುವುದೆಂದೂ ಒಮ್ಮೊಮ್ಮೆ ಅನ್ನಿಸುತ್ತಿತ್ತು. ಆದರೆ ಹೇಗೆ ಅವನನ್ನು ಮಾತನಾಡಿಸುವುದು ? ಇದೇ ಪ್ರಶ್ನೆ ನೀಲಮ್ಮನಲ್ಲಿಯೂ ಇದ್ದರೂ, ಮದುವೆಗೆ ಮುಂಚಿನ ಚಂದಣ್ಣನ ಈ ಹುಚ್ಚನ್ನು ಬಿಡಿಸುವುದಕ್ಕೆ ನಾಗನೇ ಪಂಡಿತನೆಂದವಳು ಗಟ್ಟಿಯಾಗಿ ತಿಳಿದುಕೊಂಡಿದ್ದಳು.

ಮನೆಯಲ್ಲೇ ಕುಳಿತು ಈ ಇಬ್ಬರು ಹುಡುಗಿಯರು ಸದಾ ಗುಸುಗುಸು ಮಾತನಾಡಿಕೊಳ್ಳುವುದು ಸರಿಯಲ್ಲವೆಂದು ಅತ್ತೆಯ ತೀರ್ಮಾನವಾಗುವುದಕ್ಕೆ ಮುಂಚೆ ಇವರಿಬ್ಬರೇ ತಿಳಿದುಕೊಂಡುಬಿಟ್ಟರು. ಅದರಿಂದ ನಾಗು ಒಂದು ದಿನ ತಮ್ಮತ್ತೆಯನ್ನು ಬಹಳವಾಗಿ ಕೇಳಿಕೊಂಡು ತಮಾಷೆಯಾಗಿ ಒಮ್ಮೆ ಬಾಂದಿನ ಹೊಲಕ್ಕೆ ಹೋಗಿಬರುವುದಕ್ಕಾಗಿ ತೀರ್ಮಾನಿಸಿಕೊಂಡಳು. ಬಾಂದಿನ ಹೊಲವನ್ನು ನೋಡಿ, ನಾಗುವು, ಹೆಚ್ಚುಕಡಮೆ ಒಂದು ವರ್ಷಕ್ಕೆ ಬಂದಿತ್ತು. ಆದ್ದರಿಂದ ಅಷ್ಟು ಹೊಸ ಗಾಳಿಯನ್ನು ಕುಡಿದ ಹಾಗೂ ಆಗುತ್ತೆ, ಒಂದು ಗಳಿಗೆ ದೊಡ್ಡ ಆಕಾಶದಡಿಯಲ್ಲಿ ತಾವೇತಾವಾಗಿ ನಿಂತು, ಕುಳಿತು, ಆಡಿಕೊಂಡು ಬಂದಹಾಗಾಗುತ್ತದೆ ಎಂದುಕೊಂಡು ನಾಗಮ್ಮ ನೀಲಮ್ಮ ಇಬ್ಬರೂ ಸೇರಿ ಮುದ್ದಪ್ಪನವರ ಅಕ್ಕನನ್ನು ಒಪ್ಪಿಸಿದ್ದರು.

ಅಲ್ಲಿಗೆ ಹೋಗಬೇಕಾದ ದಿನವೂ ಬಂತು. ಮುದ್ದಪ್ಪನವರೇ ಕರೆದುಕೊಂಡು ಹೋಗುವುದಾಗಿಯೂ ತೀರ್ಮಾನವಾಯಿತು. ನಾಗುವಿನತ್ತೆ ಒಂದಷ್ಟು ತಿಂಡಿಯನ್ನೂ ಮಾಡಿಕೊಟ್ಟರು. ಬೆಳಗ್ಗೆ ಸುಮಾರು ಹತ್ತು

ಘಂಟೆಯ ಹೊತ್ತಿಗೆ ಮೂವರೂ ಹೊರಟರು. ನಾಗುವಿಗೆ ತನ್ನ ತುಂಬಾ ಹಿಂದಿನ ದಿನಗಳು ನೆನಪಿಗೆ ಬಂದುವು. ಆ ಕಾಲುವೆ, ಆ ಕಾಲುದಾರಿಯ ಸೇತುವೆ, ಆ ತಾಳೆಗುತ್ತಿಗಳು, ಆ ಗೊಬ್ಬಳೀ ಅಡು, ಆ ಹುಲ್ಲುಗಾವಲು, ಆ ಬಾಂದಿನ ಹೊಲದ ಕನ್ನ, ಎಲ್ಲವೂ ಹಿಂದಿನ ಹಾಗೆಯೇ ಇದ್ದುವು. ಈ ಬಾರಿ ನಾಗುವು ತಮ್ಮ ತೋಟಕ್ಕೆ ಹೋದದ್ದಕ್ಕೂ ಈ ಹಿಂದೆ ಹೋದುದಕ್ಕೂ ಒಂದೇ ವ್ಯತ್ಯಾಸ. ತನ್ನ ಕೈಲಿರುವ ತಿಂಡಿಗಳನ್ನು, ಹಿಂದೆ ತಾನು ಭೋಗರ ಜೀತಗಾರನು ಕೇಳುತ್ತಿದ್ದ ಹಾಗೆ ಈಗ ಕೇಳುವುದಕ್ಕೆ ಅವನಿರಲಿಲ್ಲ, ಅಷ್ಟೆ.

ಮುದ್ದಪ್ಪನವರ ಬಾಂದಿನ ಹೊಲ ಎಂದರೆ ಅದರೊಳಗೆ ನಿಂತುಕೊಂಡರೆ ನಾಲ್ಕುಬೇಲಿಗಳಾಚೆಯೂ ಆಕಾಶದ ಅಂಚು ಬೀಳುತ್ತಿರುವ ಹಾಗೆ ಕಾಣುತ್ತದೆ ಅಷ್ಟಿದೆ ಅದರ ವಿಸ್ತೀರ್ಣ. ಅದರ ಬೇಲಿಯ ಒಳ ಪಕ್ಕದಲ್ಲೇ ನಡೆದು, ಆ ಹೊಲ, ತೋಟ ಗದ್ದೆಗಳನ್ನು ಆವರಿಸಿರುವ ಆ ಬಯಲನ್ನು ಸುತ್ತಬೇಕಾದರೆ ಕಡೇ ಪಕ್ಷ ಮುಕ್ಕಾಲು ಗಂಟೆಗಳಾಗಬೇಕು. ಆ ಜಮೀನಿಗೆ ಹಳಬರಾದ ಮುದ್ದಪ್ಪನವರು ಸಿಂಚೀ ತೋಟದಲ್ಲೇ ಉಳಿದುಕೊಂಡರು. ಕುತೂಹಲಿಗಳಾದ ಈ ಇಬ್ಬರು ಹುಡುಗಿಯರೂ ಸ್ವೇಚ್ಛೆಯಾಗಿ ಅಲೆಯುವುದಕ್ಕೆ ಹೊರಟರು.

ಜೀತಗಾರ ಕರಿಯ, ಕಪಿಲೆಯಿಂದ ನೀರೆತ್ತುತ್ತಿದ್ದನು. ನೀರು ಒಂದು ದೊಡ್ಡ 'ಉದ್ದಿ' ಯಲ್ಲಿ ಹರಿದು ಬರುತ್ತಿತ್ತು. ಆ ನೀರಿನ ಜೊತೆಯಲ್ಲೇ ಇಬ್ಬರೂ ನಡೆಯುತ್ತ ಹೊರಟಿದ್ದರು. ಸೂರ್ಯನೂ ಮೇಲುಮೇಲಕ್ಕೆ ತೆವಳುತ್ತಿದ್ದನು. ಬಿಸಿಲಿಗಿಂತ ಮೋಡವೇ ತುಂಬಿಕೊಂಡಿತ್ತು. ಗಿಡಗಳಿಂದ ಇನ್ನೂ ತಂಗಾಳಿಯೇ ಬರುತ್ತಿತ್ತು. ಕಪಿಲೆಯಿಂದ ನೀರೆತ್ತುತ್ತಿದ್ದಾಗ ತಳಗಿನ 'ಪರಿ' ಯು ನೀರಿನೊಳಕ್ಕೆ ಮುಳುಗುವುದು ಮತ್ತು ಮೇಲೆ ಬಂದ ಪರಿಯು ನೀರು ಬಚ್ಚಲೊಳಕ್ಕೆ ಜಾರುವುದು. ಕರಿಯನು ಎತ್ತುಗಳನ್ನು ಅದ್ದರಿಸುವುದು, ಎತ್ತುಗಳು ಗಂಟೆಯ ಕತ್ತನ್ನಲುಗಿಸುವುದು, ಇದರಿಂದ ಉಂಟಾಗುವ ಎಲ್ಲ ತರಹದ ಶಬ್ದಗಳೂ ಆ ಪುಟ್ಟ ಹೆಂಗಸರಿಗೆ ಆಹ್ಲಾದಕರವಾಗಿತ್ತು. ತಮಗಿಷ್ಟಬಂದ ಮಾತುಗಳೆಲ್ಲವನ್ನೂ ಅವರಿಬ್ಬರ ಬಾಯಿಗಳೂ ಆಡಿಮುಗಿಸುತ್ತಿದ್ದುವು. ಇದ್ದಕ್ಕಿದ್ದ ಹಾಗೆಯೇ ಮಾತಿಗೆ ಮಾತು ಬೆರಸಿಕೊಂಡು

ನೀಲಮ್ಮನ ಗಂಡನು ಸತ್ತ ಸಮಾಚಾರದ ಕಡೆಗೆ ಅವರಿಬ್ಬರ ತಲೆಯೂ ಓಡಿತು. ಇವರಿಬ್ಬರೂ ಖಿನ್ನರಾಗಿ ಮಾತು ನಿಲ್ಲಿಸಿಬಿಟ್ಟರು. ಬಳಸಿಕೊಂಡು ಬರುತ್ತಿದ್ದ ನೀರು ಯಾವುದೋ ಒಂದು ಕಡೆ ಕಟ್ಟೆ ಕಿತ್ತುಕೊಂಡು ಹತ್ತಿರದ ದಾರಿಯಿಂದ ಪುನಃ ಅದೇ ಉದ್ದಿಯನ್ನೇ ಸೇರಿಕೊಂಡಿತು. ಇದು ನಾಗುವಿನ ಕಣ್ಣಿಗೆ ಬಿತ್ತು. ನಾಗು ಓಡಿಹೋಗಿ ಹತ್ತಿರಿದ್ದ ಮಣ್ಣು ಹೆಂಟೆಗಳನ್ನು ನೀರು ಕಿತ್ತಿದ್ದ ಕಟ್ಟೆಯಲ್ಲಿಟ್ಟು ಕಾಲಿನಿಂದ ತುಳಿದಳು. ಅದನ್ನು ನೀಲಮ್ಮ ನೋಡಿದಳು. ಅವಳ ಮನಸ್ಸಿಗೆ ಏನು ಬಂತೋ ಏನೋ?

"ನಾಗು!" ಎಂದಳು,

ನಾಗು "ಏನಕ್ಕಾ?" ಎಂದಳು.

ನೀಲಮ್ಮ "ನೋಡು, ಮನಸ್ಸು ಅನ್ನೋದು ನೀರಿನ ಹಂಗೆ! ಕವಲಾಗಿ ಒಡೆದುಹೋದ ಮಾತ್ರಕ್ಕೆ, ಸಂದರ್ಭ ಬಂದರೆ ಅದು ಹೋಗಿ ಆ ನೀರನ್ನೇ ಸೇರ್ಕಳ್ಬಹುದು" ಎಂದಳು.

ಇದರಲ್ಲಿ ಏನು ಅರ್ಥವನ್ನು ತುಂಬಿ ನೀಲಮ್ಮ ಹೇಳಿದಳೋ ನಾಗುವಿಗೆ ಅದು ತಿಳಿಯಲಿಲ್ಲ ಅಷ್ಟರೊಳಗೆ ನಾಗು ಏಕೋ ಅದೇ ಕಟ್ಟೆಯ ಮೇಲೆ ಕುಳಿತುಬಿಟ್ಟಿದ್ದಳು. ನೀಲಮ್ಮ ನಿಂತಿದ್ದಳು. ನಾಗು ತಲೆ ತಗ್ಗಿಸಿಕೊಂಡೇ ಒಂದು ಕೆಟ್ಟ ಗಿಡವನ್ನು ಕೀಳುತ್ತಾ,

"ಅದ್ರಲ್ಲೇನಕ್ಕಾ"? ಎಂದಳು.

"ಈಗ ನನ್ನದೂ ನಿನ್ನದೂ ಬೇರೆಬೇರೆ ವ್ಯೈಯ್ಯಿ, ಬೇರೆ ಬೇರೆ ಮನೆ. ನಾವಿಬ್ಬರೂ ಹೆಂಗಸಾದ್ದರಿಂದ, ನನ್ನೂರೇ ಬೇರೆ—ನಿನ್ನೂರೆ ಬೇರೆ—ಆದ್ರೂನೂ ಮನಸ್ಸು ಒಂದಾದರೆ ನನ್ನ ಕಷ್ಟ ನೋಡಿ ನಿನಗೆ ಕಣ್ಣೀರು ಬರಲ್ಲಿಲ್ಲವೇ ಅದಕ್ಕೇಳ್ದೆ!"

ನಾಗುವಿಗೆ ಈಗ ಅರ್ಥವಾಯಿತು. ನಿಂತಿದ್ದ ನೀಲಮ್ಮನನ್ನು ತಲೆಯೆತ್ತಿ ನೋಡಿದಳು. ಅವಳ ಮುಖ ತೀರ ಸಪ್ಪೆಯಾಗಿತ್ತು. ಆದರೆ........ಆದರೆ ಅವಳ ಮುಖದ ಹಿಂಬದಿಯಲ್ಲೇನು ಆ ಹೊಗೆ? ನಾಗುವಿಗೆ ಆಶ್ಚರ್ಯವಾಯಿತು. ತನ್ನ ಕಣ್ಣಿನ ದೃಷ್ಟಿಯನ್ನು ನೀಲಮ್ಮನ ಮುಖದ ನೇರಕ್ಕಿದ್ದ ಆ ಬೇಲಿಯ ಆಚಿನ ಹುಣಿಸೇಮರದ ಕೊಂಬೆಯ ಮೇಲೆ ಓಡಿಸಿದಳು. ಯಾರೋ ಅದರ ಮೇಲೆ ಕುಳಿತು ಬೀಡಿ ಸೇದುತ್ತಿದ್ದರು. ಯಾರು? ಇನ್ಯಾರು!—ಚಂದಣ್ಣ!

ಚಂದಣ್ಣನೇ! ಹೌದು! ಆದರೆ ಇದ್ಯಾಕಿಷ್ಟು ಕಂಗೆಟ್ಟು ಹೋಗಿದ್ದಾನೆ! ನಾಗುವಿಗೆ ಅವನ ರೂಪು ಘೋರವಾಗಿ ಕಂಡಿತು. ಚಂದಣ್ಣನೂ ನಾಗುವನ್ನು ನೋಡಿದನು. ನಾಗು ಎಂಥ ಸುಂದರಳು; ಈಗ ಎಷ್ಟು ತುಂಬಿಕೊಂಡು ಎಷ್ಟು ಉದ್ದವಾಗಿ ಬಿಟ್ಟಿದ್ದಾಳೆ! ಚಂದಣ್ಣನಿಗೆ ತನ್ನ ಸ್ಥಿತಿಯನ್ನು ಕುರಿತು ಅವನಿಗೇ ನಾಚಿಕೆಯಾಯಿತು. ಚಂದಣ್ಣನ ವಿಷಯವನ್ನು ಆಗಾಗ್ಗೆ ನೀಲಮ್ಮನಿಂದ ಕೇಳುತ್ತಿದ್ದ ನಾಗುವಿಗೆ ಚಂದುವಿನ ಸ್ಥಿತಿಯನ್ನು ನೋಡಿ ತುಂಬಾ ಕನಿಕರವುಂಟಾಯಿತು.

ನೀಲಮ್ಮ, ಇನ್ನೂ ಆ ಮರದ ಮೇಲಿನ ಚಂದಣ್ಣನನ್ನು ಗಮನಿಸಿರಲಿಲ್ಲ. ತಕ್ಷಣ ನಾಗುವು ದೃಷ್ಟಿಯನ್ನು ಬೇರೆಕಡೆಗೆ ತಿರುಗಿಸಿದಳು. ಇವರ ಮಾತೆಲ್ಲವನ್ನೂ ಕೇಳುತ್ತ ಕುಳಿತಿದ್ದ ಚಂದಣ್ಣನು, ಅಲುಗಿದರೆ ತನ್ನ ಅಕ್ಕನ ಗಮನ ಬೀಳಬಹುದೆಂದು ಹಾಗೆಯೇ ಅಡಗಿ ಕುಳಿತನು.

ನಾಗುವಿಗೆ ಈ ಮಾತಿಗವಕಾಶವಾಯಿತು. ನೀಲಮ್ಮನನ್ನು ಕುರಿತು, 'ಅಕ್ಕಾ ಆ ಮರಾ ನೋಡು!' ಎಂದು ಅವಳಿಗೆ ಬೇರೆ ಮರವನ್ನು ತೋರಿಸಿದಳು; ಈ ಮರದ ಮೇಲಿದ್ದ ಚಂದಣ್ಣನೂ ಆ ಮರವನ್ನು ನೋಡಿದನು. ಆ ಮರ ಗೋಣಿಮರ. ತುಂಬ ಕವಲೊಡೆದಿತ್ತು. ನಾಗು, "ನೀ ಹೇಳ್ದಂಗೇ ಅಕ್ಕ ಮನಸೇನೋ ನೀರನ್ಹಂಗೆ. ಆದರೆ ನ್ಯೆಯ್ಯಿ ಅನ್ನೋದು ಆ ಮರದ್ಹಂಗೆ; ಒಟ್ಗಿದ್ದು ಒಂದ್ಸರ್ತಿ ಕವಲೊಡೆದು ಬಿಡ್ತು ಅಂದರೆ ಪುನಃ ಕೊಂಬೆಗಳು ಸೇರ್ಕಳಕ್ಕಾಗದಿಲ್ಲ. ಆ ಕೊಂಬೆ ಆಸೆ ಇದಕ್ಕಿಲ್ಲ, ಈ ಕೊಂಬೆ ಆಸೆ ಅದಕ್ಕಿಲ್ಲ. ಇದರದೇ ಒಂದು ಸಂಸಾರ. ಅದರದೇ ಒಂದು ಸಂಸಾರ!" ಎಂದಳು.

ನೀಲಮ್ಮ ಹತ್ತಿರವಿದ್ದರೂ ನಾಗು ಬಹಳ ಪ್ರಯತ್ನಪಟ್ಟು ಕೊಂಚ ಎತ್ತರದ ದನಿಯಲ್ಲಿ ಆ ಮಾತನ್ನಾಡಿದಳು. ಆ ಮಾತನ್ನಾಡಿದುದು ನೀಲಮ್ಮನಿಗೋಸ್ಕರವಲ್ಲ, ಚಂದಣ್ಣನಿಗೋಸ್ಕರ ಎನ್ನುವುದು ನಾಗು, ಚಂದಣ್ಣರಿಗೇ ಗೊತ್ತು. ನೀಲಮ್ಮ ಅದನ್ನು ತನ್ನ ನಾಗುವಿನ ವಿಷಯವೇನೋ ಅಂದುಕೊಂಡು ಸುಮ್ಮನಾದಳು. ಚಂದಣ್ಣನಿಗೆ ನಾಗುವಾಡಿದ ಈ ಮಾತು, ಔಷಧಿಯಂತೆ ಕಹಿಯಾಗಿ, ಅವನ ಮನಸ್ಸನ್ನು ಹೊಕ್ಕಿತು. ಇನ್ನು ನಾಗುವಿಗೂ ತನಗೂ ಏನೂ ಸಂಬಂಧವಿಲ್ಲವೆಂಬ ಮನೋ ನಿರ್ಧಾರಕ್ಕೋಸ್ಕರ ನಾಗು ತನಗೆಂದು ಆಡಿದ ಮಾತಿದು, ಎಂದವನು ಬಹುಬೇಗ ತಿಳಿದುಕೊಂಡನು.

ಚಂದಣ್ಣನ ಮನೋರೋಗಕ್ಕೆ ನಾಗುವಿನ ಔಷಧಿ, ಹಿಡಿಯುವಂತೆ ತೋರಿತು. ಹುಡುಗಿಯರೂ ಅತ್ತಿತ್ತ ಸರಿದುಹೋದರು. ಚಂದಣ್ಣನೂ ಮೆಲ್ಲಗೆ ಮರದಿಂದ ಕೆಳಗಿಳಿದನು.

ಅಂದಿನ ಸೂರ್ಯ ಕೆಳಗಿಳಿದು ಚಂದ್ರನೆದ್ದು ಬಂದಮೇಲೆ ಅವನು ಕೆಳಗಿಳಿದು ಹೋಗುವವರೆಗೂ ಈ ಮಾತು, ನಾಗು-ಚಂದಣ್ಣರ ಮನಸ್ಸಿನಲ್ಲಿ ತಪ್ಪು-ಸರಿಯ ಲೆಕ್ಕಾಚಾರ ಹಾಕುತ್ತಿತ್ತು. ಅಂತೂ ನಾಗುವೇ ಚಂದಣ್ಣನನ್ನು ಬದುಕಿಸಿದಳು. ಇನ್ನು ಒಂದೆರಡು ತಿಂಗಳಿಗೆಲ್ಲಾ ಚಂದಣ್ಣನಿಗೆ, ಅಂಗಳದ ನಂಜಪ್ಪನ ಹುಡುಗಿ ಮಹದೇವಮ್ಮನನ್ನು ತಂದು ಮದುವೆ ನೆರವೇರಲು ನಿಶ್ಚಯವಾಯಿತು. ಮುಖ್ಯವಾಗಿ ಇದಕ್ಕೆ ಚಂದಣ್ಣನ ಒಪ್ಪಿಗೆ ಇತ್ತು.

ಇದರಿಂದ ನಾಗುವಿಗೆ ತುಂಬಾ ಸಂತೋಷವಾಯಿತು ಚಂದಣ್ಣ ತನ್ನಿಂದ ಕೆಟ್ಟುಹೋಗುತ್ತಿದ್ದನೆಂಬ ಒಂದು ಅಪವಾದದಿಂದ ಹೊರಗಾಗಿ ಅವಳು ನಿಶ್ಚಿಂತಳಾದಳು. ಚಂದಣ್ಣನ ಮದುವೆಯಲ್ಲಿ ಅವನ ತಾಯಿಯಾಗಿ ತಿರುಗಾಡಿ, ಅವನ ತಂಗಿಯಾಗಿ ಕುಣಿದಾಡಿ, ಅವನ ಮಗಳಂತೆ ಮುದ್ದಾಗಿ ನಡೆದುಕೊಳ್ಳಬೇಕೆಂದು ತೀರ್ಮಾನಿಸಿಕೊಂಡಳು. ಚಂದಣ್ಣನ ಮದುವೆಯಲ್ಲಿ ಅವಳಿಗಿದ್ದ ಸಂಭ್ರಮಕ್ಕೆ ಮತ್ತೂ ಒಂದು ಕಾರಣವಿತ್ತು. ಚಂದಣ್ಣನ ಮದುವೆಗೆ, ಕಪನಯ್ಯನವರು ರಾಜುವನ್ನೂ ಕಳಿಸಬಹುದೆಂಬ ಒಂದು ಊಹೆಯೇ ಅವಳಿಗೆ ಅತ್ಯಾನಂದವನ್ನು ಕೊಡುತ್ತಿತ್ತು. ಇನ್ನು ನಿಜವಾಗಿ ಅವನೇ ಪಲುಕೂರಿಗೆ ಬರುವುದಾದರೆ?

ನಾಗುವಿನಿಷ್ಟ ನೆರವೇರಿತು. ಚಾತಕ ಪಕ್ಷಿಯಂತೆ ಕಾಯುತ್ತಿದ್ದ ರಾಜುವು ಕಪನಯ್ಯನವರು ಕರಸಿದ್ದೇ ಸಾಕೆಂದು ಪಲುಕೂರಿಗೆ ಹೊರಟುಬಿಟ್ಟನು. ನೆಂಟರಿಷ್ಟರೆಲ್ಲ ನಗುವುದಿಲ್ಲವೇ! ಎಂಬ ಆಲೋಚನೆ ರಾಜುವಿಗೂ ಬಂತು. ಆದರೇನು ಅದೊಂದು ಕ್ಷುಲ್ಲಕ ಕಾರಣದಿಂದ ಪಲುಕೂರಿನ ಪ್ರಯಾಣ ನಿಲ್ಲಿಸುವುದೆ! ಇಂಥ ಒಂದು ಸುಸಂಧಿಯನ್ನು ಇಷ್ಟು ಸುಲಭವಾಗಿ ಬಿಟ್ಟುಕೊಡುವುದೆ? ರಾಜುವು ಮದುವೆಯ ಹಿಂದಿನ ದಿನವೇ ಬಂದಿಳಿದನು. ಅವನು ಬಂದಿಳಿದದ್ದು ಮದುವೆಯ ಮನೆಗೆ. ವಿಧಿಯಿಲ್ಲದೇ ಮಾಡಿದ ಕೆಲಸ ಅದು.

ಮುದ್ದಪ್ಪನವರಿಗೆ ಇದೆಲ್ಲ ಅರ್ಥವಾಗುವುದಿಲ್ಲವೆ? ಅದಕ್ಕೇ ತಮ್ಮ ಅಳಿಯನನ್ನು ಮನೆಗೇ ಆಮಂತ್ರಿಸಿದರು. ರಾಜುವು ತಮ್ಮ ಮಾವನವಮನೆಗೆ ಇನ್ನೊಬ್ಬರ ಮನೆಯ ನೆವದಿಂದ, ಕರಸಿಕೊಳ್ಳದೇ ಬರಬೇಕಾಯಿತು. ಬಂದಾಯಿತು. ಎರಡು ದಿವಸದೊಳಗೆ ರಾಜುವಿಗೆ ಸಾಕು ಸಾಕೆನ್ನಿಸಿತು. ತಾನೇಕೆ ಮೈಸೂರು ಬಿಟ್ಟೆ ಎನ್ನಿಸಿತು. ಮದುವೆ ಮನೆಗೆ ಹೋದರೆ ಜನವೆಷ್ಟಿದ್ದರೂ ಬೇಕಾದವರೊಬ್ಬರೂ ಮಾತಾಡುವಹಾಗಿರಲಿಲ್ಲ. ರಾಜುವಿನ ಕಣ್ಣಿನ ದಾಹಕ್ಕೆ ನೀರೆರೆಯುವವರು ರಾಜುವಿರುವ ಕಾರಣದಿಂದಲೇ ಅವನೆದುರು ಬರುವ ಹಾಗಿರಲಿಲ್ಲ. ಎರಡು ಮೂರು ದಿವಸಗಳಲ್ಲಿ ಒಂದೇ ಒಂದು ಬಾರಿಯೂ ರಾಜುವು ನಾಗುವನ್ನು ನೋಡಲು ಸಾಧ್ಯವಾಗಿರಲಿಲ್ಲ. ಆದರೂ ಈಗ ನಾಗು ಈ ರೂಮಿನಲ್ಲಿದ್ದಾಳೆ, ಈಗ ನಾಗು ಹಿಂದಲಟ್ಟೆ ಭಾವಿಗೆ ಬಿಂದಿಗೆ ಬಿಡುತ್ತಿದ್ದಾಳೆ, ಈಗ ನಾಗು ಅಡಿಗೆ ಮನೆಯಲ್ಲಿದ್ದಾಳೆ, ಈಗ ಮದುವೆ ಮನೆಗೆ ಹೋಗಿದ್ದಾಳೆ ಎನ್ನುವ ಸುಳಿವು ಮಾತ್ರ ರಾಜುವಿಗೆ ಸ್ಪಷ್ಟವಾಗಿತ್ತು. ಹಾಳು ಶಾಸ್ತ್ರವಂತೆ. ತಮ್ಮತಮ್ಮವರ ಮುಖ ತಾವು ನೋಡುವುದಕ್ಕೆ ಶಾಸ್ತ್ರ ಸೇರಿಬರಬೇಕಂತೆ.

ರಾಜುವಿಗೆ ತುಂಬಾ ಸಿಟ್ಟು ಬಂದಿತ್ತು. ಆದರದು ಶಾಸ್ತ್ರದ ಮೇಲೆ. ಮತ್ಯಾರ ಮೇಲೂ ಅವನು ಸಿಟ್ಟುಮಾಡಿಕೊಳ್ಳುವಹಾಗಿರಲಿಲ್ಲ. ಮಾವನವರನ್ನು ಕಂಡರೆ ಗೌರವ. ಮಾವನವರ ಅಕ್ಕನವರನ್ನು ಕಂಡರೆ ಭಕ್ತಿ. ನಾಗುವನ್ನು ಕಂಡರೆ ತುಂಬಾ ಇಷ್ಟ. ಇಷ್ಟಾದಮೇಲೆ ಕೋಪ ಯಾರ ಮೇಲೆ? ಆ ಅಸಹಾಯಕ ಸಂಪ್ರದಾಯದ ಮೇಲೆ.

ಆದರೆ ನಾಗುವಿಗೆ ಇಷ್ಟು ಬೇಜಾರಾಗಲಿಲ್ಲ. ಅವಳು ರಾಜುವನ್ನೊಂದೆರಡು ಬಾರಿ ನೋಡಿಯೇ ನೋಡಿದಳು. ಅವಳಿಗಾಗ ಅರ್ಥವಾಯಿತು, ಕಣ್ಣುಗಳ ಪುಣ್ಯವೆಂದರೇನು ಎಂಬುದು. ಅವಳು ಇದ್ದ ಆ 'ಘೋಷಾ' ದಲ್ಲೂ ಅವಕಾಶ ಮಾಡಿಕೊಂಡು ತನ್ನ ದೇವರನ್ನು ತಾನು ನೋಡಿಕೊಂಡಳು. ಪಾಪ, ಹೆಣ್ಣುಹುಡುಗರ 'ಚಾಲೋಕು' ಗಂಡಸರಿಗೆಲ್ಲಿ ನಾಗುವು ತನ್ನನ್ನು ನೋಡಿದಾಳೆ ಎಂಬುದೂ ಅವನಿಗೆ ತಿಳಿಯದು. ತಿಳಿದಿದ್ದರೆ ಮುಖದ ಮೇಲಿನದೊಂದು ಮುಡುವೆಯನ್ನು ಮರೆಮಾಡಿಕೊಳ್ಳುತ್ತಿದ್ದನು.

ಅಂತೂ ಇವರಿಬ್ಬರ ಅತೃಪ್ತಿಯ ನಡುವೆ ಚಂದಣ್ಣನ ಮದುವೆಯು ನಡೆದುಹೋಯಿತು. ಮಹದೇವಮ್ಮ ಚಂದಣ್ಣನ ಹೆಂಡತಿಯಾಗಿ ಹೋಗಿ

ದ್ದಳು. ರಾಜುವು ಇನ್ನು ಪಲುಕೂರಿನಲ್ಲಿ ನಿಲ್ಲುವ ಹಾಗಿಲ್ಲ. ಜೊತೆಯಲ್ಲಿ ರಜೆ ಬೇರೆ ಖರ್ಚಾಗಿಹೋಗಿದೆ. ನಾಗುವು ಅಳುವುದೊಂದು ಬಾಕಿ. ರಾಜು ಸಂಪೂರ್ಣವಾಗಿ ಬೇಜಾರಿನಿಂದ ಮೈಸೂರಿಗೆ ಹೊರಟುಹೋದನು. ನಾಗುವು ಬೆಳಗಿನ ಚಂದ್ರನಂತಾದಳು.

ಕಪನಯ್ಯನವರ ಮನಸ್ಸು ಒಂದು ಸ್ಥಿಮಿತಕ್ಕೆ ಬಂದಹಾಗಾಯಿತು. ತಮ್ಮ ಸೊಸೆಯ ಆಗಮನದಿಂದ ಅವರಿಗೆ ಕಳೆದುಹೋದ ಒಂದು ಕೈ ದೊರೆತಂತಾಯಿತು. ಇನ್ನೇನೂ ಅವರಿಗೆ ಭಯವಿಲ್ಲ. ಇನ್ನು ಅವರಿಗೆ ಸಾಯುವುದರಲ್ಲೂ ಒಂದು ತರಹ ಸುಖವುಂಟು. ಆದರೆ ಮುದ್ದಪ್ಪನವರ ಪಾಡು ಬೇಡ. ಅವರ ಮನಸ್ಸಿನಲ್ಲಿದ್ದ ಸಮಾಧಾನ ಕುಗ್ಗಿದಂತೆಲ್ಲ ಅವರ ಮೈಯಿನ ಕಸುವೂ ಕುಗ್ಗಲಾರಂಭಿಸಿತು. ಅವರ ಸಂಕಟವು ಒಳಗೇ ಅವರನ್ನು ಕೊರೆದು ತಿನ್ನಲಾರಂಭಿಸಿತು. ಅವರ ಜೀವದ ಕಣ್ಣು ನಾಗು ಅವರಿಂದ ದೂರವಾಗಬೇಕಾದ ದಿನವನ್ನು ನೆನಸಿಕೊಂಡಾಗಲೆಲ್ಲ ಅವರ ಹೃದಯ ತಳಮಳಗೊಳ್ಳುತ್ತಿತ್ತು. ನಾಗುವಿನ ಮುದ್ದಿನ ಮುಖವೇ ಅವರ ಚಂದ್ರ ಸೂರ್ಯರು. ಅವಳ ಓಡಾಟವೇ ಅವರ ಚೈತನ್ಯ. ಅವಳ ಮಾತೇ ಅವರ ಆಸ್ತಿ. ಅವಳ ವರ್ತನೆಯೇ ಅವರ ಹರ್ಷ. ಹೀಗೆ ಬೆಸೆದುಹೋಗಿದ್ದ ಮುದ್ದಪ್ಪ, ನಾಗು, ಅವರ ವ್ಯಕ್ತಿತ್ವಗಳು ಈಗ ಕಿತ್ತು ಬೇರೆಯಾಗಬೇಕಾದ್ದರಿಂದ ಆ ದಿನದ ನೆನವೇ ಇಬ್ಬರ ಜೀವವನ್ನೂ ಹಿಂಡುತ್ತಿತ್ತು. ಇನ್ನು ಆ ದಿವಸ ಏನಾಗಬಹುದು.

ನಾವು ಸೃಷ್ಟಿಸಿದ ಗಡಿಯಾರವೇ ನಮ್ಮ ಮನಸ್ಸಿನಂತೆ ನಡೆಯುವುದಿಲ್ಲ ಇನ್ನು ನಮ್ಮನ್ನು ಸೃಷ್ಟಿಸಿದ ಕಾಲವು ನಾವು ಹೇಳಿದಂತೆ ಕೇಳಬೇಕೆ? ದಿನಗಳು ವಾರಗಳಾದುವು; ವಾರಗಳು ತಿಂಗಳಾದುವು. ಅದೆಲ್ಲವೂ ರಾಜುವಿಗೆ ಸಮ್ಮತವೇ. ಮುದ್ದಪ್ಪನವರಿಗೆ ಅದು ಅಸಮ್ಮತ ನಾಗುವಿಗೆ ಆ ದಿನವೂ ಬರಬೇಕು. ಆದರೆ ಬರುವುದೂ ಬೇಡ. ನಾಗುವು ಮುದ್ದಪ್ಪನವರ ಮಗಳೆನಿಸಿದಾಗ 'ಅಯ್ಯೊ, ಅಪ್ಪಾಜೀ ನಾನು ಹೋದಮೇಲೆ ಎಷ್ಟು ಕುಗ್ಗೋದರೋ! ಎಷ್ಟು ಬೇಜಾರು ಪಟ್ಕಂಡರೋ' ಎನಿಸುವುದು. ನಾಗುವು ರಾಜುವಿನ ಹೆಂಡತಿಯೆನಿಸಿದಾಗ 'ಅಯ್ಯೋ ಪಾಪ, ಅವರು ನನ್ನೇ ಕಾಯ್ಕೊಂಡವ್ರೆ. ದಿನವೆಲ್ಲ ನನ್ನ ಯೋಚ್ನೇನೇ ಮಾಡ್ತಿರ್ತಾರೆ. ನನ್ನ ಕಂಡರೇನೇ ಅವರಿಗಾಸೆ. ಮೈಸೂರ್ನಲ್ಲಿ, ಪಡಬಾರದ ಕಷ್ಟ ಪಟ್ಕಂಡು, ನನ್ನೊತೇಲಿ ಇರೋ ದಿನಕ್ಕೋ

ಸ್ಕರ ಹಲ್ಲು ಕಚ್ಚಕಂಡವ್ರೆ! ' ಎನ್ನಿಸುತ್ತದೆ. ಎಲ್ಲ ಹೆಣ್ಣುಮಕ್ಕಳಿಗೂ ಈ ಸಂದಿಗ್ಧ ಸಮಯ ಅನಿವಾರ್ಯ. ನಾಗುವು ಈ ಎರಡು ಕಡೆಯ ಎಳೆತದಿಂದ ತಾರಾಡಿಹೋದಳು.

ಚಂದಣ್ಣನು ಅಂಗಳಕ್ಕೆ ತನ್ನ ನಾಲ್ಕನೇ ದಂಡಯಾತ್ರೆಗೆ ಮಾವನ ಮನೆಗೆ ಹೊರಟಿದ್ದನು. ಮಾವನ ಮನೆಯವರು ಅಳಿಯನನ್ನು ಹಾಗೆ ಐದು ಬಾರಿ ಕರೆದು ಸುಖಭೋಜನ ಮಾಡಿಸಿ ಕಪ್ಪ ಕಾಣಿಕೆ ಕೊಟ್ಟು ಕಳುಹಿಸ ಬೇಕು. ಇದು ಹಳ್ಳಿಯ ಸಂಪ್ರದಾಯ. ಆದರೆ ವಿದ್ಯಾಭ್ಯಾಸದಿಂದ ಗುಲಾಮ ಗಿರಿಗೆ ಬಿದ್ದಿದ್ದ ರಾಜುವಿಗೆ ಇದಕ್ಕೆ ' ಪುರುಸೊತ್ತು ' ಇರಲಿಲ್ಲ. ಆದರೆ ಚಂದಣ್ಣ ಪಕ್ಕಾ ರೈತ. ಅವನು ಈ ಮೂರು ತಿಂಗಳಿಗಾಗಲೇ ನಾಲ್ಕು ಸರ್ತಿ ಮಾವನ ಮನೆಗೆ ಹೋಗಿ ಬಂದಿದ್ದನು. ಈ ಮೂರು ತಿಂಗಳು ಕಳೆದು ರಾಜುವಿಗೆ ಹನ್ನೆ ರಡು ವರ್ಷವನ್ನು ಕಳೆದಹಾಗಾಯಿತು. ಮುಂದಿನ ತಿಂಗಳಿಗೆ ಮುದ್ದಪ್ಪನ ವರು ಹೇಳಿದ ವಾಯಿದೆ ಮುಗಿಯುತ್ತದೆ.

ಅದಕ್ಕೆ ಈಗಿನಿಂದಲೇ ಮುದ್ದಪ್ಪನವರ ಅಕ್ಕ ವಿಧಿಯಿಲ್ಲದೇ ಒತ್ತಾಯ ನಡಸುತ್ತಿದ್ದಾರೆ. ಮುದ್ದಪ್ಪನವರ ಕಷ್ಟ ಸುಖಗಳನ್ನು ಪ್ರಕೃತಿ ಕೇಳದು. ಅವರಕ್ಕನಿಗೂ ಅವರ ಕಷ್ಟವೇ. ಆದರೆ ಅವರೂ ಒಂದು ಹೆಣ್ಣು. ಅವರಿಗೆ ಹೆಣ್ಣಿನ ಜವಾಬ್ದಾರಿ ಸರಿಯಾಗಿ ಗೊತ್ತು. ಅತ್ತರೆ, ನಾಗುವು ಮನೆ ಯಲ್ಲೇ ಉಳಿದುಕೊಳ್ಳುವ ಹಾಗಿದ್ದರೆ ಸಾಯುವವರೆಗೆ ಅವರು ಅಳಲು ಸಿದ್ಧ ರಾಗಿದ್ದರು. ಆದರೆ ನಾಗು ಹುಟ್ಟಿರುವುದೇ ಬೇರೊಬ್ಬನ ಮನೆಗೋಸ್ಕರ. ಅದ ರಿಂದಲೇ ಇರಬೇಕು, ಜನ ಹೆಣ್ಣು ಹುಟ್ಟಿದರೆ ಸಂಕಟಪಡುವುದು. ಯಾರಿಗೂ ಯತ್ನವಿಲ್ಲ.

ಒಂದು ದಿನ ಸಾಯಂಕಾಲ ಮುದ್ದಪ್ಪನವರು ನೂರು ರೂಪಾಯಿನ ನೋಟುಗಳನ್ನು ಹಿಡಿದುಕೊಂಡು ಬಂದು, ಅಕ್ಕಿಯನ್ನು ಕೇರುತ್ತಿದ್ದ ತಮ್ಮ ಅಕ್ಕನ ಮುಂದಿಟ್ಟರು. ಅವು ಎಲ್ಲಿಂದ ಬಂತು, ಎನ್ನುವುದಕ್ಕಿಂತ ಅವು ಏತಕ್ಕೆ ಎನ್ನುವ ಪ್ರಶ್ನೆ ಮುಖ್ಯವಾಗಿತ್ತು. ಅದಕ್ಕೆ ಉತ್ತರವೂ ಸಿದ್ಧವಾಗಿತ್ತು.

" ಇನ್ನು ನನ್ನನ್ನ ಯಾತಕ್ಕೂ ಮಾತಾಡಿಸಬೇಡಿ ಅಕ್ಕ. ಅದೇನು ಮಾಡಬೇಕೋ ಏನು ಬಿಡಬೇಕೋ ಎಲ್ಲ ನಿಮ್ಮದೆ " ಎಂದರು ಮುದ್ದಪ್ಪ.

"ಹಾಗೆಂದರೆ! ನಾನು ನಿನ್ನ ಹಾಗೆ ಗಂಡಸೇನಯ್ಯ? ಮಾಡುವವನು ನೀನೆ" ಎಂದರು, ಅಕ್ಕ.

"ಅದಲ್ಲ ಅಕ್ಕ, ಇನ್ನು ನೀವು ಹೇಳಿದ ಹಾಗೆ ಕೇಳುತ್ತೇನೆ ಅಂದೆ ಅಷ್ಟೆ" ಎಂದರು ಮುದ್ದಪ್ಪ. ಅವರ ಕಣ್ಣುಗಳಲ್ಲಿ ನೀರಾಡುತ್ತಿತ್ತು. ಆ ಕಣ್ಣೀರಿಗಾಗಿ ಅವರಕ್ಕನ ಹೃದಯ ಮರುಗಿತು.

"ದುಃಖ ಮಾಡಿದರೇನು ಬಂತು ಮುದ್ದ?" ಎಂದು ಸಮಾಧಾನ ಮಾಡುವುದಕ್ಕೆ ಹೋದರು. ಅವರು ಆ ಮಾತನ್ನಾಡದಿದ್ದರೆ, ಹಾಗೆಯೇ ಸರಿಹೋಗುತ್ತಿತ್ತು. ಆದರೆ ಮುದ್ದಪ್ಪನವರ ಎಡಗಣ್ಣು ರೆಪ್ಪೆಯಿಂದ ಒಂದು ತೊಟ್ಟು ಕಂಬನಿ ಜಾರಿ ಬಿದ್ದುಬಿಟ್ಟಿತು. ಕಣ್ಣೀರನ್ನು ನೋಡಿದ ಹೆಣ್ಣು ತಾನೂ ಅಳತೊಡಗಿತು.

ಎದುರುಮನೆ ಬಸವಣ್ಣನು ಸೆಜ್ಜೆಗೆ ಒಸಗೆಯನ್ನು ತೆಗೆದುಕೊಂಡು ಹೋಗುವಂತೆಯೂ ಮುದ್ದಪ್ಪನವರು ಮೈಸೂರಿಗೆ ಹೋಗಿ ರಾಜುವನ್ನು ಆಹ್ವಾನಿಸಿ ಬರುವುದಾಗಿಯೂ ತೀರ್ಮಾನವಾಯಿತು. ದಿನವೂ ನಿಷ್ಕರ್ಷೆಯಾಯಿತು. ನಾಗವು ಒಂದು ತೊಟ್ಟಿನ ಹಾಗೆ. ಹೂವು ಹೋಗುವುದಲ್ಲಾ ಎಂಬ ಕಷ್ಟ! ಕಾಯಿ ಬರುವುದಲ್ಲ ಎನ್ನುವ ಸಂತೋಷ.

ಗುರುವಾರ ಬಂದೇ ಬಂತು. ಗಂಡು ಊರ ಬಾಗಿಲಿಗೂ ಬಂತು ಸೆಜ್ಜೆಯ ರಸಿಕರು ಕರಸಿಕೊಂಡಿದ್ದ ಸೂಳೆಯು ಗಂಡಿನ ಮುಂದೆ ಕುಣಿದು, ಹಾಡಿ, ಹುಬ್ಬು ಕುಣಿಸಿ, ಮನೆ ಮನೆಯ ಕಾಸು ಕೂಡಿಸುತ್ತಾ, ಅಣಕಿಸುತ್ತಾ ಮುದ್ದಪ್ಪನವರ ಮನೆ ಕಡೆಗೆ ಬರುತ್ತಿದ್ದಳು. ರಾಜು ತನ್ನ ಜೀವನದ ಮೊದಲನೇ ಬಾರಿ ಕುದುರೆ ಹತ್ತಿ ಬರುತ್ತಿದ್ದನು. ಮುಂದುಗಡೆಯ ಓಲಗದವರು ಅಬ್ಬರಿಸುತ್ತಾ ನಾಯಕಸಾನಿಯ ಹಿಮ್ಮೇಳದವರನ್ನು ಘಾಬರಿಪಡಿಸುತ್ತಾ, ಆಕೆಯ ಹೆಜ್ಜೆಯನ್ನು ತಪ್ಪಿಸುತ್ತಾ ಓಲಾಡುತ್ತಿದ್ದರು. ಊರ ಜನರಿಗೆಲ್ಲ ಅವಳ ಮುಖ ಕೇಂದ್ರವಾಗಿತ್ತು. ಹಿಂದೆ ಇದ್ದ ಗಂಡೂ, ಒಂದು ಬಾರಿ ಕಡೆಗೆ ಚಪ್ಪರವನ್ನು ಪ್ರವೇಶಿಸಿಯೇಬಿಟ್ಟಿತು.

ಶಾಸ್ತ್ರ ಸಂಬಂಧ ತೀರುವುದು, ರಾತ್ರಿ ಹನ್ನೊಂದು ಗಂಟೆಯಾಯಿತು. ಗಂಡು ಹೆಣ್ಣುಗಳ ಮುಖ ದರ್ಶನ ಮಾಡಿಸಿದರು. ಆರತಿಗೆ ಕೂಡಸಿದರು. ಹೆಣ್ಣು ಗಂಡುಗಳಿಗೆ ಬಹುಮಾನಗಳು ಬಂದುವು. ಸೂಳೆಗೆ ಸುಮಾರು ನೂರು

ರೂಪಾಯಿ ಸಿಕ್ಕಿತು. ಓಲಗದವರಿಗೂ ಅರುವತ್ತು ರೂಪಾಯಿ ಸೇರಿತ್ತು. ಎಲ್ಲರೂ ಊಟಕ್ಕೆದ್ದರು. ಎಲ್ಲರಿಗೂ ಎಲೆ ಅಡಕೆಯ ಜೊತೆಗೆ ತೃಪ್ತಿ, ನಿದ್ದೆಗಳು ಬಂದುವು. ನೆಂಟರಿಷ್ಟರೆಲ್ಲ ಊರವರ ಮನೆಗಳೂ, ಜಗಲಿಗಳನ್ನು ಸೇರಿ ನಿದ್ದೆ ಹೋದರು. ರಾಜುವಿನ ಸ್ನೇಹಿತರೂ ನಾಲ್ಕುಗಳಿಗೆ ರಾಜುವನ್ನು ರಂಗೇರಿಸಿ ಕಡೆಗೆ ಅವರವರ ಪಾಡಿಗೆ ಅವರವರಾದರು.

ರಾಜುವಿಗೆ 'ರೂಮಿ' ನಲ್ಲಿ ಏನೊಂದು ಕುತಂತ್ರವೂ ತೋರಲಿಲ್ಲ. ಏಕೆಂದರೆ ಅವನಿಗೆ ವ್ಯವಧಾನರಿದ್ದಿಲ್ಲ. ಲಕ್ಷಣವಾಗಿ ಹಾಸಿಗೆಯ ಮೇಲೆ ಹೋಗಿ ಕುಳಿತನು. ಸುತ್ತೆಲ್ಲ ನೋಡಿದನು. ಹಣ್ಣು ಹಂಪಲುಗಳೂ ತಿಂಡಿ ತಿನಸುಗಳೂ ಪೇರಿಸಿದ್ದುವು. ಒಂದು ಬೆಳ್ಳಿ ಚೆಂಬಿನಲ್ಲಿ ಹಾಲಿತ್ತು. ಅದರ ಮೇಲೊಂದು ಬೆಳ್ಳಿ ಲೋಟ ತಲೆಕೆಳಕಾಗಿ ಕುಳಿತಿತ್ತು. ಅವನ ದೃಷ್ಟಿ ಮೇಲೇರಿತು. ಸುತ್ತಲೂ ಪಲುಕೂರಿನ ಎಲ್ಲ ಮನೆಗಳ ಫೋಟೋಗಳು ಬಂದು ಸಾಲಾಗಿ ಮೆರೆಯುತ್ತಿದ್ದುವು ಒಂದು ರವಿವರ್ಮನ ಮೋಹಿನಿ. ಇನ್ನೊಂದು ಅವನದೇ ಶಂತನು, ಯೊಜಿನಗಂಧಿ. ಮತ್ತೊಂದು ರಾಮ-ಸೀತೆ, ಸುವರ್ಣ ಮೃಗ ಹೀಗೆ ಎಲ್ಲ, ಅಂದಾಜಿನಿಂದ ಕಟ್ಟಿದ್ದ ಪಟಗಳು. ಇಷ್ಟೆಲ್ಲಕ್ಕೂ ಒಂದೇ ಒಂದು ದೊಡ್ಡ ದೀಪ, ರೂಮಿನಲ್ಲೆಲ್ಲಾ ಅದರ ಆಧಿಪತ್ಯವೇ ಸದ್ಯ, ನಾಗುವು ಅವನನ್ನು ಹೆಚ್ಚು ಕಾಯಿಸಲಿಲ್ಲ. ಅಷ್ಟರಲ್ಲೇ ಬಾಗಿಲು ಓರೆಯಾಯಿತು. ನಾಗುವಿನ ಕೈಯಲ್ಲೂ ಒಂದು ತಟ್ಟೆ. ಅದು, ಅವಳ ನಿಲುವಿಗೊಂದು ಚೆಲುವಿಗೇ ಹೊರತು ಅದರಿಂದ ಅಥವಾ ಅದರಲ್ಲಿದ್ದ ಹಣ್ಣುಗಳಿಂದೇನೂ ಉಪಯೋಗವಿರಲಿಲ್ಲ. ಅವಳು ಬಾಗಿಲಿಂದಾಚೆಗೆ ಬಂದ ತಕ್ಷಣ ಇವರಿಗಿಂತ ಅಗತ್ಯವಿದ್ದವರ ಹಾಗೆ ಹೊರಗಿನವರೇ ಬಾಗಿಲು ಎಳೆದು ಹಾಕಿಕೊಂಡರು. ಹೊರಗಿನಿಂದ ಐದಾರು ಜನ ಹುಡುಗಿಯರು ಗಟ್ಟಿಯಾಗಿ ನಗುವುದನ್ನು ಕೇಳಿ ನಾಗುವಿನ ಕೆನ್ನೆ ಕೆಂಪಗಾಯಿತು. ಅವಳು ಕಿಂಕರ್ತವ್ಯಮೂಢಳಾಗಿ ನಿಂತುಬಿಟ್ಟಳು.

ಅವಳ ಬಲಗಾಲು ಸಡಿಲವಾಗಿ ಅವಳ ಭಾರವೆಲ್ಲ ಎಡಗಾಲಿನ ಮೇಲಿತ್ತು. ಹೊಸಾಹೊಸ ರೇಶ್ಮೆ ಕೇಸರಿ ಬಣ್ಣದ ಸೀರೆ ಕಾಲಿನ ಬೆರಳುಗಳನ್ನು ಬಿಟ್ಟು ಮಿಕ್ಕೆಲ್ಲವನ್ನೂ ಆವರಿಸಿತ್ತು. ಬಿಳಿಯ ಮೋಡದ ಮೇಲೆ ಕಾಮನ ಬಿಲ್ಲು ಬಿದ್ದಂತೆ ಅವಳ ಸೆರಗು ಅವಳ ಬಿಳಿಯ ಕುಪ್ಪಸದ ಮೇಲೆ

ಬಿದ್ದಿತ್ತು. ಏಕೋ ಅವಳು ಬೇಗ ಬೇಗ ಉಸಿರಾಡುತ್ತಿದ್ದಳು. ಅದರಿಂದ ಅವಳ ರವಿಕೆ, ಸೀರೆಯ ಮೇಲ್ಸೆರಗಿಗೆಲ್ಲ ಜೀವ ಬಂದಿತ್ತು. ಅವಳ ಕತ್ತನ್ನು ಸಾಕಷ್ಟು ಚಿನ್ನ ಆಶ್ರಯಿಸಿತ್ತು. ಅವಳ ಮೂಗಿನ ಸೀಮೇ ಕಮಲದ ನತ್ತು, ಉಸಿರಾಡಿದಾಗಲೆಲ್ಲ ಹೊಳೆಯುತ್ತಿತ್ತು. ತಗ್ಗಿಸಿದ ಮುಖದಲ್ಲೂ ಅವಳ ಸೀರೆಯಷ್ಟೆ ರಂಗಾದ ತುಟಿಗಳು ಕಾಣಸಿಗುತ್ತಿತ್ತು. ಕಿವಿಯ ಕೆನ್ನೆಸರಗಳು ಅವಳಿಗೆ ಒಪ್ಪುತ್ತಿದ್ದರೂ ರಾಜುವಿಗೆ ಹಿಡಿಸಲಿಲ್ಲ. ನಾಗು ತನ್ನ ಕೈಗೆಟುಕಿಸಿದ ತಕ್ಷಣವೇ ಅದನ್ನು ತೆಗೆಯೋಣವೆಂದುಕೊಂಡನು. ರಾಜುವು ಇಷ್ಟು ಕೂಲಂಕಷವಾಗಿ ತನ್ನ ಹೆಂಡತಿಯನ್ನು ನೋಡಿದ ಮೇಲೆ, ಅವಳ ತುರುಬಿನ ಸಂಪಿಗೆ ಹೂವು ರಾಜುವಿಗೆ ತನ್ನ ಸುಗಂಧವನ್ನರ್ಪಿಸಿತು.

ಅವನಿಗೇ ತಿಳಿಯದು. ಹೀಗೆ ನಾವಿಬ್ಬರೂ ಕಾಲುಘಂಟೆಯ ಕಾಲ ಇದ್ದೆವು ಎನ್ನುವುದು ರಾಜುವಿನ ಅರಿವಿಗೆ ಬಂದಿದ್ದರೆ ಅವನು ಖಂಡಿತ ನಾಗುವನ್ನು ಅಷ್ಟು ಹೊತ್ತು ಅವಳ ಕಾಲುಗಳ ಮೇಲೆ ಇರಗೊಡಿಸುತ್ತಿರಲಿಲ್ಲ. ಕಡೆಗೆ ಯಾರಿಗೂ ಅಲ್ಲದ ಒಂದು ಪ್ರಶ್ನೆಯನ್ನು ಗಟ್ಟಿಯಾಗಿ ಹಾಕಿದನು.

"ಇದಕ್ಕೆ ಇಷ್ಟು ದಿವಸವಾಯಿತೆ?"

ನಾಗುವು ಮಾತನಾಡುವುದು ಹೇಗೆ? ಅವಳಿಗೆ ಅದು ಅರ್ಥವೇ ಆಗಿಲ್ಲ. ಅವಳ ತಲೆಯಲ್ಲಿ ಬರೀ ನಾಚಿಕೆ, ಗಂಭೀರತೆ, ಹೆದರಿಕೆಗಳು ಗಲಾಟೆ ನಡಸಿವೆ. ಪುನಃ ರಾಜು ಮಾತನಾಡಿದನು.

"ಈ ಕೋಟನ್ನು ಆ ಮೊಳೆಗೆ ತಗುಲು ಹಾಕಿದರೆ ದೊಡ್ಡ ಉಪಕಾರವಾದಹಾಗಾಯಿತು" ಎಂದು ತನ್ನ ಕೋಟನ್ನು ಬಿಚ್ಚಿ ತನ್ನ ಕೈಲಿಟ್ಟುಕೊಂಡು ನಾಗುವಿನ ಕಡೆಗೆ ಆ ಕೈ ನೀಡಿದನು.

ನಾಗು, ರಾಜುವನ್ನು ಇದಕ್ಕೆ ಕಾಯಿಸುವ ಹಾಗಿಲ್ಲ. ತಾನು ಮಾತನಾಡದಿದ್ದರೆ ಇನ್ನೂ ನಾಲ್ಕು ಘಳಿಗೆ ಅದು ತಪ್ಪಿಸಿಕೊಳ್ಳುವುದಿಲ್ಲ. ಆದರೆ ಅವನು ಹೇಳಿದ ಕೆಲಸವನ್ನು ಮೌನವಾಗಿಯೇ ಏಕೆ ಮಾಡಬಾರದು. ಹಾಗೆ ಮಾಡದಿದ್ದರೆ ಅದು ತಪ್ಪು. ನಾಗು ಅವನ ಕಡೆಗೆ ಹೆಜ್ಜೆಯಿಟ್ಟಳು. ಕೋಟನ್ನು ತೆಗೆದುಕೊಂಡು ಮೊಳೆಗೆ ತಗುಲಿಹಾಕಾಯಿತು. ಮಾತು ಇನ್ನೂ ರಾಜುವಿನಡೆ.

"ನಮ್ಮ ಸಹಾಯಕ್ಕೆ ಆ ಒಂದು ಕಿಟಕಿಯಿಂದಲೂ ಗಾಳಿ ಬರಬಾರದೆ?" ಇದೂ ಮೌನವಾಗಿಯೇ ಮಾಡಬಹುದಾದ ಕೆಲಸ. ನಾಗು ಆ ಕಿಟಕಿಯ ಬಾಗಿಲು ತೆರೆದಳು. ರಾಜುವಿಗೆ ಹುಸಿ ಅಸಮಾಧಾನ. ಇನ್ನೂ ನಾಗುವು ಮಾತನಾಡದಿರುವುದು ಅವನಿಗೊಂದು ಬಗೆಯ ಪೆಚ್ಚು.

"ಯಾರನ್ನೂ ಮೆಚ್ಚದೇ ಇದ್ದ ನಾನು, ಪಲುಕೂರಿನ ಮೂಗಿಯ ಬಲೆಗೆ ಬೀಳಬೇಕಾಯಿತಲ್ಲ ದೇವರೆ!" ರಾಜುವೆಂದನು.

ಅಷ್ಟು ಬಿಕ್ಕಟ್ಟಿನಲ್ಲಿದ್ದ ನಾಗುವಿನ ಹೃದಯದಲ್ಲೂ ನಗೆಯು ಹುಟ್ಟಿತು ಅವಳ ತುಟಿ ನಗುವಿನ ಪಿರಿಕೆಯನ್ನು ಹಾಕಿತು. ರಾಜುವಿಗೆ ಅದು ತಿಳಿದು ಸಂತೋಷವಾಯಿತು ತನ್ನ ಹೆಂಡತಿ ತನ್ನನ್ನು ಮೆಚ್ಚಿದಳೆಂಬುದು ಅವನಿಗೂ ತಿಳಿದುಹೋಯಿತು.

"ಮಂಚವು ಹುಲಿಯೋ ಅಥವಾ ಅದರ ಮೇಲಿರೋ ನಾನು ಹುಲಿಯೋ ತಿಳಿಯಲಿಲ್ಲ. ಜಿಂಕೆ ದೂರದಲ್ಲೇ ತಿರುಗಾಡುತ್ತಿದೆಯಲ್ಲ. ಛೆ! ನಾನಿವತ್ತು ಇಲ್ಲಿಗೆ ಬರಲೇ ಬಾರದಾಗಿತ್ತು" ರಾಜು ಬಹಳ ಬುದ್ಧಿ ಉಪಯೋಗಿಸಿ ಆಡಿದ ಮಾತಿದು.

ನಾಗುವಿಗೆ ತನ್ನ ನಗೆಯು ತುಟಿ ಮೀರುವುದೆಂಬ ಭಯ ತೋರಿತು. ಅವಳು ಗೋಡೆಯ ಕಡೆಗೆ ತಿರುಗಿಕೊಂಡಳು. ರಾಜುವಿನ ಸಂಯಮ, ಮುಗಿಯಿತು.

"ನಾಗು................" ಎಂದನು.

ನಾಗು ಮಾತನಾಡಲಿಲ್ಲ. ಆದರೆ ಅವಳ ದೇಹಚಲನೆ ರಾಜುವಿನ ಕಡೆಗೆ ಓಗೊಟ್ಟಿತು ರಾಜುವಿಗೆ ತೃಪ್ತಿಯಾಗಲಿಲ್ಲ. ತಾನೇ ಪಲುಕೂರ ಆಕಾಶದಂಚಿನಿಂದ ಚಂದ್ರನೆದ್ದನು. ರಾಜುವು ಮಂಚದಿಂದ ನಿರ್ಧಾರಮಾಡಿ ಕೊಂಡು ಎದ್ದನು. ನಾಗು ರಾಜುರವರ ಪ್ರಪಂಚದಲ್ಲಿ ಚಂದ್ರನುದಯಿಸಿದ ಮೇಲೆ, ಸೀಮೆಣ್ಣೆಯ ತೂಗು ದೀಪದ ಹಂಗೇನು?

ಆದರೂ ಪಲುಕೂರಿನಲ್ಲಿ ಆ ರಾತ್ರಿ ಪೂರ್ಣ ನಿದ್ದೆಗೆಟ್ಟವರೆಂದರೆ ಮೂರೇ ಜನ. ರಾಜು, ನಾಗು, ಕಡೆಗೆ ಆ ನಾಯಕಸಾನಿ.

# ೮

ನಾಗುವಿನ ಮೊದಲನೆಯ ಮನೆಯು ನಾಗುವನ್ನು ಬೀಳ್ಕೊಟ್ಟಿತು. ನಾಗುವು ಗಾಡಿಯನ್ನು ಹತ್ತುವಾಗ ಎಷ್ಟು ಪ್ರಯತ್ನಪಟ್ಟರೂ ರಾಜುವಿನಿಂದ ಅವಳಿಗಿದ್ದ ದುಃಖವನ್ನು ಅಳಿಯಲು ಸಾಧ್ಯವಾಗಲಿಲ್ಲ. ಏಕೆಂದರೆ ಗಂಡನೇನೆಂದುಕೊಂಡಾನೋ ಎಂಬ ಭಯದಿಂದ ನಾಗುವು ಕೆಳದುಟಿಯನ್ನು ಭದ್ರವಾಗಿ ಕಚ್ಚಿಕೊಂಡು, ಕಣ್ಣಲ್ಲಾಡುತ್ತಿದ್ದ ನೀರನ್ನು ಹೆಚ್ಚಗೊಡದೆ ಗಾಡಿಯ ಮೇಲೆ ಹತ್ತಿ ಕುಳಿತಳು. ಅವಳ ಸಂಗಡಕ್ಕೆಂದು ಅದೇ ಹಿಂದಿನ ಗೌರಿಯನ್ನೇ ಕಳುಹಿಸಿದರು. ಅವಕಾಶವಿತ್ತಿದ್ದರೆ ಮುದ್ದಪ್ಪನವರೂ ಸೆಜ್ಜೆಗೆ ಹೊರಡುತ್ತಿದ್ದರು. ಆದರೆ ಬಿಗುಮಾನ ಬಿಡಲಿಲ್ಲ. ಅವರಕ್ಕ, ನಾಗುವನ್ನು ತಬ್ಬಿಕೊಂಡು ಅತ್ತರು. ಇಬ್ಬರ ಕಣ್ಣೀರೂ ಒಂದು ಹದಕ್ಕೆ ಬಂದಮೇಲೆಯೇ ಅಡಿಗೆಮನೆ ಬಿಟ್ಟು ಅವರಿಬ್ಬರೂ ಹೊರಕ್ಕೆ ಬಂದುದು. ರಾಜು ಈ ಮೂವರ ಕಷ್ಟಗಳಿಗಾಗಿ ಮರುಗುತ್ತಾ, ಮೌನವಾಗಿ ಮುಂದೆ ಕುಳಿತಿದ್ದನು. ಹಿರಿಯರ ಕಾಲಿಗೆಲ್ಲ ನಮಸ್ಕರಿಸಿ ಆಗಿತ್ತು. ಚಕ್ರಗಳು ಉರುಳಿದುವು. ಮುದ್ದಪ್ಪನವರು ಬಸವನ ಗುಡಿಯ ವರೆಗೂ ಗಾಡಿಯ ಹಿಂದೆ ಹೋಗಿ, ಕಡೆಯದಾಗಿ ತಮ್ಮ ಮನೆಯ ಮಗಳನ್ನು ನೋಡಿದರು. ನಾಳೆಯಿಂದ ಅವಳನ್ನು ಕಂಡರೂ, ಅವಳು ಆಗ ಸೆಜ್ಜೆಯ ಶಿವಪ್ಪನವರ ಸೊಸೆ.

ಮುದ್ದಪ್ಪನವರು ಹಿಂತಿರುಗಿ ಬಂದರು. ಕಪನಯ್ಯನವರು ಎಲ್ಲಿಗೋ ಹೋಗಿದ್ದರು. ಆದುದರಿಂದ ವಿಧಿಯಿಲ್ಲದೆ ಮನೆಗೇ ಹೊರಟರು. ದೂರದಿಂದಲೇ ಆ ಮನೆಯು ಹಾಳು ಹಾಳು ಸುರಿಯುತ್ತಿತ್ತು. ಬಣ್ಣವನ್ನು ಕಳೆದುಕೊಂಡ ಹೂವಿನಂತಿತ್ತು ಆ ಮನೆ. ಒಳಗೆ ಪ್ರವೇಶಿಸಿದರು. ಹಜಾರದಲ್ಲಿ ಅಕ್ಕನಿರಲಿಲ್ಲ. ‘ಅಕ್ಕ’ ಎಂದು ಕೂಗಿದರು. ಉತ್ತರ ಬರಲಿಲ್ಲ. ಅಡಿಗೆಮನೆಯ ಬಾಗಿಲಿಗೆ ಹೋಗಿ ಹಣಿಕಿ ನೋಡಿದರು. ಅಲ್ಲಿ ಅವರಕ್ಕ ಸ್ತಂಭೀಭೂತರಾಗಿ ಕುಳಿತಿದ್ದರು. ಅವರ ಕಣ್ಣೀರು ಖರ್ಚಾಗಿ ಹೋಗಿದ್ದರೂ ದುಃಖವಿನ್ನೂ ಇತ್ತು. ಅವರ ಶೂನ್ಯದೃಷ್ಟಿ ಮುದ್ದಪ್ಪನವರನ್ನು ಹೆದರಿಸಿತು.

“ಇದ್ಯಾಕಕ್ಕ ಹೀಗೆ ಕುಳಿತುಬಿಟ್ಟಿರಿ?”

“ಓಡಾಡುವವರನ್ನು ಕಳಕೊಂಡಾಯ್ತಲ್ಲ ಮುದ್ದ. ಇನ್ನೂ ನಾವಿದ್ದರೂ ಎಷ್ಟು ದಿನ ಓಡಾಡೋಣ; ನಾನಂತೂ ಕುಳಿತುಕೊಂಡಾಯಿತು.”

"ಅಕ್ಕ, ದೊಡ್ಡವರು ನೀವೇ ಹೀಗೆ ಹೆದರಿಸಿದರೆ ನಾನೇನ್ಮಾಡಲಕ್ಕ? ಏಳಿ. ಹೆಣ್ಣುಮಕ್ಕಳ ಶೋಭನ ಮಾಡಿದ ಹಿರಿಯರಿಗೆಲ್ಲ ಶಾಶ್ವತ ಈ ದುಃಖ."

"ಅದೊಂದಕ್ಕೇ ಅಲ್ಲಪ್ಪ; ಆ ಹಾಳು ಪುಟ್ಟನಂಜಿಯಾದರೂ ಉಳಿದಿದ್ದರೆ ಏನೋ ಒಂದು ತರ ಸರಿಯಾಗಿರ್ತಿತ್ತು. ನನ್ನಪ್ಪನ ಮನೆ ನಾನೇ ತೊಳದಂತಾಯ್ತಲ್ಲ ಅನ್ನೋ ಯೋಚ್ನೆ ಒಂದೇ ಮುದ್ದ."

"ಸಾಯಿಸೋರು ಯಾರು, ಬದುಕ್ಸೋರ್ಯಾರು. ಏಳಿ ಅಕ್ಕ. ನಮ್ಮ ನಮ್ಮ ಜೀವ ನಮ್ಮ ಕೈಲಿ. ಏಳಿ. ಒಂದಿಷ್ಟು ಒಲೆ ಗಿಲೆ ಹತ್ತಿಸಿ."

"ಅಯ್ಯೋ! ನನ್ನ ನಾಗಮಣಿ ಕಳಿಸಿಬುಟ್ಟು ನಾನು ಅನ್ನ ಮಾಡಲೇ? ನಾನಿವತ್ತು ಒಲೆಯ ಮೇಲೆ ಎಸರೆತ್ತಲ್ಲ."

"ನಾಗೂ, ನಾಗೂ, ನಾಗು. ನಮ್ಮಿಬ್ಬರನ್ನೂ ಮುಗಿಸಿ ಬಿಟ್ಯಲ್ಲೇ ತಾಯಿ!"

ಅಕ್ಕ ತಮ್ಮಂದಿರಿಬ್ಬರೂ ದುಃಖಿಸಿ ಅತ್ತರು. ಕಡೆಗೂ ಅವರು ಮನೆಯಲ್ಲಿ ಒಲೆ ಹಚ್ಚಲಿಲ್ಲ. ಹಾಗೇ ಮಲಗಿಕೊಂಡರು. ಅತ್ತ ನಾಗುವು ಸೆಜ್ಜೆಯನ್ನು ಸೇರಿ, ಅವಳು ಹಾಸಿಗೆ ಸೇರುವ ವರೆಗೂ ಇವರಿಗೆ ನಿದ್ದೆ ಹತ್ತಲಿಲ್ಲ.

ಮಾರನೇ ದಿನವೂ ಸೆಜ್ಜೆಯಲ್ಲಿ ನಾಗು ಪೆಚ್ಚು. ನಗುವಿನ ಪ್ರಸಂಗಗಳು ಬಂದಾಗ ಅವಳು ನಗುವುದಕ್ಕೆ ಪಟ್ಟ ಪ್ರಯತ್ನ ಅಷ್ಟಿಷ್ಟಲ್ಲ ರಾಜುವಿಗೆ ಅದು ಅರ್ಥವಾಗಿದೆ. ಅವನಿಗೆ ನಾಗುವನ್ನು ತೊಂದರೆಪಡಿಸುವ ಇಷ್ಟವಿಲ್ಲ. ಅವನೂ ಅರ್ಥ ಮಾಡಿಕೊಂಡಿದ್ದನು. ಆದರೂ ಅವನಿಗೆ 'ಇವೆಲ್ಲ ನಾಳೆ ನಾಳಿದ್ದಿಗೆ ಹಳೆಯದಾಗುತ್ತದೆ, ಅದರ ಮಾರನೇ ದಿನವೇ ಹೊಸ ಪ್ರಪಂಚದ ರೇವು ಸಿಕ್ಕುತ್ತದೆ' ಎಂಬ ಆಶಾಭಾವನೆ ಮಾತ್ರ, ಮೋಡದ ಆಕಾಶದಿಂದ ಆಗಾಗ್ಗೆ ಹೊಳೆಯುವ ಬಿಸಿಲಿನಂತೆ ಬೆಳಗುತ್ತಿತ್ತು.

ಅಂದಿನ ರಾತ್ರಿ ನಾಗುವಿಗೆ ಕೊಂಚ ಜ್ವರ ಬಂದಂತಿತ್ತು. ಅವಳು ಕೊಟಡಿಗೆ ಬರುವ ರೀತಿಯಲ್ಲೇ ರಾಜುವಿಗದು ತಿಳಿಯಿತು ಬಂದ ಕೂಡಲೇ ನಾಗುವು ರಾಜುವಿಗೆ ಬೇಸರವಾಗದಂತೆ, ಒಂದು ನಗೆಯನ್ನು ತನ್ನ ಬಿಸಿ ಮುಖದಲ್ಲೇ ಚಿಮ್ಮಿದಳು. ರಾಜುವು ಬಲ ತೋಳನ್ನು ತನ್ನ ತಲೆದಿಂಬು ಮಾಡಿ ಹಾಸಿಗೆಯಲ್ಲಿ ಮಲಗಿ ದೀಪವನ್ನೇ ನೋಡುತ್ತಿದ್ದನು. ನಾಗುವನ್ನು ಕಂಡು ಕೊಂಚ

ಜಾಗ ಬಿಟ್ಟುಕೊಟ್ಟನು. ನಾಗು ಬಂದು, ತನ್ನ ಎರಡು ಕಾಲನ್ನೂ ತನ್ನ ಬಲಗಡೆಗೇ ಬಿಟ್ಟು ಆ ಹಾಸಿಗೆಯ ಮೇಲೆ ಕುಳಿತಳು. ರಾಜು,

" ಕಡೆಗೂ ಎಲೆ, ತರಿಸಿದರೇನು ? " ಎಂದನು.

ನಾಗು, " ಇದೊ. ಅತ್ತೆ ಅಡಕೆ ಬೇರೆ ಪಸಂದಾಗಿ ಕತ್ತರಿಸಿ ಕೊಬ್ಬರಿ ಲವಂಗ ಬೆರಸಿ ನನಗೆಂದೇ ಒಂದು ಡಬ್ಬ ಕೊಟ್ಟಿದ್ದಾರೆ " ಎಂದಳು.

" ಡಬ್ಬ ಎಂದರೆ ! ಆ ಎತ್ತಿಗೆ ಹುರುಳಿ ಕೊಡುವ ಡಬ್ಬದಲ್ಲೇ ! "

" ಥೂ ! ನೋಡಿದಿರಾ ! ಭರಣಿ ಅನ್ನೋಕ್ಕೆ ಬೇಗ ಬರಲಿಲ್ಲ. ಆ ಕ್ಷಣವೇ ಹುಡುಗಾಟ. ಹೋಕ್ಕಳ್ಳಿ ತಗಳಿ " ಎಂದು ರಾಜುವಿಗೆ ನಾಲ್ಕೆಲೆಗಾಗುವಷ್ಟು ಅಡಕೆಯನ್ನು ಅವನ ಅಂಗೈಗೆ ಹಾಕಿದಳು.

" ನಾನೂ ನಿಮ್ಮ ಜಾತಿಯವನೇ ಕಣೆ. ಅಷ್ಟು ಯಾಕೆ ಎತ್ತರದಿಂದ ಆ ಅಡಕೆ ಹಾಕ್ತೀಯೆ. ನನ್ನ ಮುಟ್ಟಿಸ್ಕೋಬಾರ್ದಾ ? "

" ಊ ಹೋಗೀ ! ಮಾತು ಮಾತಿಗೂ ಮಾತ್ನಲ್ಲೇ ಛಡೀ ಬಿಸಿ ತಟ್ಟಿಸ್ತೀರಿ " ನಾಗು ಮುನಿಸಿಕೊಂಡಳು. ಆದರೂ ಅವಳ ಕೈ ಒಂದು ವೀಳೇದೆಲೆಯನ್ನು ಮಡಿಸಿ ಅದನ್ನು ರಾಜುವಿಗೆ ಕೊಡಹೋಯಿತು. ರಾಜುವು ಆ ಕೈಯನ್ನೇ ತನ್ನ ಬಾಯಿಯತನಕ ಎಳೆದು ಅದರಲ್ಲಿದ್ದ ಎಲೆಯ ಸುರುಳಿಯನ್ನು ಕಚ್ಚಿಕೊಂಡನು. ಆದರೆ ಅವನ ಕೈಗೆ ನಾಗುವಿನ ಕೈಯು ಬಿಸಿ ತಟ್ಟಿತು.ತಕ್ಷಣ ರಾಜು ಎದ್ದು ಕುಳಿತನು.

" ನಾಗು, ಇದೇನು ನಿನ್ನ ಮೈ ಇಷ್ಟು ಬಿಸಿ ! "

" ಮಧ್ಯಾಹ್ನದಿಂದಲೂ ಹಂಗೇ ಅದೆ "

" ಯಾರಿಗೂ ಹೇಳಲಿಲ್ಲವಾ ? "

" ಸರಿಸರಿ, ಇದನ್ನೂ ಹೇಳ್ಬೇಕಾ ! "

" ಹೇಳ್ಬೇಡ. ಬರೋ ಅಪಖ್ಯಾತೀನೆಲ್ಲ ನಮ್ಮ ತಲೇಮೇಲೆ ಹೊರಿಸಿ ಆಮೇಲೆ ನಗ್ತಾ ನಿಂತ್ಕೊ. ಹುಚ್ಚು ಹುಡುಗಿ, ಅಮ್ಮನ ಜೊತೇಲಿ ಹೇಳ್ಬಾರ್ದಾಗಿತ್ತೇನೆ "

" ಊ್ಞ ! ನನ್ನ ಮೈ ಬಿಸಿಯಾಗದೆ ಅಂತ ನಾನಂದುಬುಟ್ರೆ ಅವ್ರೇ ಎಲ್ಲ ಕೆಲಸಕ್ಕೂ ಕೈ ಹಚ್ಕೊಂಡು ಕುಂತ್ಗತ್ತಾರೆ. ನನ್ಯಾಕೆ ಅವ್ರು ಮನೇ

ಸೇರಿಸ್ಕಂಡಿರೋದು? ಮೈ ಬಿಸಿಯಾದಾಗಲೆಲ್ಲ ಮಲಗಿಸಿ ತಟ್ಟಿ ಜೋಗಳಾ ಹಾಡಕ್ಕೇನೊ?"

"ಇಲ್ಲಇಲ್ಲ. ಚಾಕರೀಗೆ ನಿನ್ನಾ ನಾವು ಕರಕೊಂಡು ಬಂದಿರೋದು. ಏನು ಮಾತಾಡ್ತಾಳೋ. ಅಯ್ಯೊ ಪೆಚ್ಚಿ, ನೀನೇ ಯಜಮಾನಿ ಕಣೆ ನಾಳೆ. ನೀನು ಜ್ವರ ಬಂದು ಮಲಗಿಬಿಟ್ರೆ ನಮ್ಮಂಥ ಆಶ್ರಿತರನ್ನೆಲ್ಲಾ ಯಾರೇ ನೋಡೋರು."

"ಓಹೋ ಹೊ ಹೊ! ಎಲ್ಲ ಬೂಟಾಟಿಕೆ"

ಈ ಮಾತಿನ ಮಧ್ಯದಲ್ಲೇ ನಾಗುವು ರಾಜುವಿನ ಒತ್ತಾಯದಿಂದ ಹಾಸಿಗೆ ಮೇಲೆ ಮಲಗಿಬಿಟ್ಟಿದ್ದಳು. ಅವಳ ವಿಶಾಲವಾದ ಹಣೆಯ ತುಂಬಾ ರಾಜುವು ತನ್ನ ಅಂಗೈಯನ್ನು ಇಟ್ಟುಕೊಂಡಿದ್ದನು. ನಾಗುವಿಗೆ ಅದು ತುಂಬಾ ಸೌಖ್ಯವನ್ನು ಕೊಟ್ಟಿತು. ತನಗೆ ದೇವರಂಥ ಗಂಡ ದೊರೆತದ್ದಕ್ಕಾಗಿ ಅವಳಿಗೆ ತುಂಬಾ ಆನಂದವಾಯಿತು. ಅವಳ ಹೃದಯ ರಾಜುವಿಗಾಗಿ ತುಂಬಿಬಂದು ಕಣ್ಣಂಚಿನಲ್ಲೊಂದು ಸಂತೋಷದ ಹನಿಕೂಡಿತು. ಅದನ್ನು ಕಂಡ ರಾಜು,

"ಆ........ಇದ್ಯಾಕೆ ನಾಗು ಅಳು!" ಎಂದನು.

ಅಳುವಲ್ಲ, ಸಂತೋಷದ ಪರಮಾವಧಿ ಎಂಬುದನ್ನು ಹೇಳುವುದಕ್ಕೂ ನಾಗುವಿನ ಗಂಟಲು ಅವಕಾಶ ಕೊಡಲಿಲ್ಲ. ಪುನಃ ರಾಜುವೇ,

"ಪಲುಕೂರು ನೆನಸಿಕೊಂಡ್ಯಾ ನಾಗು!" ಎಂದನು.

ನಾಗು ಅಲ್ಲವೆಂದು ತನ್ನ ತಲೆಯನ್ನು ಥರಥರನೆ ಅಲುಗಿಸಿ ಹೇಳಿದಳು. ಆ ಕಣ್ಣಂಚಿನ ಹನಿ ಜಾರಿತು. ರಾಜುವು ಅವಳ ಕಣ್ಣೀರು ತೊಡೆದನು.

"ನಾಗು, ನಿನ್ನನ್ನ ನಾವು ಖರೀದಿಗೆ ತೆಗೆದುಕೊಂಡಿಲ್ಲತಾನೆ. ನಿನ್ನ ಅಪ್ಪನ ಮನೆ ಬೇರೆ, ಈ ಮನೆ ಬೇರೆ, ನಾಳೆ ಹೋಗುವ ಮೈಸೂರು ಮನೆ ಬೇರೆ ಎಂದು ನೀನು ಖಂಡಿತ ತಿಳಿಯುವುದಿಲ್ಲ, ಅದು ನನಗೆ ಗೊತ್ತು. ನಾವೆಲ್ಲ ನಿನ್ನವರೇ ನಾಗು. ನಿನ್ನ ಕಷ್ಟ ಪಡಿಸಿದರೆ ನಮಗೇ ಶಾನೆ ಕೆಡಕು. ಅಳ ಬಾರದು. ಮನುಷ್ಯರೂ ಅಂದಮೇಲೆ ಎಲ್ಲರಿಗೂ ಒಂದೊಂದು ಥರಾ ಸುಖ ಒಂದೊಂದು ಥರಾ ಕಷ್ಟ ಇರುತ್ತೆ. ಇನ್ಮೇಲೆ ನನ್ನೆದುರಿಗೆ ನೀನು ಅಳಲೂ ಬಾರದು. ನಿನ್ನಾ ನಾನು ಅಳಸಲೂ ಬಾರದು, ಅನ್ನೋದನ್ನ ನಾವಿಬ್ಬರೂ ಗಟ್ಟಿ ಮಾಡ್ಕೊಳ್ಳೋಣ. ಆ್ಞ?"

ನಾಗುವಿಗೆ ಕಕ್ಕಾಬಿಕ್ಕಿಯಾಯಿತು. ರಾಜು ಹೇಳಿದುದನ್ನೆಲ್ಲಾ, ತನಗೆ ಹೇಳುವುದಕ್ಕೆ ಬರದಿದ್ದರೂ ನಾಗುವು ತಿಳಿದುಕೊಂಡಂತೂ ಇದ್ದಳು. ರಾಜುವಿನ ಈ ಮಾತು ಕೇಳಿ ಅವನು ತನ್ನನ್ನು ತಪ್ಪಾಗಿ ತಿಳಿದುಕೊಂಡದ್ದಕ್ಕೆ ತುಂಬಾ ದುಃಖವಾಯಿತು.

"ಇಲ್ಲ ನಾನದಕ್ಕಲ್ಲ........ಖಂಡಿತ ಅತ್ತದ್ದು....ಅದಕ್ಕಲ್ಲ....ಸಂತೋಷಕ್ಕೆ" ಎಂದು ನಾಗು ದೊಡ್ಡದಾಗಿ ಅತ್ತುಬಿಟ್ಟಳು. ರಾಜುವು ಅವಳ ಬೆನ್ನು ಸವರಿ ಸಮಾಧಾನಮಾಡಿ ಅವಳು ನಿದ್ದೆಹೋಗುವವರೆಗೂ ಅವಳನ್ನೇ ನೋಡುತ್ತಾ ಮಲಗಿದನು.

ಮಾರನೇ ದಿನವೇ ನಾಗುವು ಗೆಲವಾದಳು. ಎದೆತುಂಬಾ ನಗುವುದನ್ನು ರೂಢಿಮಾಡಿಕೊಂಡಳು. ಅವಳ ಜೀವನದಲ್ಲಿ ಮತ್ತಷ್ಟು ಹುರುಪು ಕಂಡಿತು. ರಾಜುವು ಸುಖಿಯಾದನು. ಇನ್ನು ಅವನಿಗೆ ಬೇಕಾದುದೊಂದೇ. ಯಾವ ಪಟ್ಟಣಿಗರಿಗೂ ಯಾವ ರೀತಿಯಲ್ಲೂ ಕಡಮೆ ಇಲ್ಲದ ತನ್ನ ನಾಗುವನ್ನು ಮೈಸೂರಿನಲ್ಲಿಟ್ಟು ಸಂತೋಷಪಡಿಸಬೇಕೆನ್ನುವುದೊಂದೇ ಅವನ ಸದ್ಯದ ದೊಡ್ಡ ಆಸೆ. ಅದಕ್ಕಾಗಿಯೇ ಅವನು ತಮ್ಮ ತಂದೆಗೆ ರಜ ತೀರಿಹೋಯಿತೆಂದು ಹೆದರಿಸುತ್ತಿದ್ದುದು.

ಹತ್ತಾರು ದಿನಗಳನ್ನು ನಾಗು, ರಾಜು ಇಬ್ಬರೂ ಸೆಜ್ಜೆಯಲ್ಲಿಯೇ ಕಳೆದರು. ರಾಜುವಿನ ತಾಯಿ ಏನೂ ಅರಿಯದ ನಾಗುವನ್ನು ಒಂದು ಸಂಸಾರ ನಿರ್ವಹಣೆಗೋಸ್ಕರ, ಅದೂ ಮೈಸೂರಿನಂತಹ ಅಪರಿಚಿತ ನಗರಕ್ಕೆ ಕಳುಹಿಸುವುದಕ್ಕೆ ಹಿಂದು ಮುಂದು ನೋಡುತ್ತಿದ್ದರು. ನಾಗುವಿಗೂ ಆ ವಿಷಯದಲ್ಲಿ ಕೊಂಚ ದಿಗಿಲಾಗಿದ್ದರೂ ಅವಳು ಮನಸ್ಸನ್ನು ಗಟ್ಟಿಮಾಡಿಕೊಂಡಿದ್ದಳು. ಶಿವಪ್ಪನವರೂ ಈ ವಿಚಾರಕ್ಕೆ ಕೊಂಚ ಆಲೋಚನೆಯನ್ನೇ ಮಾಡಿದ್ದರು. ರಾಜು ತನ್ನ ಹಟ ಬಿಟ್ಟಾನೆ. ನಾಗುವಿಗೆ ತಾನು ಎಳ್ಳಷ್ಟೂ ಕಷ್ಟ ಕೊಡುವುದಿಲ್ಲವೆಂದು ಅವನ ನಂಬಿಕೆ. ಆದರೂ ಹಿಂದಿಂದೆ, ಅಷ್ಟು ಸುಲಭವಾಗಿ ನಾಗುವನ್ನು ಮೈಸೂರಿಗೆ ಕಳುಹಿಸಿಬಿಡುವುದು ಸಾಧ್ಯವಾಗಿಸಲಿಲ್ಲ. ಅದಕ್ಕೆ ಶಿವಪ್ಪನವರೇ ಒಂದು ದಿನ ರಾಜುವಿನಲ್ಲಿ ತರ್ಕ ಹೂಡಿದರು.

"ಏನೂ ಕಾಣದ ಆ ಹೆಣ್ಣನ್ನು ಅಲ್ಲಿಗೆ ಕರೆದುಕೊಂಡು ಹೋಗಿ ಏನು ಮಾಡಬೇಕೂ ಅಂತ ಇದೀಯೊ?"

"ಒಳ್ಳೆಯ ತಮಾಷೆಯಪ್ಪ! ಹಳ್ಳಿಗಳಿಂದ ಸಂಸಾರಗಳು ಹೋಗದೇ ಮೈಸೂರು ಅಷ್ಟು ದೊಡ್ಡದಾಯಿತೇನಣ್ಣ?"—ರಾಜುವಿನ ಸವಾಲು.

"ನೀ ಬಿಡು, ಮಾತಾಡೋದು ಕಲ್ತ್ಕೊಂಡದ್ದೊಂದೇ ಲಾಭ, ನೀನು ಮೈಸೂರಿಗೆ ಹೋದದದ್ದಕ್ಕೆ. ಈಗ ನೀವಿಬ್ಬರೂ ಹೊರಡ್ಲೇಬೇಕೂ ಅಂತ ನಿಷ್ಕರ್ಷೆಮಾಡಿಬಿಟ್ಟದೀರೇನು?"

"ನಿಷ್ಕರ್ಷೆ ಏನಣ್ಣ; ಎಲ್ಲ ನಿಮ್ಮ ಸಂತೋಷ."

"ಲೋ ರಾಜ! ನಾನ್ಹೇಳಿದ ಹಾಗೆ ಕೇಳುತ್ತೀಯ?"

"...............ಹ್ಞೂ"

"ನೀನು ಆ ಹಾಳು ಚಾಕರೀ ಬಿಟ್ಟು, ಸ್ವಸ್ಥವಾಗಿ ಊರಿಗೆ ಬಂದ್ಬಿಡು ಮತ್ತೆ!"

"ನೋಡಿದಿರಾ! ಮಾತು ಮಾತಿಗೂ ನೀವಿದೊಂದು ಹೇಳುತ್ತಲೇ ಇದೀರಿ. ಸೋಮು ಕೈಲಾಗದ ಕೆಲಸ ಇಲ್ಲೇನಿದೇಣ್ಣ? ನಾನು ಇಲ್ಲಿಗೆ ಬಂದು ನಮ್ಮನೆ ಸೋಮಾರಿಯಾಗಿ ಬಿದ್ದಿದ್ರೆಯಾವ ದೇವರಿಗೆ ಪ್ರೀತಿ ಹೇಳಿ!"

"ಈಗ ನೀನು ಅಲ್ಲಿ ಕಡಿದು ಗುಡ್ಡೆಹಾಕಿ ಊರಿಗೆ ಸಾಗಿಸ್ತಾ ಇರೋದು ತಾನೆ ಏನು ಹೇಳು! ನಿನ್ನ ಅನ್ನ ನಿನ್ನ ಬಟ್ಟೆ ಕೊಡಲಾರದೇ ನಿನ್ನನ್ನ ನಾವಲ್ಲಿಗೆ ಅಟ್ಟದ್ದೇವೆಯೆ?"

"ಏನೋಣ್ಣ, ನಾನು ಹೇಳೋದು ನಿಮಗೆ ಸರಿಬೀಳೊದೇ ಇಲ್ಲ ಅಂಥಾ ಗಾಯ್ತು. ಹಾಗನ್ಬಿಡಬಾರದೆ!"

ಶಿವಪ್ಪನವರು ಅಷ್ಟಕ್ಕೇ ಕರಗಿಹೋದರು. ಅವರ ನಯ ಬಂದು ಅವರ ಮಾತುಗಳನ್ನು ಮೃದುಮಾಡಿತು.

"ಹಾಗಾದರೆ ನಾವಾಡೋದೆಲ್ಲ ನಿನ್ನ ಕೆಟ್ಟದ್ದಕ್ಕೆ ಅಂತಾಗ್ಹೋಯ್ತು ರಾಜು?" ಎಂದರು.

ರಾಜು ಇದಕ್ಕೆ ಉತ್ತರ ಕೊಡಲು ಸಾಧ್ಯವಾಗಲಿಲ್ಲ. ಕಡೆಗೆ ಮುಚ್ಚಿಕೊಂಡು ಮಾತನಾಡುವುದು ಅಪ್ರಯೋಜನವೆಂದು ತಿಳಿದುಕೊಂಡನು. ಹೇಳಿಬಿಡುವುದೆಂದುಕೊಂಡನು.

“ ಮೈಸೂರಿನಲ್ಲಿ ಒಂದು ನಾಲ್ಕಾರುದಿನಗಳ ಕಾಲ ಕಳೆಯಬೇಕೂಂತ ಚಿಕ್ಕಂದಿನಿಂದಲೂ ಮನಸ್ಸಾಗಿತ್ತಣ್ಣ ; ಅದಕ್ಕೆ........” ಎಂದು ಮೆಲ್ಲಮೆಲ್ಲನೆ ಹೇಳಿಯೇಬಿಟ್ಟನು.

ಶಿವಪ್ಪನವರಿಗೆ ಸೋಮಣ್ಣನಿಗಿಂತ ರಾಜುವಿನಲ್ಲೇ ಒಂದು ತೂಕ ಪ್ರೀತಿ ಹೆಚ್ಚು. ರಾಜುವಿನಲ್ಲಿದ್ದ ಒಂದು ಜಾಣತನ, ಪ್ರೀತಿಯ ಸ್ವಭಾವಗಳು ಅದನ್ನು ಹೆಚ್ಚಿಸಿತ್ತು. ಬಹಳ ಹಿಂದಿನಿಂದಲೂ ಶಿವಪ್ಪನವರು ರಾಜುವಿನ ಮಾತಿಗೆ ಪ್ರತಿಹೇಳುತ್ತಿರಲಿಲ್ಲ. ಆ ಒಂದು ಮುದ್ದೇ, ರಾಜುವಿಗೆ ಮೈಸೂರಿನಲ್ಲಿರುವುದಕ್ಕೆ ಅನುಮತಿ ಕೊಟ್ಟದ್ದದ್ದು. ಈಗ ರಾಜುವು ತಮ್ಮೆದುರಿನಲ್ಲೇ ತನ್ನದೊಂದು ಆಸೆಯನ್ನಿಡುತ್ತಿದ್ದಾನೆ. ತಾವೇ ಅದಕ್ಕೆ ಅಡ್ಡಿಬಂದರೆ ಇನ್ನಾರು ಅದನ್ನು ಈಡೇರಿಸಬಲ್ಲರು. ಆದ್ದರಿಂದ ಅವರಲ್ಲಿ ರಾಜುವಿನ ಬಿಚ್ಚೆದೆಗಾಗಿ ಮಮತೆ ಮೂಡಿತು. ಅವರು ರಾಜುವಿನ ಏರ್ಪಾಡನ್ನು ಅಂಗೀಕರಿಸಿಬಿಟ್ಟರು. ರಾಜು, ಗೆದ್ದನು. ಮಾರನೆಯ ದಿನವೇ ರಾಜುವು ಮೈಸೂರಿಗೆ ಮುಂದುಮುಂದಾಗಿ ಹೊರಟುಬಿಟ್ಟನು

ಸೆಜ್ಜೆಯಲ್ಲಿರಬೇಕಾದ ದಿನಗಳು ಕಳೆದುಹೋದುವು. ಶಿವಪ್ಪನವರು ಜವಾಬ್ದಾರಿ ತಿಳಿದವರು. ತಾವು ನಾಗುವನ್ನು ಮೈಸೂರಿಗೆ ಕರೆದುಕೊಂಡು ಹೋಗಬೇಕಾಗಿದ್ದದ್ದಕ್ಕೆ ಎರಡು ದಿನ ಮುಂಚಿತವಾಗಿಯೇ ಮುದ್ದಪ್ಪನವರನ್ನು ಕರಸಿಕೊಂಡರು. ಮುದ್ದಪ್ಪನವರು, ಶಿವಪ್ಪದಂಪತಿಗಳು, ನಾಗು, ಇಷ್ಟು ಜನರೂ ಮೈಸೂರಿಗೆ ಹೊರಡುವುದಾಗಿ ತೀರ್ಮಾನವಾಯಿತು.

ನಾಲ್ಕೈದುಜನಗಳಿಗಾಗುವಷ್ಟು ಗೃಹಕೃತ್ಯದ ಸಾಮಾನುಗಳನ್ನು ನಾಗುವಿಗೆ ಅವರ ಅತ್ತೆ ಅಳವಡಿಸಿಕೊಟ್ಟರು. ಅವುಗಳನ್ನೆಲ್ಲಾ ಶಿವಪ್ಪನವರು ಒಂದು ಗಾಡಿಯ ಮೇಲೆ ಹಾಕಿ ಐವತ್ತರುವತ್ತು ಮೈಲಿ ದೂರದ ಮೈಸೂರಿಗೆಂದು ಒಂದು ದಿವಸ ಮುಂಚೆಯೇ ಕಳುಹಿಸಿಕೊಟ್ಟರು. ನಾಗುವಿನ ಮನಸ್ಸೇನೋ ಆಗಲೇ ಮೈಸೂರಿನಲ್ಲಿತ್ತು. ಅವಳ ದೇಹ ಮಾತ್ರ ತನ್ನ ಮಾವ ಅಪ್ಪಂದಿರ ಜೊತೆಯನ್ನು ಕಾಯುತ್ತಿತ್ತು.

ಮುದ್ದಪ್ಪನವರು ಸೆಜ್ಜೆಗೆ ಬಂದರು. ನಾಳೆಯ ದಿನ ಮೈಸೂರಿಗೆ ಹೊರಡಬೇಕೆಂದು ಎಲ್ಲರೂ ತೀರ್ಮಾನಿಸಿಕೊಂಡರು. ಶಿವಪ್ಪನವರ ಬಲವಂತಕ್ಕೆ ಒಂದು ತಿಂಗಳು ಮಟ್ಟಿಗೆ ಮೈಸೂರಲ್ಲೇ ಇರುವುದಕ್ಕೆ ಅವರ ಹೆಂಡತಿ

ಒಪ್ಪಿಕೊಂಡರು. ಸೆಜ್ಜೆಯ ಮುತ್ತೈದೆಯರೆಲ್ಲ ನಾಗುವಿಗೆ ಕುಂಕುಮ ಅರಿಶಿನ ವಿಟ್ಟು ಆಶೀರ್ವದಿಸಿದರು. ತಾಲ್ಲೋಕನ್ನು ತಲಪುವುದಕ್ಕೆ ಮುದ್ದಪ್ಪ, ಶಿವಪ್ಪ, ನಾಗು, ನಾಗುವಿನತ್ತೆಯರು ಗಾಡಿಯನ್ನು ಹತ್ತಿದರು. ಎತ್ತುಗಳು ಮುನ್ನುಗ್ಗಿದುವು.

ನಾಗುವಿಗೆ ತಾಲ್ಲೋಕಿನ ಊರನ್ನು ನೋಡಿ ಬಹಳ ಆಶ್ಚರ್ಯವಾಯಿತು. ಅಲ್ಲಿ ಲಕ್ಷಾಂತರ ಮನೆಗಳಿರಬೇಕೆಂದು ಅವಳಿಗೆ ತೋರಿತು. ದಾರಿಯಲ್ಲಿ ಅಲ್ಲಲ್ಲೇ ಲಾಂದ್ರಕಂಬಗಳು. ಒಳಗೆ ಸೀಮೆಎಣ್ಣೆದೀಪಗಳು. ಅದನ್ನು ಯಾರು ಹಚ್ಚುವರೆಂದು, ನಾಗು ಅತ್ತೆಯನ್ನು ಕೇಳಿದಳು. ಅವರು ತಮ್ಮ ಮೌಢ್ಯವನ್ನು ಪ್ರದರ್ಶಿಸಿ ಕೊಂಡಾರೆ? ಅವರವರ ಮನೆಯ ಹತ್ತಿರದ ದೀಪವನ್ನು ಅವರವರು ಹಚ್ಚಿಕೊಳ್ಳುವರೆಂದು ಅವರು ಹೇಳಿದರು. ಅಂಥ ದೀಪಗಳ ಅಕ್ಕಪಕ್ಕದಲ್ಲಿ ಯಾವ ಮನೆಯೂ ಕಾಣದಿದ್ದಾಗ ನಾಗುವಿಗೆ ಪುನಃ ಸಂಶಯ ಹತ್ತಿತು. ಕಡೆಗೆ ಅತ್ತೆಯೇ ಮಾವನನ್ನು ಕೇಳಿದರು. ಅವರು ಸರ್ಕಾರದವರೇ ಎಲ್ಲ ದೀಪಗಳನ್ನೂ ಹಚ್ಚುವರೆಂದರು. ನಾಗುವಿಗೆ ಸರ್ಕಾರದವರು ತುಂಬಾ ಒಳ್ಳೆಯವರೆನಿಸಿತು.

ಬಸ್ಸು ಬಂದಿತು. ನಾಗುವಿಗೆ ತುಂಬಾ ಅಪನಂಬಿಕೆ. ಇದು ತನ್ನನ್ನು ಮೈಸೂರಿಗೆ ಕರೆದುಕೊಂಡು ಹೋಗುವುದೆಂದರೆ, ಅವಳಿಗೆ ನಂಬಿಕೆಯಿಲ್ಲ. ಅವರ ಮಾವ ಎಲ್ಲರಿಗೂ ಎಂದು ಹತ್ತು ರೂಪಾಯಿಯ ನೋಟನ್ನು ಬಸ್ಸಿನವರಿಗೆ ಕೊಟ್ಟಾಗ ನಾಗುವಿಗೆ ಕೊಂಚ ಸಂಶಯ ಕಡಮೆಯಾಯಿತು. ತಾಲ್ಲೋಕಿನಲ್ಲೇ ಬಸ್ಸುಗಳಿವೆ. ಇನ್ನು ಮೈಸೂರಿನಲ್ಲಿ ಏನೇನಿರಬಹುದೋ? ಅಲ್ಲಿ ಮಹಾರಾಜರಿದ್ದಾರಂತೆ. ಅವರು ಮನುಷ್ಯರೋ ಅಥವಾ ದೇವತೆಯೋ? ಏನಾದರಾಗಲಿ, ಅಲ್ಲಿ ಮನುಷ್ಯನಾದ ರಾಜನಂತೂ ಖಂಡಿತ ಕಾಣುತ್ತಾನೆ. ಇಂಥ ಭಾವನೆಗಳು ನಾಗುವಿನಲ್ಲಿ ಸುಳಿ ಸುಳಿದು ನುಸುಳಿ ಹೋಗುತ್ತಿದ್ದುವು.

ರಸ್ತೆ ಬಸ್ಸಿಗೆ ಅನುಕೂಲವಾಗಿರಲಿಲ್ಲ ಬಹಳ ದುಡುಗುತ್ತಿತ್ತು ಒಳಗೆ ಕುಳಿತಿದ್ದ ನಾಗು ಎಳೆಯ ಮಗುವಿನಂತೆ ಕಣ್ಣುಗಳನ್ನು ಪಿಳಿಪಿಳಿ ಬಿಡುತ್ತಾ ಸುತ್ತಲೂ ನೋಡುತ್ತಿದ್ದಳು. ಬಸ್ಸು ಕುಲುಕುತ್ತಿತ್ತೇ ಹೊರತು ಮಿಕ್ಕೇನೂ ವ್ಯತ್ಯಾಸವಾಗುತ್ತಿರಲಿಲ್ಲ. ಶಬ್ದ ಮಾತ್ರ ಒಬ್ಬರ ಮಾತು ಇನ್ನೊಬ್ಬರಿಗೆ ಕೇಳಿಸದಷ್ಟಾಗುತ್ತಿತ್ತು. ಮುಂದಿರುವ ಮರಗಳು ಸರಸರಕ್ಕನೆ

ಹಿಂದಕ್ಕೆ ಹೋಗುತ್ತಿದ್ದುದರಿಂದ ನಾಗುವಿಗೆ ತಾವು ಮುಂದು ಮುಂದಕ್ಕೆ ಹೋಗುತ್ತಿರುವೆವೆಂಬ ನಂಬಿಕೆಯಾಗುತ್ತಿತ್ತು. ಬಸ್ಸು ಹೇಗೆ ಮುಂದಕ್ಕೆ ಹೋಗುವುದೆಂಬುದನ್ನು ಕೆಳಗಿಳಿದಾಗ ತಪ್ಪದೇ ಪರೀಕ್ಷಿಸಬೇಕೆಂದುಕೊಂಡಳು. ನಡಗೆಗಿಂತ ಗಾಡಿ ಬೇಗವೆಂಬುದು ಮಾತ್ರವೆ ಅಲ್ಲ ಗಾಡಿಗಿಂತ 'ಬೈಸ್‌ಕೋಲು' ಬೇಗವೆಂದು ಅವಳಿಗೆ ಮುಂಚೆಯೇ ಗೊತ್ತಿತ್ತು. ಆದರೆ 'ಬೈಸ್‌ಕೋಲಿ' ಗಿಂತ ಬೇಗ ಹೋಗುವುದೊಂದಿದೆ, ಎನ್ನುವುದು ನಾಗುವಿಗೆ ಆಗತಾನೆ ತಿಳಿಯಿತು.

ಇಂಥ ಹೊಸ ಅನುಭವಗಳಿಗೆ, ನಾಗು, ರೂಢಿಸಿಕೊಳ್ಳುವುದರೊಳಗೇ ಮೈಸೂರು ಬಂದಿತು. ಬಸ್ಸಿನಲ್ಲಿ ಕುಳಿತಿದ್ದ ಮನುಷ್ಯರ ಭುಜಗಳ ಮಧ್ಯೆ ಸ್ವಲ್ಪಸ್ವಲ್ಪ ಮೈಸೂರು ಕಾಣಿಸುತ್ತಿತ್ತು. 'ಅಮ್ಮಯ್ಯ ಎಷ್ಟು ದೊಡ್ಡ ಊರಿದು! ಹುಚಿನ ಮನೆಗಳೇ ಕಮ್ಮಿ. ನಾವು ಹೋಗ್ತಾ ಇರೋಹಂಗೆ ಎಷ್ಟೋ ಬಸ್ಸುಗಳಿವೆ. ಕೆಲವ್ದರಲ್ಲಿ ನಾಕೇ ಜನ ಕೂತವರೆ. ದಾರಿಗಳು ಎಷ್ಟು ಚೆಂದಾಗಿದೆ. ಎಷ್ಟು ಜನ! ಅಬ್ಬಾ! ಇಲ್ಲಿ ಅವರ್ನ ಹುಡುಕೋದು ಹೇಗೆ?' ಎನ್ನಿಸಿತು ನಾಗುವಿಗೆ. ಆದರೆ ತಮ್ಮ ಮಾವನಿಗೆ ಅವರಿರುವ ಜಾಗ ಗೊತ್ತು ಎನ್ನುವ ಧೈರ್ಯ ನಾಗುವನ್ನು ನಿಶ್ಚಿಂತಳನ್ನಾಗಿ ಮಾಡಿತು.

ಕಡೆಗೆ ಬಸ್ಸು ನಿಂತಿತು. ರಾಜುವೂ ತಮ್ಮ ಬಸ್ಸಿನ ಹತ್ತಿರವೇ ನಿಂತಿರುವುದನ್ನು ನೋಡಿ ಅವಳಿಗೆ ಆಶ್ಚರ್ಯವಾಯಿತು. ಎಲ್ಲರಿಗಿಂತ ಮೊದಲು ರಾಜುವನ್ನು ನೋಡಿದವಳು ನಾಗುವೆ. ಎಲ್ಲರಿಗಿಂತ ಮುಂಚೆ ನಾಗುವನ್ನೇ, ರಾಜುವು ನೋಡಿದುದು. ನಾಗುವಿಗೆ ಆದ ಆನಂದ ಅದೆಷ್ಟೋ; ಊಹಿಸುವುದಕ್ಕೂ ಸಾಧ್ಯವಿಲ್ಲ. 'ಇವರಿಗೆ ನಾವು ಈ ಜಾಗಕ್ಕೇ, ಇವತ್ತೇ, ಇಷ್ಟುಹೊತ್ತಿಗೇ ಬರತೀವಿ ಅಂತ ಹೇಳಿದ್ದವರ್ಯಾರು? ಎಲ್ಲೋ ಬಸ್ಸಿನವನೂ ಇವರೂ ಮಾತಾಡ್ಕೊಂಡಿರಬೇಕೂ' ಅಂತ ಅವಳು ಊಹಿಸಿಕೊಂಡಳು. 'ಏನಾದರೂ ಆಗಲಿ, ಸದ್ಯ, ಇಷ್ಟು ಬೇಗ ನಮಗೆ ಸಿಕ್ಕಿದರಲ್ಲ' ಎನ್ನುವುದೇ ಅವಳ ಸಂತೋಷ.

ಬಸ್ಸು ನಿಂತ ಕಡೆಯಿಂದ ಮನೆಯ ವರೆಗೆ ಕುದುರೆಯ ಗಾಡಿ ಬೇರೆ. ಎಲ್ಲಕ್ಕೂ ನಾಗುವಿಗೆ ಬೆಕ್ಕಸಬೆರಗಿನ ವರ್ತನೆಯೆ. ಅಲ್ಲಿಯ ಗಂಡಸರೇ ಒಂದು ರೀತಿ, ಹೆಂಗಸರೇ ಒಂದು ರೀತಿ. ಮನೆಗಳೇ ಒಂದು ವಿಧ. ದಾರಿಗಳೇ ಒಂದು ವಿಧ. ಇಂಥವುಗಳ ಸುದ್ದಿಯೇ ಹಳ್ಳಿಯಲ್ಲಿಲ್ಲ. ಇಲ್ಲಿ ಹಳ್ಳಿಯಲ್ಲಿರುವ ಜವೀನು,

ಕೆರೆ, ತೋಪುಗಳ ಸುದ್ದಿಯೇ ಇಲ್ಲ ಇದೆಲ್ಲವನ್ನೂ ನಾಗುವು ಗಮನಿಸುತ್ತ ಬಂದಳು. ತನ್ನ ಎರಡನೇ ಮನೆಯು ಮೈಸೂರಿನಲ್ಲಿರಬಹುದೆಂದು ಅವಳು ಕನಸಿನಲ್ಲಿಯೂ ಎಣಿಸಿರಲಿಲ್ಲ. ಅಂದು ರಾಜುವಿನ ಕೈಗಳು ತನ್ನ ಕೊರಳಿಗೆ ಈ ತಾಲಿಯನ್ನು ಕಟ್ಟಿದ ಒಂದೇ ಕಾರಣದಿಂದ ತಾನು ಇವತ್ತು ಮೈಸೂರಿನಲ್ಲಿದ್ದೇನೆ ಎಂಬುದರ ಅರಿವು ನಾಗುವಿಗಾಗಿ, ಅವಳು ಆಶ್ಚರ್ಯಗೊಂಡಳು.

ರಾಜುವು ಏರ್ಪಡಿಸಿದ್ದ ಮನೆಯ ಮುಂದೆ ಜಟಕಾಗಾಡಿಯು ಬಂದು ನಿಂತಿತು. ರಾಜು ಮೊದಲು ಕೆಳಗಿಳಿದು ಗಾಡಿಯವನಿಗೆ ಬಾಡಿಗೆ ಕೊಟ್ಟನು. ಅಷ್ಟರಲ್ಲಿ ಒಳಗಿದ್ದವರೆಲ್ಲ ಕೆಳಗಿಳಿದು ನಿಂತರು. ರಾಜುವು ಬೀಗವನ್ನು ತೆಗೆದು ಬಾಗಿಲನ್ನು ತಳ್ಳಿದನು. ನಾಗುವನ್ನು ಹಿಂದೆ ಬಿಟ್ಟುಕೊಂಡು ಬೆಳಕು ಒಳಗೆ ನುಗ್ಗಿತು.

ಇನ್ನುಮೇಲೆ ಇದೇ ನಾಗುವಿನ ಮನೆ. ಅದಕ್ಕೇ ನಾಗುವು ಅಷ್ಟು ಉತ್ಸಾಹದಿಂದ ಒಳಗೆ ಕಾಲಿಟ್ಟದ್ದು.

೬

ಲಕ್ಷಣವಾದ ಮನೆಯದು. ಬಾಡಿಗೆ ಮನೆ. ಅದಕ್ಕೆ ತಿಂಗಳಿಗೆ ಎಂಟು ರೂಪಾಯಿ ಬಾಡಿಗೆ ಕೊಡಬೇಕು. ಎರಡು ರೂಮುಗಳು, ಒಂದು ಹಜಾರ, ಒಂದು ಊಟದ ಮನೆ, ಅದಕ್ಕೆ ತಗುಲಿದಂತೆಯೇ ಒಂದು ಅಡಿಗೆಮನೆ. ಹಿಂದೆ ಸ್ನಾನದ ಮನೆ, ಬಟ್ಟೆಯೊಗೆಯುವ ಕಲ್ಲು, ನಲ್ಲಿ, ನಾಲ್ಕಾರು ಗಿಡಗಳಿಗೆ ಜಾಗ– ಇವಿಷ್ಟೂ ಆ ಮನೆಯ ಸೌಲಭ್ಯಗಳು ಆದರೂ ಬಾಡಿಗೆ ದುಭಾರಿ

ನಾಗುವಿಗೆ ಎಂಟು ರೂಪಾಯಿಗಳಿಗಿಂತ ಆಶ್ಚರ್ಯಪಡಿಸಿದುದೆಂದರೆ ಆ ಎಣ್ಣೆ ಇಲ್ಲದ ದೀಪ ಮತ್ತು ಭಾವಿಯಿಲ್ಲದ ನೀರು. ಹಿರಿಯರು ಮೌಢ್ಯವೇ ಆಶ್ಚರ್ಯದ ಮೂಲವೆನ್ನುತ್ತಾರೆ. ನಾಗುವಿಗೆ ಆ ಕೊಳವಿಯ ಬಾಯಿಂದ, ಕೇಳಿದಷ್ಟು ನೀರು ಬರುವುದು ಒಂದು ಮಾಯವೇ ಹೊರತು ಮನುಷ್ಯಪ್ರಯತ್ನ ವಲ್ಲವೇ ಅಲ್ಲವೆಂಬ ನಂಬಿಕೆ. ಆ ವಿದ್ಯುದ್ದೀಪಗಳು ಬೆಳಗುವುದಕ್ಕೆ ನಗರದವರ ಮೇಲೆ ದೇವರಿಗಿರುವ ದಯೆ ಕಾರಣವೇ ಹೊರತು ಮತ್ತೇನೂ ಅಲ್ಲವೆಂದು ಅವಳ ಭಾವನೆ. ನಲ್ಲಿ, 'ಲೇಟು' ಗಳ ವಿಷಯಗಳನ್ನು ಅವಳು ತನ್ನ ತಂದೆ, ಮಾವ, ಗಂಡಂದಿರ ಬಾಯಿಯಲ್ಲಿ ಕೇಳಿದ್ದಳೇ ಹೊರತು ಬೈಸಿಕಲ್ಲಿಗಿಂತ

ಆಶ್ಚರ್ಯವಾದ ಸಂಗತಿ ಮತ್ತೊಂದಿಲ್ಲವೆಂದೇ ಅವಳು ತಿಳಿದುಕೊಂಡಿದ್ದಳು. ನಾಗುವಿನ ಮನಸ್ಸಿನಲ್ಲಿದ್ದ ಮೈಸೂರಿಗೂ ಚಾಮುಂಡೀಬೆಟ್ಟದ ಒತ್ತಿನಲ್ಲಿರುವ ಮೈಸೂರಿಗೂ ಎಷ್ಟೆಷ್ಟು ವ್ಯತ್ಯಾಸ?

ಐದು ಜನರೂ ಆ ಮನೆಯಲ್ಲಿ ಕಾಲಯಾಪನೆ ಮಾಡುತ್ತಿದ್ದರು. ಅದರ ಪೈಕಿ ನಾಗುವೊಬ್ಬಳಿಗೇ ಪ್ರತಿಯೊಂದು ದಿನವೂ ಹೊಸಹೊಸದಾಗಿ ಕಾಣುತ್ತಿದ್ದದ್ದು. ಮಿಕ್ಕ ನಾಲ್ವರಿಗೆ ಅವೆಲ್ಲ ಪರಿಚಿತ ದಿನಗಳು. ಅದಕ್ಕೇ ಮುದ್ದಪ್ಪ ಶಿವಪ್ಪನವರಿಬ್ಬರೂ ತಮ್ಮತಮ್ಮ ಊರಿನ ಕೆಲಸಗಳನ್ನೇ ಯೋಚಿಸುತ್ತಿದ್ದುದು. ರಾಜುವು ಮನೆಗೆ ಬಂದಾಗಲೆಲ್ಲ ಅವರಿಬ್ಬರೂ ಊರಿಗೆ ಹೋಗುವುದಕ್ಕೆ ಪೀಠಿಕೆ ಹಾಕುತ್ತಿದ್ದರು. ಇದು ನಾಗುವಿಗೆ ಕೊಂಚ ಹೆದರಿಕೆಯ ವಿಷಯ.

ಅಪ್ಪ, ಮಾವ, ಇಬ್ಬರೂ ಊರಿಗೆ ಹೊರಟುಹೋದರೆ ಅತ್ತೆಯೂ ಹೋಗದೇ ಉಂಟೆ. ಆಮೇಲೆ, ಈ ಮನೆಯಲ್ಲಿ ರಾಜು ಇದ್ದಾಗ ಹೇಗೆ ನಡೆದುಕೊಳ್ಳಬೇಕೋ ಅವನು ಕಚೇರಿಗೆ ಹೊರಟುಹೋದಮೇಲೆ ಹೇಗೆ ನಡೆದುಕೊಳ್ಳಬೇಕೋ ಅವಳಿಗೆ ತಿಳಿಯುತ್ತಿರಲಿಲ್ಲ. ಆಗ ನಾಗುವಿಗೆ ದೇವರಲ್ಲದೆ ಮತ್ತೊಬ್ಬರು ಧೈರ್ಯಕೊಡುವವರಿರಲಿಲ್ಲ. ಹಾಗೂಹೀಗೂ ಎಂಟುದಿನಗಳು ಕಳೆದಮೇಲೆ ಮುದ್ದಪ್ಪನವರೂ ಶಿವಪ್ಪನವರೂ ಒಂದು ಬೆಳಗ್ಗೆ ಹೊರಟೇ ನಿಂತರು.

ಮುದ್ದಪ್ಪನವರು ತಮ್ಮ ಮೀಸೆ ಮುಚ್ಚಿದ ಬಾಯಿಂದ ದುಃಖವನ್ನು ತಡೆದುಕೊಂಡಿದ್ದರು. ತಮ್ಮ ಕಾಲಿಗೆ ಬಿದ್ದಿದ್ದ ನಾಗುವಿನ ಕಣ್ಣುಗಳು ತೇವವಾಗಿರುವುದನ್ನು ನೋಡಿ,

"ಅಳಬಾರದಮ್ಮ, ನಾನು ಆಗಾಗ ಮೈಸೂರಿಗೆ ಬರದೇ ಇರೋಕ್ಕೆ ಆಗೋದೇ ಇಲ್ಲ, ಸುಮ್ಮನಿರು" ಎಂದರು. ನಾಗು ಸುಮ್ಮನಿದ್ದಳು. ಮುದ್ದಪ್ಪನವರು "ಅಕ್ಕನ್ನ ಮೈಸೂರಿಗೆ ಕಳುಹಿಸಲಾ ಒಂದಷ್ಟು ದಿನಾ?" ಅಂದರು. ನಾಗುವಿಗೆ ತನ್ನ ತಂದೆಯನ್ನು ಕಂಡರೆ ತುಂಬಾ ಪ್ರೀತಿ. ತಮ್ಮ ಅತ್ತೆ ಇಲ್ಲಿಗೆ ಬಂದುಬಿಟ್ಟರೆ ಆಮೇಲೆ ತಮ್ಮಪ್ಪನನ್ನು ನೋಡಿಕೊಳ್ಳುವವರ್ಯಾರು? ಆದರಿಂದ ಅವಳು "ಯಾಕೆ? ಏನೂ ಬೇಡಿ" ಅಂದಳು. ಮುದ್ದಪ್ಪನವರು ಇಪ್ಪತ್ತು ರೂಪಾಯಿಗಳನ್ನು ಕೈಗೆ ತೆಗೆದುಕೊಂಡು, "ಇದು ನಿನ್ನ ಹತ್ರ

ಇರ್ಲಿ" ಎಂದು ಅದನ್ನು ಅವಳ ಕೈಲಿಟ್ಟರು. ಮಕ್ಕಳು ಜಾತ್ರೆಯ ಕಾಸನ್ನು ಅಪ್ಪಂದಿರ ಹತ್ತಿರ ತೆಗೆದುಕೊಳ್ಳುವಂತೆ ನಾಗು ಅದನ್ನು ತೆಗೆದುಕೊಂಡಳು. ಮುದ್ದಪ್ಪನವರಿಗೆ ನಾಗುವು ಇನ್ನೂ ಹತ್ತು ವರ್ಷದವಳಂತೆ ಕಂಡಳು. ಅವಳ ಮುದ್ದಾದ, ಮಿರುಗುತ್ತಿದ್ದ ತಲೆಯನ್ನು ಒರಟಾದ ಕೈಯಿಂದ ಸವರಿದರು.

ಶಿವಪ್ಪನವರೂ ತಮ್ಮ ದೊಡ್ಡ ಧ್ವನಿಯಲ್ಲಿ "ನಾಗಮ್ಮ............?" ಎಂದರು. ನಾಗು ಅವರೆದುರಿಗೆ ಹೋಗಿ ತಲೆ ತಗ್ಗಿಸಿಕೊಂಡು ನಿಂತಳು. "ನಾವೆಲ್ಲ ಹೋಗಿಬಿಟ್ಟು ಬರೋಣವಾ?" ಎಂದರು. ನಾಗುವಿನ ಸಮ್ಮತಿ ಬೇರೆ ಆಗಬೇಕೆ ಇದಕ್ಕೆ? ಆದರೆ ಶಿವಪ್ಪನವರಿಗೆ ನಾಗು ಉಪೇಕ್ಷೆಮಾಡ ಬಹುದಾದ ಪ್ರಾಣಿಯಾಗಿರಲಿಲ್ಲ. ಅವರಿಗೆ ಅವಳು ಅವರ ಮಗನಷ್ಟೇ ಮುಖ್ಯ ವಾಗಿದ್ದಳು. ಅದಕ್ಕೆ ಅವರು "ನಾನು ಬರ್ತೀನಿ ಅಂತ ಇಷ್ಟೊತ್ತಿನವರೆಗೂ ಹಟ ಹಿಡಿದಿದ್ದಳು ಇವಳು. ಈಗ ಸದ್ಯ, ಇಲ್ಲೇ ಇರೋಕ್ಕೆ ಒಪ್ಕೊಂಡಿದಾಳೆ. ಅಣ್ಣ!" ಅಂದರು. ನಾಗುವಿಗೆ ತುಂಬಾ ಸಂತೋಷವಾಯಿತು. ಹೊರಟೇ ಹೋಗುತ್ತಾರೆಂದು ತಿಳಿದುಕೊಂಡಿದ್ದ ಅತ್ತೆಯವರು ಉಳಿದುಕೊಂಡಿದ್ದು ನಾಗು ವಿಗೆ ಎಷ್ಟೋ ಹೊರೆ ಇಳಿಸಿದ ಹಾಗಾಯಿತು. ಅವಳತ್ತೆ ತಾವುಟ್ಟುಕೊಂಡಿದ್ದ ದೊಡ್ಡ ಸೀರೆ, ಇಟ್ಟಿದ್ದ ಒಡವೆಗಳನ್ನೆಲ್ಲಾ ಬದಲಾಯಿಸಿ ಸಾಮಾನ್ಯವಾದರು. ಮುದ್ದಪ್ಪ, ಶಿವಪ್ಪನವರು ಹೊರಟುಹೋದರು. ರಾಜು ಅವರನ್ನು ಕಳು ಹಿಸುವುದಕ್ಕೆ, ಅಷ್ಟು ದೂರ, ಟವಲ್ಲು ಹೆಗಲ ಮೇಲೆ ಹಾಕಿಕೊಂಡು ಹೋದನು.

ಕೊಂಚ ದೂರ ಹೋದ ಮೇಲೆ ಮುದ್ದಪ್ಪನವರು ಮನೆಯ ಕಡೆ ತಿರುಗಿ ನೋಡಿದರು. ಮನೆಯ ಬಾಗಿಲಿಗೆ ಬಂದು ನಿಂತುಕೊಳ್ಳುವುದು ತಪ್ಪೆಂದು ತಿಳಿದುಕೊಂಡಿದ್ದ ನಾಗುವು ಒಳಗೇ ಉಳಿದುಕೊಂಡಿದ್ದಳು. ಇನ್ನೊಂದು ಬಾರಿ ತಮ್ಮ ಮಗಳನ್ನು ನೋಡುವುದಕ್ಕೆ ಪ್ರಾಪ್ತಿಯಿಲ್ಲದೆ ಮುದ್ದಪ್ಪನವರು ಬೇರೇ ಬೀದಿಗೆ ತಿರುಗಿ ಕಣ್ಮರೆಯಾದರು.

ರಾಜು ಮನೆಗೆ ಬಂದು, ಮುಖ ತೊಳೆದುಕೊಂಡು ಎಲ್ಲಿಗೋ ಹೊರ ಡಲು ಸಿದ್ಧನಾಗುತ್ತಿದ್ದನು. ನಾಗು, ರೂಮಿನೊಳಕ್ಕೆ ಬಂದಳು.

ರಾಜು "ಏನು ದೇವರು? ಹೆಸರಿಗೆ ತಕ್ಕ ಹಾಗೆ ಸರಸರಾಂತ ಹರಿಕೊಂಡು ಬಂದು ನಿಂತುಬಿಟ್ಟೆರಿ?" ಎಂದು ಕನ್ನಡಿ ಕಡೆ ನೋಡುತ್ತಲೇ ಅಂದನು.

ನಾಗು "ಹೀಗೇ ನೀವು ತಮಾಷೆ ಮಾಡ್ತಾ ಇರಿ. ಒಂದಲ್ಲ ಒಂದು ದಿನ ನಿಮ್ಮ ತಮಾಷೆ ಮಾತ್ಗಳೆಲ್ಲ ಖರ್ಚಾಗಿಹೋಗುತ್ತೆ" ಎಂದಳು.

ರಾಜು "ಎಲಾ ಹುಡುಗಿ! ಈ ಜಬರ್ದಸ್ತೆಲ್ಲಾ ಅವತ್ತಿಲ್ಲಿ ಹೋಗಿತ್ತೆ. ಒಳ್ಳೇ ಮಳ್ಳಿಹಾಗೆ ನಿಂತಿದ್ಯಲ್ಲ!" ಅಂದನು.

ನಾಗು ಅದಕ್ಕೆ ಉತ್ತರ ಕೊಡಲಿಲ್ಲ. ನಾಚಿಕೆಯಿಂದ ಕೂಡಿದ ಒಂದು ನಗು ನಕ್ಕು "ಅದಿರ್ಲಿ. ಇದನ್ನ ತಗೋಳಿ, ನಿಮ್ಮತ್ರ ಇಡಿ" ಎಂದಳು. ರಾಜು ಆಶ್ಚರ್ಯದಿಂದ ನಾಗುವಿನ ಕೈಯಲ್ಲಿದ್ದ ನೋಟುಗಳನ್ನು ನೋಡುತ್ತ "ಇದೆಲ್ಲಿತ್ತೆ?" ಎಂದನು. ನಾಗು "ಅಪ್ಪಜೀ ಕೊಟ್ರು" ಅಂದಳು. ರಾಜು, "ಓ ನಿಮ್ಮಪ್ಪಜಿಯೇ ವಾಸಿ ಕಣೆ! ನಮ್ಮಪ್ಪನನ್ನ ನೋಡು, ಒಂದು ಕಾಸೂ ತಗೋ ಅಂತ ಕೊಡ್ಲಿಲ್ಲ" ಎಂದನು.

ನಾಗು "ಗಂಡಸರು ಎಲ್ಲಾನೂ ಕೇಳಬೇಕು, ಹೆಂಗಸರಿಗೆ ಇರೋ ಕಡೇಗೇ ಬರುತ್ತೆ" ಎಂದಳು.

ರಾಜು "ಅಲ್ವೇ ಮತ್ತೆ! ಇಲ್ದೇ ಇದ್ರೆ ಅತ್ತುಬಿಟ್ಟೀರಿ!" ಎಂದನು. ನಾಗುವಿಗೆ ರೇಗಿತು "ಹೌದು, ನಾವು ಹಾಗೇನೆ. ಇರ್ಲಿ, ಇದು ತಗೋಳಿ, ನಾನು ಹೋಗಬೇಕು" ಎಂದು ಗಂಭೀರವಾದಳು. ರಾಜು "ನಾನದನ್ನೇನೂ ನಿನ್ನ, ಕೊಡು ಅಂತ ಕೇಳ್ಲಿಲ್ಲ" ಅಂದನು. ನಾಗುವಿಗೆ ಇನ್ನೂ ರೇಗಿಹೋಯಿತು. ಅಲ್ಲಿದ್ದ ಮೇಜಿನ ಮೇಲೆ ಅದನ್ನು ಬಡಿದು ಇಟ್ಟು, ತಾನು ರೂಮಿನಿಂದ ಹೊರಕ್ಕೆ ಹೊರಟುಹೋದಳು. ರಾಜು "ಲೇ ಲೇ ಲೇ! ಹುಚ್ಚಿ........ಲೇ!" ಎನ್ನುವಷ್ಟರೊಳಗೇ ನಾಗುವು ಅಂತರ್ಧಾನವಾಗಿದ್ದಳು. ರಾಜು ಅವಳಿಗೆ ಕೇಳಿಸುವ ಹಾಗೆ "ಇನ್ನೊಂದ್ಸತಿ ಇಲ್ಲಿಗೆ ಬಾ ಗೊತ್ತಾಗ್ತದೆ" ಎಂದನು. ನಾಗುವು ಸುಮ್ಮನೆ ಹೊರಟುಹೋದಳು. ರಾಜುವು ಹೊರಗೆ ಹೊರಟಾಗ ಹಜಾರದಲ್ಲಿ ನಾಗು ನಿಂತಿದ್ದರೂ ನೋಡದ ಹಾಗೆ ಹೊರಟುಹೋದನು ಅಷ್ಟಕ್ಕೇ ನಾಗುವು ಹೆದರಿಹೋದಳು.

ರಾಜುವಿಗೆ ಏನು ಸಂದರ್ಭ, ಬಿತ್ತೋ ಏನೋ, ರಾತ್ರಿ ಒಂಭತ್ತು ಘಂಟೆಯಾಯಿತು ಅವನು ಮನೆಗೆ ಬರುವುದು. ಅಷ್ಟಕ್ಕೇ ನಾಗುವಿನ ಕಣ್ಣುಗಳು ಇನ್ನು ಅಳಲಾರದೆ ಕೆಂಪಗಾಗಿಹೋಗಿದ್ದುವು. ತಲೆಯು ಕೆದರಿಹೋಗಿತ್ತು.

ಇವರಿವರ ಗುಟ್ಟುಗಳು ನಾಗುವಿನತ್ತಿಗೇನು ಗೊತ್ತು. ಅವರು ನಾಗುವಿಗೆ ತಲೆನೋವೆಂದೇ ನಂಬಿಕೊಂಡಿದ್ದರು.

ಹೆಂಗಸರಿಗೆ, ಗಂಡಸರು ಕಣ್ಣೆದುರಿಗಿರುವಾಗ ಅವರ ಮೇಲೆ ಕೋಪ. ಆಮೇಲೆ ತಮ್ಮ ಕೋಪಕ್ಕೆ ಪಶ್ಚಾತ್ತಾಪ. ಪುನಃ ಅವರು ಎದುರಾದಾಗ ಮತ್ತೆ ಕೋಪ, ಇದು ಪದ್ಧತಿಯೆಂದು ಕಾಣುತ್ತದೆ. ನಾಗುವು ಈಗ ಹುಡುಗಿಯೇ ನಲ್ಲ ಅವಳೀಗ ಸಾಂಸಾರಿಕ ಹೆಂಗಸಲ್ಲವೇ. ರಾತ್ರಿ ರಾಜುವು ಮನೆಗೆ ಹೊತ್ತಾಗಿ ಬಂದಾಗ ಅವನ ಮೇಲೆ ಹಳೆಯ ಕೋಪವನ್ನೇ ತೆಗೆದುಕೊಂಡಳು. ಅವನಿಗೆ ಆ ದಿನ ಊಟಕ್ಕೆ ಅವಳು ಬಡಿಸಲೇ ಇಲ್ಲ. ಆಮೇಲೆ ಅವನು ನಾಗುವಿನ ಕೋಪವನ್ನೇ ಅಳೆಯುತ್ತಾ ರೂಮಿನ ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದಾಗ ನಾಗು ಮೆಲ್ಲನೆ ಕೋಪವನ್ನು ಅತ್ತೆಯಿಂದ ಬಚ್ಚಿಡುವುದಕ್ಕಾಗಿ, ರೂಮಿನೊ ಳಕ್ಕೆ ನುಸುಳಿದಳು. ಆದರೂ ಅವಳು ಸೋಲಲು ಬಂದವಳಲ್ಲ.

ರಾಜು, ಆ ಟೇಬಲ್ಲಿನ ಮೇಲೆ ಬಿದ್ದಿದ್ದ ಆ ಹತ್ತುರೂಪಾಯಿಯ ಎರಡು ನೋಟುಗಳಂತೆಯೇ ನಿಶ್ಚಲನಾಗಿ ಮಲಗಿದ್ದನು. ನಾಗುವಿಗೆ ನೋಟುಗಳು, ರಾಜು, ಇಬ್ಬರ ಮೇಲೂ ಕೋಪ ಬಂತು. ಅದನ್ನು ಹಾಗೇ ತಡೆದುಕೊಂಡು ಬಂದು ಕಿಟಕಿಯ ಹತ್ತಿರ ಬಂದು ನಿಂತಳು. ಹೊರಗೆ ಮೈಸೂರೆಲ್ಲವೂ ಕಪ್ಪಿ ನೊಳಗೆ ಕರಗಿ ಹೋಗುತ್ತಿತ್ತು. ಅಲ್ಲಲ್ಲಿ ಒಂದೊಂದು ದೀಪ ಒಂದೊಂದನ್ನು ನೋಡುತ್ತಿದ್ದುವು. ಬೀದಿಯಲ್ಲಿ ಜನಗಳು ಕಡಮೆಯಾಗಿಹೋಗಿದ್ದರು. ಆಗಾಗ್ಗೆ ಒಂದೊಂದು ಜಟಕಾಗಾಡಿಯು ಬಂದು ಶಬ್ದಮಾಡಿಕೊಂಡು ಹೊರಟು ಹೋಗುತ್ತಿತ್ತು. ರಾಜುವಿನ ರೂಮಿನಲ್ಲಿದ್ದ ದೀಪದ ಬೆಳಕು, ನಾಗು ನಿಂತಿದ್ದ ಕಿಟಕಿಯಿಂದ ತೂರಿ ರಸ್ತೆಯ ಮೇಲೆ ಚೌಕವಾಗಿ ಬಿದ್ದಿತ್ತು. ಅದರೊಳಗೆ ನಾಗುವಿನ ತಲೆಯ ನೆರಳು ಸುಮ್ಮನೆ ನಿಂತಿತ್ತು. ನಾಗುವು ಅದರಲ್ಲಿ ಕೆದರಿದ ತನ್ನ ತಲೆಯನ್ನು ನೋಡಿಕೊಂಡಳು. ಒಂದು ಬಾರಿ ಹಿಂದಕ್ಕೆ ತಿರುಗಿ ರಾಜು ವನ್ನು ನೋಡಿದಳು. ಕಳ್ಳನಿದ್ದೆಯವರಿಗೆ ಕನಿಕರವೆಲ್ಲಿ ಬಂತು? ಪುನಃ ಕಿಟಕಿಯಿಂದಾಚೆಗೆ ನೋಡತೊಡಗಿದಳು. ರಾಜುವು ನಗುತ್ತಿದ್ದನು. ಆದರೆ ಅದಕ್ಕೆ ತನ್ನ ತುಟಿಗಳ ಸಹಾಯ ಪಡೆಯುತ್ತಿರಲಿಲ್ಲ.

ನಾಗುವಿಗೆ ತಾಳ್ಮೆ ತಪ್ಪಿತು. ಅವಳಿಗೆ ಪುನಃ ಕಣ್ಣೀರು ಕೂಡಿ ಹಾಕಿಕೊಂಡಿತು. ಸೆರಗನ್ನು ಮುಖಕ್ಕೆ ಮುಚ್ಚಿಕೊಂಡಳು. ರಾಜುವಿಗೆ ಇದು

ಕಂಡರೂ ತಮಾಷೆಗೆ ಕೊನೆ ಸಿಕ್ಕಲಿಲ್ಲ. ನಾಗು ತಕ್ಷಣ ಟೇಬಲ್ಲಿನ ಕಡೆಗೆ ಬೇಗ ಬೇಗ ಬಂದಳು. ಅವಳು ಬರುತ್ತಿರುವುದು ಆ ದುಡ್ಡನ್ನು ಹಾಳುಮಾಡುವುದಕ್ಕೆಂದು ರಾಜುವಿಗೆ ತಿಳಿದುಹೋಯಿತು. ನಾಗುವು ಬಂದದ್ದೂ ಅದಕ್ಕೇ. ರಾಜುವಿನ ಮೇಲಿನ ಕೋಪವನ್ನು ಆ ಕಾಗದದ ಮೇಲೆ ತೀರಿಸಿಕೊಳ್ಳಲು ಬಂದಳು. ತಮಾಷೆಗೆ ಆ ಇಪ್ಪತ್ತು ರೂಪಾಯಿಗಳನ್ನು ಬಲಿಕೊಡುವ ಇಷ್ಟ ರಾಜುವಿಗೆ ಇರಲಿಲ್ಲ. ಅವನು ಹೋಗಿ ನಾಗುವಿನ ಕೈಗಳನ್ನು ತಡೆಯದೇ ಹೋಗಿದ್ದರೆ ಅವಳು ಆ ನೋಟುಗಳನ್ನು ಖಂಡಿತ ಚೂರುಚೂರು ಮಾಡುತ್ತಿದ್ದಳು.

ರಾಜುವಿನ ಎದೆಯ ಮೇಲೆ ತನ್ನ ತಲೆಯನ್ನಿಟ್ಟು ತನ್ನ ಕೋಪವನ್ನೆಲ್ಲಾ ಕಣ್ಣೀರಾಗಿ ಹರಿಸಿ, ನಾಗು ತಣ್ಣಗಾದಳು. ರಾಜು ಅವಳ ಕಣ್ಣೀರನ್ನೊರಸಿ ಅವಳನ್ನು ಕನ್ನಡಿಯ ಮುಂದೆ ನಿಲ್ಲಿಸಿ ನಗಿಸಿದನು. "ನಿನ್ನ ಹೆಸರು ಅಳು ಎಂದಲ್ಲ, ನಗು, ಅಂತಲ್ವೇನೆ?" ಎಂದನು. 'ಗಂಡ ಹೆಂಡಿರ ಜಗಳದ ಗಾದೆಗೆ' ಸರಿಹೋಯಿತು.

"ಜೀವರಾಶಿಗಳಲ್ಲೀ ಇದೆಲ್ಲ ಸಾಮಾನ್ಯ. ಅಂತೂ ನಾಗು ಮೈಸೂರು ವಾಸಕ್ಕೆ ಸರಿಹೊಂದಿಕೊಂಡಳು. ಅಲ್ಪ ಸ್ವಲ್ಪ ಇದ್ದ ಗ್ರಾಮ್ಯವೂ ಅವಳ ಮಾತಿನಿಂದ ದೂರವಾಗ ತೊಡಗಿತು. ರಾಜುವಿನ ಕನಸುಗಳೆಲ್ಲ ನನಸಾದುವು. ನಾಗುವು ಒಳ್ಳೆಯ ಗೃಹಿಣಿಯಾಗುವಳೆಂಬ ಅವನ ನಂಬಿಕೆ ಸತ್ಯವಾಯಿತು.

ಈ ಸಂತೋಷಗಳೆಲ್ಲ ರಾಜುವಿಗೆ ಮಾತ್ರವಲ್ಲ. ಮುದ್ದಪ್ಪನವರನ್ನೂ ನಾಗುವು ಸಂತೋಷಪಡಿಸಿದಳು. ಈಚೆಗೆ ಬಂದ ಮುದ್ದಪ್ಪನವರಿಗೆ ತಮ್ಮ ಮಗಳನ್ನು ನೋಡಿ ತೀರ ಸಂತೋಷವಾಯಿತು. ಹದಿನೆಂಟು ವರ್ಷದ ಹಡುಗಿ ಅವರ ಕಣ್ಣಿಗೆ ಇಪ್ಪತ್ತು ಇಪ್ಪತ್ನಾಲ್ಕು–ವರ್ಷದವಳಂತೆ ಅವರ ಕಣ್ಣಿಗೆ ಕಂಡಳು. ಆದರೂ ನಾಗುವಿನ ಮೂಗಿನಲ್ಲಿ ಏನೂ ಬದಲಾವಣೆಯಿಲ್ಲ. ಮುದ್ದಪ್ಪನವರ ಮೂಗಿನ ಅಚ್ಚಿನಂತಿತ್ತು, ನಾಗುವಿನ ಮೂಗು. ಅದನ್ನು ಯಾರಾದರೂ ಗಮನಿಸಿ ಹೇಳಿದರೆ ಮುದ್ದಪ್ಪನವರಿಗೆ ತುಂಬಾ ಸಂತೋಷ. ನಾಗುವಿನ ಮಿಕ್ಕೆಲ್ಲ ಅವಯವಗಳೂ ತಮ್ಮ 'ಪುಟ್ಟನಂಜಿ'ಯ ಹಾಗೆ ಎಂದು, ಅಂಥವರಿಗೆ ಮುದ್ದಪ್ಪನವರು ತಿಳಿಸುವುದನ್ನು ಮರೆಯುತ್ತಿರಲಿಲ್ಲ.

ಇನ್ನು ನಾಗುವಿಗೆ ಮನೆಗೆಲಸಗಳಲ್ಲಿ ಏನೇನೂ ತೊಡಕಿಲ್ಲ ಇನ್ನಾದರೂ ತನ್ನತ್ತೆಗೆ ಕೈಬಿಡುವು ಕೊಡಬಹುದಲ್ಲಾ ಎನ್ನುವ ತೃಪ್ತಿ ನಾಗುವಿ

ನಲ್ಲಿ ಮುಗಿದಿತು. ನಾಗುವು ಈ ಎಂಟು ತಿಂಗಳಲ್ಲಿ ಸಂಸಾರದಲ್ಲಿ ನುರಿತಳು. ಅವಳಿಗೆ ಮೈಸೂರು ಹಿಡಿಸಿತು. ಮೂರನೇ ದಿನದಿಂದ ಮನೆಯ ಸಂಪೂರ್ಣ ಜವಾಬ್ದಾರಿಯು ನಾಗುವಿಗೆ ದೊರೆಯಿತು. ಅವರತ್ತೆಗೆ ಊಟ, ಶಿವಪೂಜೆ ಗಳ ಜೊತೆಗೆ ಬೇಜಾರನ್ನು ಬಿಟ್ಟರೆ ಮತ್ತೇನೂ ಇರಲಿಲ್ಲ. ನಾಗುವಿಗೆ ಬೇಜಾರಿರಲಿಲ್ಲ. ಏಕೆಂದರೆ ಅವಳ ಮನರಂಜನೆಗೆ ಮನೆಗೆಲಸ, ರಾಜುವಿನ ಮುದ್ದು, ಜೊತೆಗೆ ಸರಸ್ವತಿಯ ಗೆಳೆತನ, ಎಂದು ಮೂರು ದಾರಿಗಳಿದ್ದುವು.

ಈ ಸರಸ್ವತಿ, ನೆರೆಮನೆಯ ಬ್ರಾಹ್ಮಣರ ಮಗಳು. ಪರಸ್ಪರ ಅಗತ್ಯ ದಿಂದಲೇ ಇವರಿಬ್ಬರೂ ಗೆಳತಿಯರಾದುದು. ಅವರಿಬ್ಬರ ಗೆಳೆತನ ಮೊದ ಲಾದುದು ಕರಿಬೇವಿನ ಸೊಪ್ಪಿನಿಂದ. ನಾಗುವಿನ ಮನೆಯ ಬಟ್ಟೆಯೊಗೆ ಯುವ ಕಲ್ಲಿನ ಪಕ್ಕದಲ್ಲಿ ಒಂದು ತುಂಬಿದ ಕರಿಬೇವಿನ ಗಿಡವಿದೆ. ಬ್ರಾಹ್ಮಣ ರಿಗೆ ಇದರ ಅಗತ್ಯ ಹೆಚ್ಚು. ಸರಸ್ವತಿ, ರಾಜುವಿನ ಸಂಸಾರ ಮೈಸೂರಿಗೆ ಬಂದಮೇಲೆ ಪ್ರತಿದಿನ ಬೆಳಗ್ಗೆ ಆ ಮನೆಗೆ ಬರದೇ ವಿಧಿಯೇ ಇರಲಿಲ್ಲ. ಪದೇಪದೇ ಮುಖದರ್ಶನವು ಪರಿಚಯವಾಗಿ, ಪರಿಚಯವು ಸ್ನೇಹವಾಗುವುದು ಸ್ವತಸ್ಸಿದ್ಧ. ಅದರಲ್ಲೂ, ಎರಡು ಮನಸ್ಸುಗಳು ಒಗ್ಗಿಬಿಟ್ಟರೆ ತೀರಿತು. ಆದರೆ ಇಷ್ಟೇ ಅಲ್ಲದೆ ನಾಗು ಸರಸ್ವತಿಯರ ಸ್ನೇಹ ಮತ್ತೂ ಒಂದು ಹೆಜ್ಜೆ ಮುಂದಿತ್ತು. ಅವರಿಬ್ಬರೂ ಸಮ ರೂಪವತಿಯರು. ಆದರಿಂದ ಅವರಲ್ಲಿರಬಹುದಾದ ಹೊಟ್ಟೆಕಿಚ್ಚಿಗೂ ಅವಕಾಶವಿರಲಿಲ್ಲ. ಆದರೂ ಸರಸ್ವತಿಗೆ ಒಂದೇ ಸಿಟ್ಟು. ನಾಗು, ಮೈಸೂರಿಗೆ ಬಂದು ಹತ್ತಿರ ಹತ್ತಿರ ಒಂದು ವರ್ಷಗಳಾದರೂ ಒಂದು ದಿನವೂ ಮನೆ ಬಿಟ್ಟು ಈಚೆಗೆ ಬರದಿದ್ದುದೇ ಅದಕ್ಕೆ ಕಾರಣ. ಅವರಿಬ್ಬ ರಿಗೂ ಈ ವಿಷಯದಲ್ಲಿ ಒಂದು ದಿನ ಭಾರಿ ಭಾರಿ ಜಗಳವಾಗಿಹೋಯಿತು.

"ನಾಗಮ್ಮ, ನಿಮಗೆ ತುಂಬಾ ಜಂಭ ಕಣ್ರಿ. ನಮಗೆ ನಿಮ್ಮಷ್ಟು ಅನು ಕೂಲ ಇಲ್ದೇ ಇದ್ದ ಮಾತ್ರಕ್ಕೆ ನಿಮ್ಮಷ್ಟು ಪ್ರೀತಿಯೂ ಇರಬಾರದೇನ್ರಿ? ನೀವು ಬಂದ ಎರಡನೇ ತಿಂಗಳಿಂದಲೇ ನಿಮ್ಮನೆಗೆ ಅಲೆಯೋದಕ್ಕೆ ಷುರು ಮಾಡಿದೆ ನಾನು. ನೀವು ಒಂದಿನವಾದರೂ ನಮ್ಮನೆ ಬಾಗಿಲು ನೋಡೀದಿರಾ?" ಬಿಡ್ರಿ ಎಂದಳು ಸರಸ್ವತಿ.

ನಾಗುವಿಗೆ, ಅವಳಿಗೆ ಸಮಾಧಾನ ಹೇಳುವುದಕ್ಕೆ ಮಾತುಗಳೇ ಒದಗ ಲಿಲ್ಲ. ಪಲುಕೂರಿನ ಚಂದಣ್ಣನ ಅಕ್ಕ ನೀಲಮ್ಮ ಅಥವಾ ಸೆಜ್ಜೆಯ

ಸುಬ್ಬಪ್ಪನ ಸೊಸೆ ಮರಮ್ಮನೊಡನೆ ಮಾತಿಗೆ ಮಾತು ಜೋಡಿಸಿ ಬಿಡುತ್ತಿದ್ದಳು. ಆದರೆ ನಾಗುವಿಗೆ ಬ್ರಾಹ್ಮಣರಲ್ಲಿ ಒಂದು ತರಹ ಭಯ ಭಕ್ತಿ. ಅವರು ತಮಗಿಂತ ಅರಿತವರು ಎಂಬುದು ಅವಳ ನಂಬಿಕೆ. ಆದುದರಿಂದ ಸರಸ್ವತಿಯು ಮಾತಿಗೆ ಅವಳು ಒಂದೊಂದು ಬಾರಿ ಉತ್ತರವನ್ನೇ ಕೊಡುತ್ತಿರಲಿಲ್ಲ. ಆದರೆ ಸರಸ್ವತಿ ಈ ಹೊತ್ತು ಸುಮ್ಮನಿರುವಹಾಗಿರಲಿಲ್ಲ.

"ಏನ್ರೀ ಸುಮ್ಮನಿದ್ದುಬಿಟ್ರಿ? ಇಂಥಾ ವಿಷಯಕ್ಕೆಲ್ಲಾ ನಿಮಗೆ ಯಾವಾಗಲೂ ಅಸಡ್ಡೆಯೇ" ಎಂದಳು ಪುನಃ ಸರಸ್ವತಿ. ನಾಗು ಹೆದರುತ್ತಾ "ಹಂಗಲ್ಲ ಸರಸಮ್ಮ. ನಮ್ಮ ಜನದಲ್ಲಿ ಹತ್ತುವರ್ಷದ ಮೇಲೆ ಹೆಣ್ಣುಮಕ್ಕಳು ಮನೆಯಿಂದ ಹೊರಕ್ಕೆ ಬರೋ ಅಭ್ಯಾಸವೇ ಇಲ್ಲವಲ್ಲ" ಅಂದಳು.

ಸರಸ್ವತಿಗೆ ಇದು ಕೊಂಚ ಒರಟಾಗಿ ತೋರಿರಬೇಕು. "ಅಯ್ಯೋ ಬಿಡ್ರಿ ಕಂಡಿದೀನಿ. ಮುಖ್ಯ, ಉದಾಸೀನ. ಅದಕ್ಕೆ ಸಂಪ್ರದಾಯಗಳ ನೆವ ಯಾಕೆ" ಅಂದಳು.

ನಾಗುವಿನ ಮನಸ್ಸಿಗೆ ನೋವಾಯಿತು. "ಅಲ್ಲಮ್ಮ—ಇಷ್ಟು ದಿನಗಳಾದ ಮೇಲೂ ನನ್ನನ್ನ ಕೆಟ್ಟವಳೂ ಅಂತ್ಲೇ ತಿಳ್ಕೊಂಡಿದೀರಲ್ಲ ಹೇಳಿ. ನನಗೆ ಅದು ಅಭ್ಯಾಸವಿಲ್ಲ ಅಷ್ಟೆ" ಎಂದಳು.

ಸರಸ್ವತಿ, "ಓ! ಹಾಗಾದರೆ ನಮ್ಮ ಈ ಅಭ್ಯಾಸ ಕೆಟ್ಟದ್ದು ಅಂತ ಆಯ್ತು!" ಅಂದಳು.

ನಾಗು, "ನಿಮ್ಮದೂ ಅಂದ್ರೆ!" ಅಂದಳು.

ಅದಕ್ಕೆ ಸರಸ್ವತಿ "ನಮ್ಮದೂ ಅಂದ್ರೆ—ನಿಮ್ಮ ಮನೆ ಬಾಗಿಲಿಗೆ ದಿನಾ ನಾಚಿಕೆ ಇಲ್ಲದೇ ಬರೋದು ಅಂತ" ಎಂದು ಕೊಂಚ ಗಡುಸಾಗಿಯೇ ಅಂದಳು.

ನಾಗು ಬೆರಗಾದಳು. "ಅಯ್ಯೋ ಏನೋ ತಿಳ್ಕೊಂಡ್ಬಿಟ್ರಿ—ಹಂಗಲ್ಲಾಂದ್ರೆ!" ಎಂದಳು. ನಾಗುವು ನೈಜವಾಗಿ ಆ ಮಾತು ಆಡಿದ್ದರೂ ಸರಸ್ವತಿಯ ಕಿವಿಗೆ ಅದು ಕೃತಕವಾಗಿ ಕೇಳಿಸಿತು. ಸರಸ್ವತಿ ಸರ್ರನೆ ಎದ್ದು ನಿಂತುಕೊಂಡಳು. ನಾಗು ದಯಾರ್ದ್ರ ದೃಷ್ಟಿಯಿಂದ ತನ್ನ ಬಟ್ಟಲುಗಣ್ಣನ್ನೆತ್ತಿ ಸರಸ್ವತಿಯನ್ನೇ ನೋಡುತ್ತಿದ್ದಳು. ಸರಸ್ವತಿ ತುಂಬುಧ್ವನಿಯಲ್ಲಿ "ನಮ್ಮದೇ ತಪ್ಪಮ್ಮಾ" ಎಂದವಳೇ ನಿಧಾನವಾಗಿ ಬಾಗಿಲಿನಿಂದಾಚೆಗೆ ಕಾಲಿಟ್ಟುಬಿಟ್ಟಳು. ನಾಗುವು ಮಂಕಾದಳು.

ಎರಡು ಕಡೆಯೂ ನ್ಯಾಯವಿರುವ ಕೆಲವು ಜಗಳಗಳೂ ಉಂಟು. ನಾಗು–ಸರಸ್ವತಿಯರ ಜಗಳ ಈ ಜಾತಿಯದು. ನಾಗುವಿಗೆ ತಾನು ಮಿತಿ ಮೀರಿ ಮಾತನಾಡಲಿಲ್ಲವೆಂಬ ಧೈರ್ಯ. ಸರಸ್ವತಿಗೆ ನಾಗಮ್ಮನಿಗೆ ತಾತ್ಸಾರ ವೆಂಬ ಭಾವನೆ. ಆದರೆ ರಾಜುವು ಈ ಜಗಳ ಹೆಚ್ಚುವುದಕ್ಕೆ ಅವಕಾಶ ಕೊಡಲಿಲ್ಲ.

ರಾತ್ರಿಯೇ ರಾಜು, ನಾಗುವು ಸಪ್ಪೆಯಾಗಿರುವುದನ್ನು ಕಂಡು "ಅಲ್ಲ ನಾಗು, ನಾನು ಆಫೀಸಿಗೆ ಹೋದಮೇಲೆ ಮನೆಯಲ್ಲಿ ಬೇಜಾರುಗುತ್ತದೆಯೋ ಅಥವಾ ಸಂತೋಷವಾಗುತ್ತದೆಯೋ?" ಎಂದು ಕೇಳಿದನು. ನಾಗು ನಿಧಾನ ವಾಗಿ "ನೀವು ಮನೆ ಬಿಟ್ಟ ತಕ್ಷಣವೇ ಸಂತೋಷ, ಬಂದು ಪಂಚಾಯಿತಿ ಮಾಡುತ್ತ ಕುಳಿತುಕೊಳ್ಳುತ್ತೆ" ಅಂದಳು.

ರಾಜುವು ನಕ್ಕು, "ಹೋಗ್ಲೀ, ನೀನು ಹೇಗೆ ಹೊತ್ತು ಕಳೀತೀಯೆ?" ಎಂದು ಕೇಳಿದನು.

ನಾಗುವು, "ಅದೇ ಯೋಚನೆ. ಇನ್ನುಮೇಲೆ ಹೇಗೆ ಹೊತ್ತು ಕಳೆ ಯೋದು ಅನ್ನೋದೇ ಪ್ರಶ್ನೆ" ಅಂದಳು.

ರಾಜು, "ಇನ್ಮೇಲೇ ಅಂದ್ರೆ!-ಇದುವರ್ಗೂ ಹೇಗೆ ಕಳೀತಿದ್ಯೋ ಹಾಗ್ತಾನೇ ಅದೇನು ಈವತ್ತು 'ಇನ್ಮೇಲೆ' ಅನ್ನೋ ಮಾತು?" ಎಂದನು.

ನಾಗು, ತನ್ನ–ಸರಸ್ವತಿಯ ಸ್ನೇಹ, ಕಡೆಗೆ ಈ ದಿನದ ಜಗಳ, ಎಲ್ಲ ವನ್ನೂ ಹೇಳಿದಳು. ನಾಗುವು ಇನ್ನೇನು ಅಳುವುದರಲ್ಲಿದ್ದಳು. ಅಷ್ಟರಲ್ಲೇ ರಾಜುವು ನಗಲು ಮೊದಲಿಟ್ಟನು. ಅವನ ನಗುವು ನಿಲ್ಲುವ ಹೊತ್ತಿಗೆ ಅವನಿ ಗೊಂದು ಯೋಚನೆ ಬಂತು. 'ನಿಜ! ನಾಗು ಮೈಸೂರಿಗೆ ಬಂದ ದಿನವೇ ಮೈಸೂರನ್ನು ನೋಡಿದ್ದು. ಪುನಃ ಅವಳು ರಸ್ತೆಗೆ ಕಾಲಿಟ್ಟೇ ಇಲ್ಲ' ಎಂದುಕೊಂಡನು. ಬಾಗಿಲಿಗೆ, ಬೆಳಗಿನ ಝಾಮದಲ್ಲಿ ನೀರು ಹಾಕಿ 'ರಂಗೋಲೆ ಹಾಕುತ್ತಿದ್ದವರೂ ತಮ್ಮ ಅಮ್ಮನೇ ಎನ್ನುವುದು ಅವನ ನೆನಪಿಗೆ ಬಂದಿತು. ತಾನು ನಾಗುವಿನ ವಿಷಯದಲ್ಲಿ ತುಂಬಾ ಸ್ವಾರ್ಥಿ, ಎಂದನು.

ತಕ್ಷಣ ನಾಗುವಿನ ಭುಜ ಹಿಡಿದು ತಿರುಗಿಸಿ "ಹೋಗು, ನಾನು ಬಾಗಿ ಲಲ್ಲಿ ನಿಂತಿರ್ತೀನಿ. ನಿನ್ನ ಸ್ನೇಹಿತೀನಾ ಕೂಗಿ, ನಾಳೆ ಮನೆಗೆ ಬನ್ನಿ, ಅಂದು ಕರೆದು ಬಾ" ಎಂದನು. ನಾಗುವು ಸುಲಭವಾಗಿ ಒಪ್ಪುವಳೇ? ಅವಳನ್ನು

ಒಪ್ಪಿಸುವುದು ರಾತ್ರಿ ಒಂಭತ್ತು ಘಂಟೆಯಾಯಿತು. ದೀಪವು ಕಣ್ಣು ಮಿಟು ಕಿಸಿದಾಗ ಅವಳನ್ನು ರಾಜುವು ಮನೆಯ ತಲೆಬಾಗಿಲಿನಿಂದಾಚೆಗೆ ಒತ್ತಾಯ ದಿಂದ ತಳ್ಳುತ್ತಿದ್ದನು. ರಾಜುವಿನ ತಾಯಿ ಬಹುಶಃ ಅಡಿಗೆ ಮನೆಯಲ್ಲಿ ನಿದ್ದೆ ಹೋಗಿದ್ದಿರಬಹುದು. ನಾಗುವು ಕಡೆಗೆ, ಅಂಜುತ್ತಾ ರಸ್ತೆಗೆ ಕಾಲಿಟ್ಟಳು. ಅವಳ ನಡಗೆ, ಹೊರವಾಗಿ, ಬೆಳೆದ ಗೋಧಿಯ ಹೊಲದಲ್ಲಿ ಕಾಲಿಡುವ ಮೊಲ ದಂತೆ, ಅಳುಕುತ್ತಾ ಜರುಗುತ್ತಿತ್ತು. ಕಡೆಗೆ ಸರಸ್ವತಿಯ ಮನೆಯ ಬಾಗಿ ಲಿಗೆ ರಾಜುವನ್ನು ನೋಡುತ್ತ ನೋಡುತ್ತಾ ನಾಗುವು ಬಂದು ನಿಂತಳು. ರಾಜುವಿನ ಒತ್ತಾಯದ ಸನ್ನೆಯಿಂದ 'ಸರಸಮ್ಮಾ' ಎಂದು ಕೂಗಿದಳು. ನಾಗು ವಿನ ಧ್ವನಿ ಸರಸ್ವತಿಗೆ ತಿಳಿಯದೇ? ಅವಳು ಹೊರಕ್ಕೆ ಹಾರಿ ಬಂದಳು. ಅವ ತ್ತಿನ ಮಾರನೆಯ ದಿನ ರಾಜುವಿನ ಅಪ್ಪಣೆ, ಸರಸ್ವತಿಯ ಮಮತೆಯ ಮೇರೆಗೆ ನಾಗುವು ಸರಸ್ವತಿಯ ಮನೆಯ ಅರಿಶಿನ ಕುಂಕುಮ ಧರಿಸಿ ಬಂದಳು.

ಅಂದಿನಿಂದ ರಾಜುವು ನಾಗುವಿಗೆ ಕಸೂತಿದಾರ ತಂದುಕೊಡಬೇಕಾ ಯಿತು. ಅದಕ್ಕೋಸ್ಕರ ನಾಗುವನ್ನೂ ತನ್ನ ತಾಯಿಯನ್ನೂ ಎರಡು ಸಂಜೆ ಪೇಟೆಯ ಕಡೆಗೂ ಕರೆದುಕೊಂಡು ಹೋಗಿದ್ದನು. ನಾಗುವಿಗೆ ಆಶ್ಚರ್ಯದ ಮೇಲೆ ಆಶ್ಚರ್ಯ. ಅದನ್ನು ಮತ್ತಷ್ಟು ಹೆಚ್ಚಿಸುವುದಕ್ಕೋ ಏನೋ ಒಂದು ದಿನ ನಾಗುವನ್ನು, ಚಾಮುಂಡೀಬೆಟ್ಟಕ್ಕೆ ಕರೆದುಕೊಂಡು ಹೋಗುವುದಾಗಿಯೂ ರಾಜುವು ತೀರ್ಮಾನಿಸಿದನು.

ನಾಳೆ ಶುಕ್ರವಾರ ಬೆಟ್ಟಕ್ಕೆ ಹೊರಡುವುದೆಂದಾಯಿತು. ಈ ಅದ್ಭುತ ಸಮಾಚಾರವನ್ನು ನಾಗು, ಸರಸ್ವತಿಗೆ ಮುಟ್ಟಿಸಿದಳು. ಸರಸ್ವತಿ ಅದನ್ನು ಸರ್ವೇಸಾಮಾನ್ಯವೆಂದು ಉಪೇಕ್ಷೆ ಮಾಡಿದಳು. ನಾಗು ಮುನಿಸಿಕೊಳ್ಳ ಲಿಲ್ಲ. ಏಕೆಂದರೆ ಈಗವರಿಬ್ಬರೂ ಏಕವಚನದಲ್ಲಿ ಮಾತನಾಡಿಸುವ ಗೆಳತಿ ಯರು. ಒಮ್ಮೊಮ್ಮೆ ಅವರಿಬ್ಬರೂ ತಮಾಷೆಗೆಂದೇ ಒಬ್ಬರ ಮಾನವನ್ನು ಇನ್ನೊಬ್ಬರು ಕಳೆಯುವುದುಂಟು.

ಆದರೆ ಯಾವುದಕ್ಕೂ ಸಮಯ ಬರಬೇಡವೇ? ನಾಳೆ ಬೆಟ್ಟಕ್ಕೆ ಹೊರಡುವುದನ್ನು ಇವತ್ತೇ, ಸೆಜ್ಜೆಯಿಂದ ಸೋಮಣ್ಣನು ಬಂದು ನಿಲ್ಲಿಸಿ ಬಿಟ್ಟನು. ಸಾಯಂಕಾಲ ಆಫೀಸಿನಿಂದ ಹಿಂತಿರುಗಿ ಬಂದ ರಾಜುವು ಸೋಮ

ಣ್ಣನ ಆಗಮನಕ್ಕಾಗಿ ಆಶ್ಚರ್ಯಪಟ್ಟು 'ಎಷ್ಟುಹೊತ್ತಿನಲ್ಲಿ ಬಂದೆ ಸೋಮು?' ಎಂದನು. ಸೋಮು ತಗ್ಗಿಸಿದ ತಲೆಯಲ್ಲೇ 'ಸಂಜೆ' ಎಂದನು.

"ಏನು ಸಮಾಚಾರ?"

"ಏನೂ ಇಲ್ಲ. ಅಣ್ಣ, ಅಮ್ಮನ್ನ ಕರಕೊಂಡು ಬಂದ್ಬಿಡು ಅಂದ್ರು."

"ಅದೇನು ನೀನು ಬಂದ್ಬಿಟ್ಟೆ!"

"ಒಂದಷ್ಟು ಬಟ್ಟೆ ಒಲೀಸ್ಬೇಕಾಗಿತ್ತು. ಎರಡೊಂದು ಕೆಲಸ ಅಂತ ನನ್ನೇ ಕಳಿಸಿದ್ರು."

"ಹೂ. ಇರು ನಾಲ್ಕು ದಿನ ಇಲ್ಲೇ, ಈಗೇನು, ಆಮೇಲೆ ಹೋದ ರಾಯಿತು ಬಟ್ಟೇಗಿಟ್ಟೆ ಎಲ್ಲ 'ರಡೀ' ಮಾಡ್ಕೊಂಡು."

ಸೋಮಣ್ಣ ಮಾತನಾಡಲಿಲ್ಲ. ಅವನು ಲಕ್ಷ್ಮಣನಂತಹ ಮನುಷ್ಯ. ಅಣ್ಣನ ಮಾತಿಗೆ ಎದುರೇ ಇಲ್ಲ. ಆ ನಾಲ್ಕು ದಿನ ಸೋಮಣ್ಣನೂ ವೈಸೂರನ್ನೆಲ್ಲಾ ಅಲೆದಾಡಿದನು. ಅನಂತರ ಪ್ರಯಾಣಕ್ಕೆ ಸಿದ್ಧನಾದನು. ರಾಜು, ತನ್ನ ತಮ್ಮ ಮತ್ತು ತಾಯಿಯರ ಪ್ರಯಾಣಕ್ಕೆ ಸಕಲ ಸಿದ್ಧತೆಗಳನ್ನೂ ಮಾಡಿದ್ದನು.

ನಾಗುವನ್ನು ಅವರತ್ತೆ ಮನಸ್ಸು ತುಂಬಾ ಹರಸಿದರು. ರಾಜುವಿಗೆ ತುಂಬಾ ಬುದ್ಧಿ ಹೇಳಿದರು. ನಾಗು-ರಾಜುಗಳು ಅಕ್ಕಪಕ್ಕದಲ್ಲಿ ನಿಂತಿದ್ದಾಗ, ಸೋಮಣ್ಣನಿಗೆ ಅವರಿಬ್ಬರ ಕಾಲಿಗೂ ನಮಸ್ಕರಿಸಬೇಕೆನ್ನಿಸಿತು. ಆದರೆ ರಾಜುವು ಆ ಸಂಪ್ರದಾಯದವನಲ್ಲ; ನಾಗುವು ಸೋಮಣ್ಣನಿಗಿಂತ ಕಿರಿಯವಳು. ಆದುದರಿಂದ ವಿಧಿಯಿಲ್ಲದೆ ಸೋಮಣ್ಣನು ಹಾಗೆಯೇ ಗಾಡಿ ಹತ್ತಿದನು. ಅವರಿಬ್ಬರೂ ಹೊರಟೇಬಿಟ್ಟರು.

ರಾಜು, ನಾಗುವಿನ ಕಡೆಗೆ ತಿರುಗಿ "ಇನ್ನು ನಿನ್ನನ್ನು ಒಂದು ಕಡೆಯಿಂದ ನುಂಗಿಬಿಟ್ಟರೂ ಇಲ್ಲಿ ಯಾರೂ ಕೇಳುವವರಿಲ್ಲ" ಎಂದನು. ನಾಗು ನಕ್ಕಳು.

## ೧೦

ಕಡೆಗೂ ಬೆಟ್ಟಕ್ಕೆ ಹೋಗುವ ದಿನವೊಂದು ಬಂದಿತು. ಬೆಳಗಿನ ಐದು ಗಂಟೆಗೆ ರಾಜುವಿನ ಸ್ನಾನವೇ ಆಗಿಹೋಯಿತು. ಅಷ್ಟು ಹೊತ್ತಿಗೆ ನಾಗು

ಪ್ರಯಾಣಕ್ಕೆ, ಪೂಜೆಗೆ, ಸಿದ್ಧಪಡಿಸಿದಳು. ಅವಳೂ ಶುಭ್ರವಾದ ಬಿಳೀ ಸೀರೆ ಯುಟ್ಟು ಇನ್ನೂ ಒದ್ದೆಯಾದ ತಲೆಯನ್ನು ಹಗುರವಾಗಿ ಗಂಟು ಹಾಕಿ, ತೆಳ್ಳಗೆ ವಿಭೂತಿ ಧರಿಸಿ,ಅದರ ಮೇಲೊಂದು ಹುಣಿಸೆ ಚಿಗುರೆಲೆಯಷ್ಟಗಲದ ಕುಂಕುಮ ವಿಟ್ಟು, ತನ್ನ ಬೆಳುದಿಂಗಳಿಂದ ಮಾಡಿದ ಕೆನ್ನೆಗಳಲ್ಲಿ ಅಸ್ಪಷ್ಟವಾಗಿ ಅರಿಶಿನ ಮೂಡಿಸಿ ನಿಂತಳು. ಹೊತ್ತು ಮೂಡುವ ಮೊದಲೇ ರಾಜು ಮನೆಗೆ ಬೀಗ ಹಾಕಿದನು. ನಾಗುವಿನ ಕೈಲಿದ್ದ ಕೈಚೀಲವನ್ನು ತಾನು ತೆಗೆದುಕೊಂಡು ನಡೆದನು. ನಾಗು ಬಹಳ ಬಿಗುಮಾನದಿಂದ ರಾಜುವಿನ ಹಿಂದೆ ಹೊರಟಳು. ನಾಗುವನ್ನು ತನ್ನ ಸಮಕ್ಕೆ ನಡೆಯಿಸಿಕೊಂಡು ಹೋಗುವ ರಾಜುವಿನ ಆಸೆಗೆ ನಾಗು, ಆಸ್ಪದವನ್ನೇ ಕೊಡಲಿಲ್ಲ.

ಬೆಟ್ಟದ ಪಾದಕ್ಕೆ ಅವರಿಬ್ಬರೂ ತಲಪುವ ಹೊತ್ತಿಗೆ ಮೂಡಲು ಕೆಂಪಾ ಯಿತು. ತಂಗಾಳಿಯು ಬೇಡ ಬೇಡವೆಂದರೂ ಬೀಸುತ್ತಿತ್ತು. ನೂರು ಹಂತ ಗಳಾಚೆಯೇ ಮೋಡವೊಂದು ಹಾದು ಹೋಗುತ್ತಿತ್ತು. ಇಬ್ಬರು ಮೂವರು ಭಿಕ್ಷುಕರು ಹತ್ತಿರದ ಮಂಟಪದಲ್ಲಿ ಇನ್ನೂ ನಿದ್ದೆ ಹೋಗುತ್ತಿದ್ದರು. ದಂಪತಿ ಗಳಿಬ್ಬರೂ ಪಾದಪೂಜೆಯನ್ನು ಮಾಡಿಸಿದರು. ದೊಡ್ಡದೊಂದು ದಾಸವಾಳದ ಹೂವು ನಾಗುವಿನ ಮುಡಿಯನ್ನಲಂಕರಿಸಿತು. ಇಬ್ಬರೂ ಹಂತಕ್ಕೆ ನಮಸ್ಕರಿ ದರು. ಉತ್ಸಾಹದಿಂದ ಹತ್ತಲು ಮೊದಲುಮಾಡಿದರು.

ಇನ್ನೂರನೇ ಮೆಟ್ಟಲಿನ ಹತ್ತಿರ ರಾಜು ನಿಂತು, ಇನ್ನೂ ಹತ್ತು ಹಂತ ಗಳ ಹಿಂದಿದ್ದ ನಾಗುವನ್ನು ತಿರುಗಿ ನೋಡಿದನು. ಆ ಚಳಿಯಲ್ಲೂ ಅವಳ ಕುಂಕುಮವು ಬೆವರಿಂದ ಕರಗಿ ಇಳಿದು ಬೀಳುವುದರಲ್ಲಿತ್ತು. ರಾಜುವು ನಿಧಾನ ಮಾಡಿದನು. ನಾಗು 'ಏನಾದರೂ ಮಾಡಿ ಹತ್ತಿಬಿಟ್ಟರೆ, ಆಮೇಲೆ ಇಳಿಯು ವುದೇನು, ಲೆಕ್ಕವೇ ಇಲ್ಲ' ಎಂದಳು. ರಾಜು, ನಕ್ಕು 'ಈ ಬೆಟ್ಟಗಳ ಸಹವಾಸ ನಿನಗೆ ತಿಳಿಯದು. ಹತ್ತುವಾಗ ಇಳಿಯುವುದು ಸುಲಭ, ಇಳಿಯುವಾಗ ಹತ್ತುವುದು ಸುಲಭವೆನ್ನಿಸುತ್ತದೆ' ಎಂದನು. ನಾಗುವಿಗೆ ಮಾತನಾಡುವ ಚೈತನ್ಯವಿರಲಿಲ್ಲ. ಆದರೂ ಅದನ್ನು ಹೇಳಿಕೊಳ್ಳುವುದಕ್ಕೆ ನಾಚಿಕೆ. ಒಂದು ಬಾರಿ ನಾಗು ನಿಂತುಕೊಂಡಳು. ತಕ್ಷಣ ಹಿಂತಿರುಗಿ, ಕೆಳಗೆ ಹರಡಿದ್ದ ಮೈಸೂರನ್ನು ನೋಡಲಾರಂಭಿಸಿದಳು. ರಾಜು, 'ಇದೇನೇ ನಿನಗಿಂತ ಮುದುಕ ನಾನು, ನೀನೇ ಹಿಂದೆ ಬಿಳ್ತಾ ಇದೀಯಲ್ಲ, ಎಂದನು. ನಾಗು,

'ಮೈಸೂರು ನೋಡಿ' ಅಂದಳು. ರಾಜು 'ಹ್ಞೂ, ಬೆಟ್ಟ ಹತ್ತುತ್ತಿರುವಾಗ, ಸುಸ್ತಾದವರು ನಿಂತುಕೊಳ್ಳೋಕ್ಕೆ ಒಂದು ನೆವವಾಗಲೀ ಅಂತಲೇ ಮೈಸೂರನ್ನು ಅಲ್ಲಿ ಕಟ್ಟಿಸಿದರು' ಎಂದನು. ಅವನಿಗೂ ಉಸಿರುಕಟ್ಟಿತು.

ಅಂತೂ ಬಹಳ ಕಷ್ಟಪಟ್ಟು ನಾಗು, ಬಸವನನ್ನು ತಲಪಿದಳು. ಅವಳಿಗೆ ತೀರ ಸುಸ್ತಾಗಿಹೋಯಿತು. ಅಲ್ಲೊಂದು ಕಡೆ ಕುಳಿತುಬಿಟ್ಟಳು. ರಾಜು ಎಷ್ಟು ಬಲವಂತಪಡಿಸಿದರೂ ನಾಗು ಏಳಲೇ ಇಲ್ಲ. ಕಡೆಗೆ ನಾಗು, ರಾಜುವಿನ ಬಲವಂತಕ್ಕೋಸ್ಕರ ಎದ್ದಳು. ಆದರೂ ಅವಳಿಗೆ ಇನ್ನೂ ಸ್ವಲ್ಪ ಹೊತ್ತು ಕುಳಿತುಕೊಳ್ಳಬೇಕೆನಿಸಿತು. ಪುನಃ ಕುಳಿತುಕೊಂಡು ಮುಖವನ್ನು ಕೈಯಿಂದ ಮುಚ್ಚಿಕೊಂಡಳು.

ರಾಜು "ಒಳ್ಳೇ ಹುಡುಗಿಯಾದಳಪ್ಪ. ಹೊತ್ತು ಮೂಡಿದಷ್ಟೂ ಬಿಸಿಲಾಗುತ್ತೆ" ಅಂದನು. ನಾಗು, ಅಳುವುದಕ್ಕೆ ಪ್ರಾರಂಭಿಸಿದಳು. ಆ ಅಳುವಿನಲ್ಲಿ ನಗು ಕುಲುಕುತ್ತಿತ್ತು. ರಾಜು ಘಾಬರಿಯಾದನು. "ಅಲಲೆ! ಇದೇನೆ! ನಾಗು............ನಾಗು," ಎಂದನು ನಾಗು ನಾಲ್ಕು ನಿಮಿಷವಾದ ಮೇಲೆ ಸುಧಾರಿಸಿಕೊಂಡು "ನಾನು ನಿಮಗೆ ಸುಳ್ಳು ಹೇಳುತ್ತಾ ಬಂದಿದೀನಿ" ಅಂದಳು. ರಾಜುವಿಗೆ ತಿಳಿಯಲಿಲ್ಲ. "ಸುಳ್ಳು—ನಿಜ ಇದರಲ್ಲೇನು ಬಂತು, ನಾಗು?" ಎಂದನು ನಾಗು ಪುನಃ ಮುಖ ಮುಚ್ಚಿಕೊಂಡಳು. ರಾಜು ಪುನಃ "ಮಾತು ಮಾತಿಗೂ ಅಳ್ತಾರೇನೆ?"................ಹುಚ್ಚೀ ನೀನು, ಅದೇನು, ಅಳದೇ ಹೇಳಬಾರದೇ" ಎಂದನು. ನಾಗುವಿನದು ಅದೇ ಸ್ವರ "ಮೂರು ತಿಂಗಳಿಂದಲೂ ಸುಳ್ಳು ಹೇಳುತ್ತಾ ಬಂದಿದೀನಿ."

"ಅದೇನೆ, ಸುಳ್ಳು ಸುಳ್ಳು ಅಂದರೆ? ಬೆಟ್ಟಕ್ಕೆ ಹತ್ತುವಾಗ ಬಸವನ ಹತ್ತಿರ ಕೂತ್ಕೊಂಡು ಸುಳ್ಳು ಹೇಳಿದೆ ಸುಳ್ಳು ಹೇಳಿದೆ, ಅಂತ ಅತ್ರೆ ನಾನೇನು ತಿಳ್ಕೊಳ್ಳೀ ಹೇಳು?"

"ಅಯ್ಯೊ, ನಿಮಗರ್ಥವೇ ಆಗೊಲ್ಲವಲ್ಲ. ಥೂ!"

"ಅದೇನೋ ನಂಗೆ ತಿಳೀದು. ಅದು ಎಷ್ಟೊತ್ತಿಗೆ ನಿನ್ನ ಸುಳ್ಳಿನ ಹುಚ್ಚು ಬಿಡುತ್ತೋ ನೋಡೇ ಬಿಡೋಣ. ನಾನೂ ಕೂತ್ಕೊಂಡುಬಿಡ್ತೀನಿ"

"..................ನಿಮಗೆಲ್ಲಾನು ಹೇಳಬೇಕು. ಅದಕ್ಕೇ ನೋಡಿ ಕಷ್ಟಾ ಸುಖ ತಿಳೀಬೇಕಾದರೆ ಇಲ್ಲ ಗಂಡಗಂಡಸರೇ ಇರಬೇಕು, ಇಲ್ಲ ಹೆಂಗಹೆಂಗಸರೇ ಇರಬೇಕು ಅನ್ನೋದು."

"..................................?"

"ಇನ್ನೂ ನಿಮಗರ್ಥವೇ ಆಗಲಿಲ್ಲ; ಅಥವಾ ನನ್ನ ಬಾಯಲ್ಲೇ ಹೇಳಿಸಿ ನನ್ನನ್ನ ಕೊಲ್ಲಬೇಕೂ ಅಂತ ಮಾಡಿದ್ದೀರೋ ಏನೋ, ಏಳಿ ಹೋಗೋಣ"

"ಇಲ್ಲಾ—ಅದೇನೋ ಹೇಳಿಬಿಡು."

"ಏನೂ ಇಲ್ಲ ಏಳಿ!"

"ನನ್ನ ಹತ್ತಿರವೇ ನೀನು ಗುಟ್ಟು ಮಾಡೋ ಹಾಗಿದ್ರೆ ಇನ್ನು ಬದುಕಿದ ಹಾಗಾಯಿತು"

ತುಂಬು ಗರ್ಭಿಣಿಯಾದ ಒಂದು ಹಸುವು ಅವರಿಬ್ಬರ ಮುಂದೆ, ಹಂತದ ಮೇಲೆ ಪ್ರಯಾಸದಿಂದ ಹಾದು ಹೋಯಿತು. ಅದನ್ನು ನಾಗು ರಾಜುವಿಗೆ ತೋರಿಸಿದಳು. ರಾಜುವಿನ ಕಣ್ಣುಗಳರಳಿದುವು. ತಟ್ಟನೆ ಎದ್ದನು. ಕುಳಿತಿದ್ದ ನಾಗುವನ್ನು ನೋಡಿದನು. ಅವನಿಗೆ ತುಂಬಾ ಕನಿಕರವಾಯಿತು. ನಾಗುವು ಅತ್ತದ್ದು ನಾಚಿಕೆಗಾಗಿ ಎಂದು ತಿಳಿಯಿತು. ಪಾಪ! ಇಷ್ಟು ದಿನವೂ ಅದನ್ನು ಗಂಡನಿಗೆ ಹೇಳಲಾರದೆ ಇದ್ದು, ಬೆಟ್ಟವನ್ನು ಹತ್ತುವಾಗ ಆಗುವ ಆಯಾಸವನ್ನು ತಡೆಯಲಾರದೇ ಮನಸ್ಸಿಲ್ಲದಿದ್ದುದನ್ನು ತಿಳಿಸಿಬಿಟ್ಟಳು. ಅಷ್ಟು ಹೊತ್ತಿಗೆ ಸೂರ್ಯನು ದೂರದಿಂದ ಬೆಳಕು ಚೆಲ್ಲಿದ್ದನು. ನಾಗುವು ಎದ್ದು ನಿಂತಳು. ಅವಳುಬ್ಬಿನ ಕೆನ್ನೆಯ ಮೇಲೆ ಬಿಸಿಲು ಬಿದ್ದಿತು. ರಾಜು ಅವಳನ್ನು ನೋಡಿ "ಕಳ್ಳಿ! ಮುಂಚೆಯೇ ಹೇಳಬಾರದೇ!" ಎಂದನು. ನಾಗುವು ಪಕ್ಕಕ್ಕೆ ತಿರುಗಿ ನಕ್ಕಳು. ನಾಗು ಅವನ ಕಣ್ಣಿಗೆ ಹೇಗೆ ಹೇಗೋ ಕಂಡಳು.

ಅವರಿಬ್ಬರ ಬೆಟ್ಟದ ಜಾತ್ರೆ ಮುಗಿಯಿತು. ಇಬ್ಬರ ಮನಸ್ಸಿನಲ್ಲೂ ಒಂದು ತರಹದ ಸಂಕೋಚ ಮತ್ತು ಸಂತೋಷ. ರಾಜುವಿನ ಕಣ್ಣಿಗೆ ನಾಗುವು ಮಗುವಿನಂತಾದಳು. ನಾಗುವಿನ ಕಣ್ಣಿಗೆ ರಾಜುವು ಒಬ್ಬ ತಂದೆಯಂತೆ ಕಂಡನು. ಈಗ ರಾಜು ಹೊರಗೆ ಹೆಚ್ಚು ಕಾಲವನ್ನು ಕಳೆಯುತ್ತಿರಲಿಲ್ಲ. ಸದಾ ಅವನು ನಾಗುವಿನ ಕಣ್ಣೆದುರಿಗಿರಲು ಸಿದ್ಧನಾಗಿದ್ದನು. ಆದರೆ ಅ

ಆರು ಗಂಟೆಗಳು ಮಾತ್ರ ಸರ್ಕಾರದ ಅಧೀನ; ಇನ್ನುಳಿದ ಹದಿನೆಂಟು ಗಂಟೆಗಳಲ್ಲೂ ಅವನಿಗೆ ಮನೆಯೇ ಬೀಡು.

ರಾಜುವಿಗೆ ಇನ್ನು ನಾಗುವನ್ನು ಬಿಟ್ಟಿರಬೇಕಲ್ಲಾ ಎಂಬ ಯೋಚನೆ ಕಾಡಲಾರಂಭಿಸಿತು. ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಡೋಣವೆನಿಸುವವರೆಗೆ ಆ ಯೋಚನೆಯು ಅವನನ್ನೆಳೆದುಕೊಂಡುಹೋಯಿತು. ನಾಗುವು ಪಲುಕೂರಿಗೆ ಹೊರಟುಹೋದರೆ ಇನ್ನು ಅವಳನ್ನು ಕಾಣುವುದು ನಾಲ್ಕು ತಿಂಗಳಾದರೂ ಆಯಿತೆ. ಅಷ್ಟರೊಳಗೊಂದು ಬಾರಿ ತಾನು ಅಲ್ಲಿಗೆ ಹೋದರೂ ಆಯಿತು, ಇಲ್ಲದಿದ್ದರೂ ಆಯಿತು. ಈ ಆಲೋಚನೆಯು ಅವನ ತಲೆಯನ್ನು ಕೆಡಿಸಿತು.

ನಾಗುವಿಗಂತೂ ಗಂಡನನ್ನು ಬಿಟ್ಟುಹೋಗುವುದು ಸಾಧ್ಯವೇ ಇಲ್ಲವೆನ್ನಿಸಿಬಿಟ್ಟಿತ್ತು. ಅವರ ಊಟ, ತಿಂಡಿ, ನೀರು, ನಿದ್ದೆಗಳ ವಿಷಯವೇ ಅವಳನ್ನು ಹಿಂಸಿಸುತ್ತಿತ್ತು. ಸುಮಾರು ಎರಡು ವರ್ಷಗಳಿಂದಲೂ ಬಿಟ್ಟುಹೋಗಿದ್ದ ಹಾಳು ಹೋಟಲಿನ ವಶಕ್ಕೆ ಅವನ ಯೋಗಕ್ಷೇಮವನ್ನು ಬಿಟ್ಟುಕೊಡುವುದು ನಾಗುವಿಗೆ ಕೊರಳುಕೊಯ್ಯುವಷ್ಟು ಕಷ್ಟದ ಕೆಲಸವಾಗಿತ್ತು. ಆದರೆ ವಿಧಿಯಿಲ್ಲ. ವರ್ತಮಾನ ತಲಪಿದ ಮೂರನೆಯ ತಿಂಗಳೇ ಮುದ್ದಪ್ಪನವರು ಮೈಸೂರಿಗೆ ಓಡಿಬಂದುಬಿಟ್ಟರು. ಏಳನೇ ತಿಂಗಳು ಊರಿನಲ್ಲೇ ತುಂಬಬೇಕೆಂದು ಹಟಹಿಡಿದರು. ರಾಜುವು ನಾಗುವನ್ನು ಬೀಳ್ಕೊಟ್ಟನು.

ಬೀಗದ ಓಡಾಟ ಹೆಚ್ಚಿತು. ಅಂತೆಯೇ ರಾಜುವಿಗೆ ಬೇಸರವು ಹೆಚ್ಚಿತು. ಅವನು ಮನೆಗೆ ಬಂದರೆ ನಾಗುವಿನ ವಿಷಯ ಬಿಟ್ಟು ಒಂದು ಘಳಿಗೆಯೂ ಅವನ ತಲೆಯಲ್ಲಿ ಮಿಕ್ಕ ವಿಷಯಗಳಿಗೆ ಅವಕಾಶವಿರುತ್ತಿರಲಿಲ್ಲ. ಮನೆಯ ಸಾಮಾನುಗಳಲ್ಲೂ ನಾಗುವಿನ ರೂಪು ನಡತೆಗಳೇ ಅವನ ಕಣ್ಣಿಗೆ ಕಟ್ಟುತ್ತಿತ್ತು. ನಾಗುವಿನ ಮೇಲಿನಧಿಕಾರ, ಸದ್ಯಕ್ಕೆ, ನಾಗುವಿನ ಗೈರುಹಾಜರಿಗಾಗಿ ವ್ಯಥೆಪಡುತ್ತಿದ್ದನು. 'ಪರಿಚಯವಾದ ನಾಲ್ಕುವರ್ಷಕ್ಕೇ ಮಾಯ ಹೂಡಿಬಿಟ್ಟೆಯಲ್ಲೇ ಬಜಾರಿ!' ಎಂದುಕೊಂಡನು ಅವನ ಮನಸ್ಸಿನಲ್ಲಿ.

'ವೃತ್ತಾಂತ ಪತ್ರಿಕೆ' 'ವಿಕಟವಿನೋದಿನಿ' ಗಳ ರಾಜ್ಯ ಅವನ ರೂಮಿನಲ್ಲಿ. ಅವನು ಅವುಗಳನ್ನು ಓದುತ್ತಿದ್ದುದು ಅಷ್ಟರಲ್ಲೇ. ಜನಗಳು ಬೇಸರ ಕಳೆಯುವುದಕ್ಕೆ ಇದೇ ಉಪಾಯವೆಂದು ಹೇಳಿ ಅವನನ್ನು ನೋಸಗೊಳಿ

ಸಿದ್ದರು. ಏಕೆಂದರೆ ಅವನ್ನು ಬಿಚ್ಚಿ ಎದುರಿಗೆ ಹಿಡಿದಾಗ ಕಾಣುವ ಎರಡು ಪುಟಗಳಲ್ಲೂ ನಾಗುವಿನ ಚಿತ್ರವೇ ಅವನಿಗೆ ಕಾಣಿಸುತ್ತಿದ್ದುದು. ಕಾಲು ಗಂಟೆಯೊಳಗೆ ಅವನ ತಲೆಕೆಟ್ಟುಹೋಗಿ ಅವನು ಮನೆಯಿಂದ ಹೊರಕ್ಕೆ ಬಂದುಬಿಡುತ್ತಿದ್ದನು.

ಈ ಸಂದರ್ಭದಲ್ಲೇ ಅವನು ಊರುಸುತ್ತುವುದನ್ನು ಕಲಿತುಕೊಂಡದ್ದು. ಆಗ ಅವನ ಪಕ್ಕದಲ್ಲಿರುತ್ತಿದ್ದವನು ಆ ನಾರಣಯ್ಯ. ನಾರಣಯ್ಯನೂ ರಾಜುವಿನ ಆಫೀಸಿನಲ್ಲೇ ಇದ್ದ ಒಬ್ಬ ಗುಲಾಮ. ಅವನೇ ರಾಜುವಿಗೆ ಎರಡನೇ ಮದುವೆಮಾಡಿಸಿ ಪುಣ್ಯಕಟ್ಟಿಕೊಂಡ ಪುರೋಹಿತ. ಅವನು ರಾಜುವಿಗೆ ಕೊಡಿಸಿದ ಹೆಣ್ಣು ಸದಾ ಬಿಳಿಯ ಲಂಗವನ್ನು ಹಾಕಿಕೊಂಡಿರುತ್ತಿದ್ದಳು. ಮುಟ್ಟಿದರೆ ಮುನಿಯುತ್ತಿದ್ದಳು. ಹತ್ತಿಸಿದರೆ ಉರಿಯುವಳು. ಹೊಗೆಯಂತೆ ತೇಲುವಳು. ಎಳೆದ ಕಡೆ ಬರುವಳು. ಬಿಟ್ಟಕಡೆ ಓಡುವಳು. ಎಲ್ಲರಂಗಡಿಯಲ್ಲೂ ಜೋಕಿನಿಂದ ಕುಳಿತಿರುವಳು. ಅವಳು ಪರಂಗಿಯವಳು. ಅವಳ ಹೆಸರು ಗೋಲ್ಡ್‌ಫ್ಲೇಕು.

ರಾಜುವು 'ಗೋಲ್ಡ್‌ಫ್ಲೇಕಿ'ನ ದಾಸನಾಗಿಬಿಟ್ಟನು. ಅದನ್ನು ಅವನಷ್ಟು ದ್ವೇಷಿಸಿದವರಿಲ್ಲ. ಆದರೆ ಅದು ಈಗವನ ಎರಡನೆಯ ನಾಗು. ಸಿಗರೇಟು ಕೊಡುತ್ತಿದ್ದ ಶಾಂತಿಯ ಮಧ್ಯೆ ಅವನು 'ನೀನೇ ನನ್ನ ಎರಡನೆಯ ಹೆಂಡತಿ' ಎಂದದ್ದೂ ಉಂಟು. ಇದನ್ನು ತಿಳಿದ ನಾಗುವೇನೆನ್ನುವಳೊ?

ಈ ಪ್ರಶ್ನೆ ರಾಜುವಿನ ಮನಸ್ಸಿಗೆ ಬಂದ ರಾತ್ರಿಯೇ ನಾಗುವೂ ಕನಸಿನಲ್ಲಿ ಕಂಡಳು. ಆದರೂ ಅವಳು ದೂರದಲ್ಲೇ ನಿಂತಿದ್ದುದನ್ನು ನೋಡಿ 'ಬಾ ನಾಗು' ಎಂದು ಕರೆದನು. ನಾಗುವು ಬರುವುದಿಲ್ಲವೆಂದು ತಲೆಯಾಡಿಸಿದಳು. ರಾಜು ಆಗೊಂದು ಸಿಗರೇಟು ಹಚ್ಚಿದನು. ನಾಗು, 'ನೀವು ಅದನ್ನು ಹಚ್ಚುತ್ತಿಲ್ಲ; ನನ್ನನ್ನು ಹಚ್ಚುತ್ತಿದ್ದೀರಿ' ಎಂದಳು. ರಾಜು 'ಅಯ್ಯೋ ಹುಚ್ಚಿ; ನಿನಗೂ ಸವತಿಮಚ್ಚರವೇನೆ?' ಎಂದನು. ನಾಗು 'ಹ್ಞೂ' ಅಂದಳು. ರಾಜು ಗಹಗಹಿಸಿ ನಕ್ಕು ನಾಗುವನ್ನು ಅಟ್ಟಿಸಿಕೊಂಡು ಹೋದನು. ನಾಗುವು ಅರಮನೆಯೊಳಕ್ಕೆ ಓಡಿದಳು. ರಾಜುವನ್ನು ಹೊರಗೆ ನಿಂತಿದ್ದ 'ಸಿಪಾಯಿಯು ಒಳಕ್ಕೆ ಬಿಡಲಿಲ್ಲ. ರಾಜು, ನಾಗೂ, ನಾಗೂ' ಎಂದು ಕೂಗಿ

ದನು. ಅವನಿಗೆ ಎಚ್ಚರವಾಗಿ ನಾಚಿಕೆಯಾಯಿತು. ಅದು ಅವನ ಬೆಳಗಿನ ಝಾವದ ಕನಸು. ಎದ್ದು ಒಂದು ಸಿಗರೇಟನ್ನು ಹಚ್ಚಿಯೇ ಹಚ್ಚಿದನು.

ನಾಗು ಹೋಗಿ ಆಗಲೇ ಎರಡು ತಿಂಗಳಾಗಿತ್ತು. ಅಷ್ಟುಹೊತ್ತಿಗೆ ಹೆರಿಗೆ ಆಗಿಯೇ ಹೋಗಿರಬೇಕು. ಅಲ್ಲಿ ಯಾರು ಅವಳ ಆರೈಕೆ ಮಾಡು ವವರು? ಸಂಪ್ರದಾಯಕ್ಕೆ ಕಟ್ಟುಬಿದ್ದು ಮಾವಯ್ಯ ಕರೆದುಕೊಂಡು ಹೋದರು ಆದರೆ ಅವರ ಅಕ್ಕನಿಗೆ 'ಬಾಣಂತನ' ಮಾಡುವ ವಯಸ್ಸೆ? ಇಲ್ಲಾ ಬಿದರಟ್ಟೆಯಿಂದ ಯಾರನ್ನಾದರೂ ಕರೆಸಿಕೊಂಡಿದ್ದಾರು. ಆದರೂ ನಾಗುವು ಅಲ್ಲಿ ಸುಖಿಯಾಗಿರಲಾರಳು' ಎಂಬ ಭ್ರಾಂತಿ ರಾಜುವಿನ ತಲೆ ಯಲ್ಲಿ ತುಂಬಿತ್ತು. ಈ ಕನಸು ಬೇರೆ ಅವನ ನಾಗುವನ್ನು ನೋಡುವ ಆಸೆ ಯನ್ನು ಉರುಬಿ ಹೊತ್ತಿಸಿತು. ಕಡೆಗೆ ತಿಂಗಳ ಕೊನೆಯ ಶನಿವಾರವನ್ನು ಸೇರಿಸಿಕೊಂಡಹಾಗೇ ಸೋಮವಾರ ರಜವನ್ನು ತೆಗೆದುಕೊಂಡು ಪಲುಕೂರಿಗೆ ಹೊರಟೇಬಿಟ್ಟನು. ತಾಲ್ಲೋಕಿನಲ್ಲಿ ಒಂದು ಸೈಕಲ್ಲನ್ನು ತೆಗೆದುಕೊಂಡು ಅವನು ಪಲುಕೂರನ್ನು ಸೇರಿದಾಗ ಹೊತ್ತುಬಿದ್ದುಹೋಗಿತ್ತು.

ಹಳ್ಳಿಯ ಮನೆಗಳಲ್ಲಿ ಆಗಲೇ ಒಲೆಗೆ ಬೆಂಕಿಯನ್ನು ಆ ಮನೆಯಿಂದ ಈ ಮನೆಗೆ ತರುತ್ತಿದ್ದರು. ಮಧ್ಯದಾರಿಯಲ್ಲಿ ಬಿದ್ದಿದ್ದ ನಾಯಿಗಳು ರಾಜು ವಿನ ಸೈಕಲ್ಲನ್ನು ಕಂಡು ಕೊಂಚ ರೇಗಿದ್ದು ಪುನಃ ಹಾಗೇ ಬಿದ್ದುಕೊಂಡುವು. ಮಾರಿಗುಡಿಯಲ್ಲಿ ರಾತ್ರಿಯ ಕೂಲಿಮಠವು ತನ್ನ ಕೆಲಸಕ್ಕೆ ಪ್ರಾರಂಭಿಸಿತ್ತು. ಅವನು ಬಸವನಗುಡಿ ಹತ್ತಿರಕ್ಕೆ ಬಂದಾಗಲೇ ಚಂದಣ್ಣ ಎದುರಿಗೆ ಸಿಕ್ಕಿ 'ಬಂದ್ರ್ಯಾ?' ಎಂದನು. ರಾಜುವು 'ಹ್ಞೂ ರಾಜ!' ಎಂದು ಮನೆಕಡೆಗೆ ಬಂದನು. ಅವನ ಸೈಕಲ್ಲನ್ನು ಜಗಲಿಗೆ ಒರಗಿಸುವಾಗಲೇ ಎಳೇ 'ಬೊಮುಟೆ' ಯ ಅಳುವಿನ ಧ್ವನಿ ಕೇಳಿಸಿತು.

ರಾಜುವಿನ ರಾತ್ರಿಯೂಟ ಆದಮೇಲೂ ತನ್ನ ಮಗು ಗಂಡೋ ಹೆಣ್ಣೋ ತಿಳಿಯಲಿಲ್ಲ. ಊಟವಾದ ತಕ್ಷಣ ರೂಮಿಗೆ ಹೊರಟುಹೋಗದೆ ಜಗಲಿಯಲ್ಲೇ ಕುಳಿತನು. ಎದುರುಮನೆಯ ಬಸವಣ್ಣನೇ ಎಲೆ ಅಡಕೆ ತಂದಿಟ್ಟನು ಅವನನ್ನೂ ರಾಜುವು ಕೇಳಲಿಲ್ಲ. ಅವನಿಗೆ ಆಗ ಬಾಯಿ ಮುಚ್ಚಿದ ಸಂಕೋಚ, ಅವನು ಹೋದಮೇಲೆ, ಅಯ್ಯೋ! ಅವನನ್ನು ಕೇಳ ಬೇಕಾಗಿತ್ತು ಎನ್ನಿಸಿತು. ಆದರೆ 'ಮಾವಯ್ಯನೇ ಹೊರಗೆ ಬರಬಹುದು

ಎಂದು ನಂಬಿಕೊಂಡು ಕುಳಿತು ಕುಳಿತು ಸಾಕಾಯಿತು. ಕೈಯಿನ ಗಡಿಯಾರವು ಹತ್ತು ತೋರಿಸಿದರೂ ರಾಜುವಿನ ಅನುಮಾನವು ಬಗೆಹರಿಯುವಂತೆ ಕಾಣ. ಲಿಲ್ಲ. ಬೇಸರದಿಂದ ರೂಮಿನೊಳಕ್ಕೆ ಹೋದನು. ಬಸವಣ್ಣನೇ ಹಾಸಿಗೆ, ದೀಪ, ಎಲ್ಲವನ್ನೂ ಅಣಿಮಾಡಿಟ್ಟು ಹೋಗಿದ್ದನು. ಅದರ ಮೇಲೆ ಮಲಗಿಯೇ ರಾಜು ಒಂದು ಸಿಗರೇಟು ಹಚ್ಚಿದನು.

"ಗಂಡೋ–ಹೆಣ್ಣೋ? ನಾಗುವಿಗೆ ಗಂಡುಮಕ್ಕಳ ಮೇಲೆಯೇ ಪ್ರೀತಿ ಹೆಚ್ಚು. ಗಂಡೇ ಇರಬೇಕು. ಅವತ್ತು ಅವಳೇ ಬಾಯಿಬಿಟ್ಟು 'ಗಂಡೇ ಆಗುವುದು' ಎಂದಿದಾಳೆ. ಆದರೆ ಅವಳು ಸಾಮಾನ್ಯವಾಗಿ ಕುಳಿತಿದ್ದು ಏಳಬೇಕಾದಾಗ ಎಡಗೈ ಊರಿಕೊಂಡು ಮೇಲೇಳುತ್ತಿದ್ದಳಲ್ಲ! ಆ ನಂಬಿಕೆಯ ಪ್ರಕಾರ ಹೆಣ್ಣಾಗಬೇಕಲ್ಲ! ಹ್ಞೂ, ಹೆಣ್ಣೇ ಆಗಲಿ, ಈಗೇನು? ನಾಗುವೇ ಹೆಣ್ಣಾಗದೆ ಗಂಡಾಗಿದ್ದಿದ್ದರೆ ಗತಿಯೇನು? ಆದರೂ ಗಂಡಾದರೆ ಒಳ್ಳೆಯದಪ್ಪ. ಯಾರು ಬಲ್ಲರು? ಎಲಾ! ಒಳಗೆ ನಾಗುವಿದ್ದಾಳೆ. ಅವಳ ಪಕ್ಕದಲ್ಲಿ ಮಗುವಿದೆ. ಅದು ಅಳುತ್ತದೆ. ಅದು ಅತ್ತರೆ ನನಗೆ ಕೇಳಿಸುತ್ತದೆ. ಆದರೆ ಹೆಣ್ಣೋ ಗಂಡೋ ಗೊತ್ತಿಲ್ಲವಲ್ಲ! ಒಂದೇ ಮನೆಯಲ್ಲಿರುವವನಿಗೆ ಈ ವಿಷಯ ತಿಳಿಯದಲ್ಲ—ಹೆಣ್ಣೋ, ಗಂಡೋ? ಸಮಾಚಾರಕ್ಕೆ ಕಾಲಿರುವುದಂತೆ—ಶುದ್ಧ ಸುಳ್ಳು. ಇದ್ದಿದ್ದರೆ ಅದಕ್ಕೆ ಆ ರೂಮಿನಿಂದ ಈ ರೂಮಿಗೆ ಬರುವುದೊಂದು ದುರ್ಗಮವೇ? ಥೂ—ಗಂಡೋ–ಹೆಣ್ಣೋ! ಯಾವುದೋ ಒಂದು. ಗಂಡಾದರೆ ಅಮಲ್ದಾರನಾಗುತ್ತಾನೆ. ಹೆಣ್ಣಾದರೆ ಅಮಲ್ದಾರನ ಹೆಂಡತಿಯಾಗುತ್ತಾಳೆ, ಅಷ್ಟೇತಾನೆ ಅಮಲ್ದಾರನ ಹೆಂಡತಿಗಿಂತ, ಅಮಲ್ದಾರ ಹೆಚ್ಚಲ್ಲವೆ? ಅಂದರೇ........ನಾಗುವಿಗಿಂತ ನಾನು ಹೆಚ್ಚೇ? ಎಂದಿಗೂ ಅಲ್ಲ. ನಾವಿಬ್ಬರೂ ಒಂದೇ ಸಮ. ಹಾಗಿದ್ದಮೇಲೆ ಹೆಣ್ಣಾದರೇನು, ಗಂಡಾದರೇನು? ಸದ್ಯ, ದೇವರು ಇವೆರಡರಲ್ಲಿ ಒಂದನ್ನು ಬಿಟ್ಟು ಇನ್ನೇನನ್ನೂ ಕೊಡುವುದಿಲ್ಲ ತಾನೆ ಎಲ್ಲ ಸರಿ, ಗಂಡೋ....ಹೆಣ್ಣೋ?"

ಇದೇ ಯೋಚನೆಯಾಯಿತು. ಗಂಡು ಮಗುವೇ ಒಂದು ತರಹ, ಹೆಣ್ಣು ಮಗುವೇ ಒಂದು ತರಹ ಅಳಬಾರದೇ ಎನ್ನಿಸುತ್ತಿತ್ತು ರಾಜುವಿಗೆ. 'ಬೆಳಗ್ಗೆ ತಿಳಿಯಲೇ ಬೇಕು' ಎನ್ನುವ ಅವನ ಕಡೆಯ ನಿರ್ಧಾರವು ಅವನ

ಕಣ್ಣಿಗೆ ನಿದ್ದೆಯನ್ನು ತಂದಿತು. ಅವನು ಪುನಃ ಬೆಳಗ್ಗೆ ಎದ್ದು ನೋಡಿ ದಾಗ ಎಂಟೂವರೆ ಗಂಟೆ.

ಅಂದಿನ ಮಧ್ಯಾಹ್ನದ ಊಟವಾದ ಮೇಲೆ ರಾಜುವಿಗೆ ಅವಕಾಶ ಸಿಕ್ಕಿತು. ಮುದ್ದಪ್ಪನವರು ಕಪನಯ್ಯನವರ ಮನೆಯಲ್ಲಿದ್ದರು. ಮುದ್ದಪ್ಪ ನವರ ಅಕ್ಕ ಮತ್ತು ಇನ್ನೊಬ್ಬರ್ಯಾರೋ ಒಬ್ಬರು ಹೆಂಗಸರು, ಇಬ್ಬರೂ ಉದ್ದೇಶಪೂರ್ವಕವಾಗಿಯೇ ಯಾರದೋ ಮನೆಗೆ ಹೋಗಿದ್ದರು. ಹಜಾರವು ಖಾಲಿಬಿದ್ದ ಸುಳಿವನ್ನೇ ನಿರೀಕ್ಷಿಸುತ್ತಿದ್ದ ರಾಜುವು ಮನೆಯೊಳಕ್ಕೆ ನುಗ್ಗಿ ದನು. ಮಗ್ಗುಲ ರೂಮಿನಲ್ಲೇ ನಾಗುವಿನ ಬಿಡಾರ. ಆ ರೂಮಿನ ಬಾಗಿ ಲಲ್ಲಿ ಕಳ್ಳನಂತೆ ಇಣಿಕಿದನು. ಒಳಗೆ ಕತ್ತಲೆಯೋ ಕತ್ತಲೆ 'ನಾಗು........' ಎಂದನು. ನಾಗು 'ಆ್ಞ........ಹಾಹ! ಒಳಕ್ಕೇ ಬಂದುಬಿಟ್ಟಿರ?' ಎಂದಳು. ರಾಜುವಿಗೆ ಸ್ವಲ್ಪಹೊತ್ತು ಆ ಕತ್ತಲೆಯಲ್ಲಿ ನಾಗುವಿನ ತಲೆಯೆತ್ತ ಕಾಲೆತ್ತ ಎನ್ನುವುದೇ ತಿಳಿಯಲಿಲ್ಲ. ಇನ್ನು ಮಗುವು ಸರಿಯಾಗಿ ಕಾಣಬೇಕಾದರೆ ಕಾಲುಗಂಟೆಯೇ ಹಿಡಿಯಿತು. ಕಡೆಗೆ ರಾಜುವು ವಿಧಿಯಿಲ್ಲದೇ 'ಮಗನೋ-ಮಗಳೊ?' ಎಂದನು. ನಾಗು, ತುಂಬಾ ನಾಚಿಕೊಂಡಳು. ರಾಜು 'ಆ ಬಣ್ಣ ನೋಡಿದರೆ ನಿನ್ನ ಹಾಗೇನೇ ಬೆಡಗುಗಾತಿ ಹೆಣ್ಣು, ಅಂತಾ ಕಾಣುತ್ತೆ' ಎಂದನು. ನಾಗು 'ಇಲ್ಲ—ಅದು....ಅವನು!' ಎಂದಳು. ರಾಜುವು 'ಎಲಾ! ನೀನು ಹೇಳಿದ ಹಾಗೇ ಆಯಿತು!' ಎಂದನು. ನಾಗುವು ಆ ಕೂಸನ್ನು ಕೈಗೆ ತೆಗೆದುಕೊಂಡಳು. ಅದು ಅಳತೊಡಗಿತು. ರಾಜು 'ನೋಡಿದೆಯಾ ನಿನ್ನ ಕೈಗೆ ಗಂಡು, ಗಂಡನಾಗಿ ಸಿಕ್ಕಿ ಅತ್ತಾಯಿತು. ಇನ್ನು ಮಗನಾಗಿ ಸಿಕ್ಕಿ ಅಳ್ತಾ ಇದೆ' ಎಂದನು. ನಾಗು 'ಇಬ್ಬರೂ ನನ್ನನ್ನೇ ನಿಷ್ಠುರಮಾಡಿಬಿಡಿ. ಇದಕ್ಕೆಲ್ಲ ನಾನೊಬ್ಬಳೇ ಕಾರಣ ಅಂತೀರಿ?' ಅಂದಳು. ರಾಜುವಿಗೆ ತುಂಬಾ ನಗು ಬಂತು. ಹೊಸ್ತಿಲ ಬಳಿ ಇಟ್ಟಿದ್ದ ಅಡಕೆ ಡಬ್ಬಿದಿಂದ ಒಂದು ಬಟ್ಟಡಕೆ ಯನ್ನು ತೆಗೆದು ನಾಗುವಿನ ಕೆನ್ನೆಗೆ ಗುರಿಕಟ್ಟಿ ಹೊಡೆದನು.

ನಾಗುವಿಗೆ ರಾಜುವು ತುಂಬಾ ಇಳಿದುಹೋದಂತೆ ತೋರಿತು. ಅದ ಲ್ಲದೇ ಅವನ ಅಚ್ಚಕೆಂಪಾದ ತುಟಿಗಳು ಮಂಕಾಗಿ ಹೋಗಿದ್ದುವು. ಅದ ನ್ನೆಲ್ಲಾ ನಿಧಾನವಾಗಿ ವಿಚಾರಿಸಿಕೊಳ್ಳುವುದೆಂದು ಸುಮ್ಮನಾದಳು. ರಾಜುವು ಸೋಮವಾರ ಬೆಳಗ್ಗೆಯೇ ಹೊರಟುಬಿಟ್ಟನು. ಹೋಗುವಾಗ ನಾಗುವೇ

ತನಗೆ ಕೊಟ್ಟಿದ್ದ ರೂಪಾಯಿಗಳನ್ನು ಅವಳಿಗೆ ಕೊಟ್ಟು 'ಮಹಾರಾಯ್ತಿ, ಆರೋಗ್ಯವಾಗಿ ಬಂದು ಮೈಸೂರು ತಲಪು' ಎಂದು ಹೇಳಿ ಹೊರಟುಬಂದನು.

ಅದೂ ವಿಪರೀತ ದಿನಗಳೇನೂ ಆಗಲಿಲ್ಲ. ಎರಡು ತಿಂಗಳಿಗೇ 'ನಾನು ಮೈಸೂರಿಗೆ ಹೋಗಬೇಕು' ಎಂದು ನಾಗುವು ಹಟಹಿಡಿದು ಕುಳಿತಳು. ಊಟ ಮಾಡುವಾಗ ಮೈಸೂರು, ನೀರು ಹಾಕಿಕೊಳ್ಳೆಂದಾಗ ಮೈಸೂರು, ಎಲೆ ಅಡಕೆ ಹಾಕಿಕೊಳ್ಳೆಂದಾಗ ಮೈಸೂರು. ಸದಾ ನಾಗುವಿನ ಬಾಯಿಯಲ್ಲಿ ಮೈಸೂರಿನ ರಾಗವೇ ಬರುತ್ತಿತ್ತು. ಬಾಣಂತಿಯರಿಗೆ ನೀರು ಕಂಡರೆ ಅಮೃತ ವನ್ನು ಕಂಡಹಾಗಂತೆ. ನಾಗು, ಮೈಸೂರಿಗೆ ಕರೆದುಕೊಂಡು ಹೋಗುವೆ ನೆಂದರೆ ಒಂದು ಬಿಂದಿಗೆ ನೀರನ್ನು ತೊಟ್ಟಿಗೆ ಚೆಲ್ಲಿಬಿಡುವುದಕ್ಕೆ ಸಿದ್ಧಳಾಗಿದ್ದಳು.

ಮುದ್ದಪ್ಪನವರು ಪಡಬಾರದ ಕಷ್ಟಗಳನ್ನು ಪಟ್ಟು ನಾಲ್ಕು ತಿಂಗಳು ತುಂಬಿಸಿದರು. ಅದರ ಮೇಲೆ ಸಾಧ್ಯವಾಗಲಿಲ್ಲ. ನಾಗುವು ಅನ್ನ ನೀರು ಬಿಟ್ಟು ಕುಳಿತಳು. ಕಡೆಗೊಂದು ಒಳ್ಳೆಯ ದಿನ ನೋಡಿ 'ಒಳವೊಟ್ಟಿಸಿ' ನಾಗುವನ್ನು ಮೈಸೂರಿಗೆ ಹೊರಡಿಸಿದರು. ಅವರೂ ಅವಳ ಜೊತೆಯಲ್ಲಿ ಮೈಸೂರಿಗೂ ಬರಬೇಕಾಯಿತು. ಮೊದಲೇ ತಿಳಿದಿದ್ದುದರಿಂದ, ರಾಜುವು ಅವರನ್ನು ಬಸ್ಸಿನ ಬಳಿಯಲ್ಲೇ ಸಂಧಿಸಿದನು.

ರಾಜು, ನಾಗುವಿಗೆ ಹೆದರಿಕೊಂಡು ತನ್ನ ರೂಮನ್ನು ಬಹಳ ಎಚ್ಚರಿಕೆ ಯಿಂದ ಗುಡಿಸಿದ್ದನು. ಆದರೂ ಬೀರುವಿನ ಹಿಂದುಗಡೆ ಇದ್ದ ಒಂದು ತುಂಡು ಸಿಗರೇಟು ನಾಗುವಿನ ಕೈಗೆ ಸಿಕ್ಕಿಹೋಯಿತು. ರಾಜು ರೂಮಿನಲ್ಲೇ ಒಂದು ತೊಟ್ಟಿಲು ಕಟ್ಟಿ 'ನಾಗು, ಇದು ನೀನು ಊರಿನಿಂದ ಸಂಪಾದಿಸಿಕೊಂಡು ಬಂದದ್ದನ್ನಿಟ್ಟು ತೂಗುವುದಕ್ಕೆ' ಎಂದನು. ನಾಗು, ಆ ಸಿಗರೇಟಿನ ತುಂಡನ್ನು ತೋರಿಸುತ್ತಾ 'ನಾನು ಊರಿನಿಂದ ಬರುವುದರೊಳಗೆ ನೀವು ಸಂಪಾದಿಸಿರುವ ಇದನ್ನು ತೂಗುವುದಕ್ಕೆ?' ಎಂದು ಕೇಳಿದಳು.

## ೧೧

ನಾಗುವಿನ ಜೊತೆಯಲ್ಲಿ, ಅವಳ ಕೈಬಿಡುವಿಗಿರಲೆಂದು, ಬಿದಿರಟ್ಟಿ ಯಿಂದ ಒಂದು ಹೆಂಗಸನ್ನು ಮುದ್ದಪ್ಪನವರು ಕಳುಹಿಸಿದ್ದರು. ಆದರಿಂದ ನಾಗುವಿಗೆ ತೊಟ್ಟಿಲು ತೂಗುವುದಕ್ಕೆ ವಿರಾಮ ಸಿಕ್ಕುತ್ತಿತ್ತೇ ವಿನಾ ಆ ಕೆಟ್ಟ

ಹುಡುಗ, ಗಂಡಹೆಂಡಿರ ಲಲ್ಲೆಗೆ ಅವಕಾಶವನ್ನೇ ಕೊಡುತ್ತಿರಲಿಲ್ಲ. 'ಅದೇ ಅಭ್ಯಾಸವಾಗುತ್ತದೆ' ಅನ್ನುತ್ತ ಅನ್ನುತ್ತಲೇ ನಾಲ್ಕು ಹಗ್ಗವನ್ನೂ ಹಿಡಿದು ತೂಗಿಸಿಕೊಳ್ಳುವುದು ಅವನಿಗೆ ರೂಢಿಯಾಗಿಹೋಯಿತು.

'ಎಷ್ಟು ಹೊತ್ತಿಗೆ ಅವನು ನಡೆಯುವಹಾಗಾದಾನೆ' ಎನ್ನುವಷ್ಟು ಬೇಸರವಾಗಿಹೋಯಿತು. ನಾಗುವು ಅವನ ಅಳುವಿಗೆ ಹೆದರಿಕೊಳ್ಳುತ್ತಿದ್ದಳು. ಉಗುರುಗಳಿಗೆ ಬೆದರುತ್ತಿದ್ದಳು. ಅವನು ಮಾಡುತ್ತಿದ್ದ ತಪ್ಪುಗಳಿಗೆ-ಶಿಕ್ಷೆಯೂ ಇರುತ್ತಿತ್ತು. ತುಂಬಾ ಚಿಟ್ಟು ಹಿಡಿಸಿದರೆ ನಾಗುವೇ ಒಂದೊಂದು ಪುಟ್ಟ ಏಟನ್ನು ಕೊಟ್ಟು ಬರುತ್ತಿದ್ದಳು. ಅವನ ಆ ಅಳು ತಗ್ಗಬೇಕಾದರೆ ರಾಜುವಿನ ಬಳಿಗೇ ಹೋಗಬೇಕು. ಈ ಏಟು ಗಂಡಹೆಂಡಿರ ಜಗಳಕ್ಕೆ ಕಾರಣ ವಾಗುತ್ತಿದ್ದುದು ಅಸಾಮಾನ್ಯವೇನಲ್ಲ.

ಅವನ ಹೆಸರು ನಂಜಪ್ಪನಂತೆ. ಅದು ಅವನ ಪಲುಕೂರಿನ ಹೆಸರು. ರಾಜುವಿಗೆ ಅದು ಸರಿಹೋಗಲಿಲ್ಲ. ಅವನೊಂದು ಮೈಸೂರು ಹೆಸರಿಟ್ಟನು. ನಾಗುವೂ ಅದನ್ನೊಪ್ಪಿದಳು. ಅದನ್ನು ನಂಜಪ್ಪನೂ ಒಪ್ಪಿರಬೇಕು. ರಾಜು ವಿಟ್ಟ ಹೆಸರು ನಾಗರಾಜು ಎಂದು. ರಾಜು ತನ್ನ ಬುದ್ಧಿಶಕ್ತಿಯನ್ನು ಹೇಳಿಕೊಂಡು ಭುಜ ತಟ್ಟಿಕೊಳ್ಳದೇ ಹೋಗಲಿಲ್ಲ. ನಾಗುವು ಅವನನ್ನು ಅದಕ್ಕಾಗಿ ಹೊಗಳದೆಯೂ ಇರಲಿಲ್ಲ. ಸರಸಮ್ಮನೂ ನಾಗರಾಜು ಎನ್ನುವ ಹೆಸರನ್ನು ಅನುಮೋದಿಸಿದಳು. ನಾಗುವಿಗೆ ಕಡೆಗೆ ತಾವು ಮೈಸೂರಿನವ ರಾದೆವೆಂಬ ಭಾವನೆ ಬಂದುಬಿಟ್ಟಿತು.

ಮುದ್ದಪ್ಪನವರು ಆಗಾಗ್ಗೆ ಮೈಸೂರಿಗೆ ಬಂದಾಗಲೆಲ್ಲ ನಾಗುವಿಗೆ ಈ ಮಾತು ಹೇಳುತ್ತಲೇ ಇದ್ದರು. 'ಏನು ಮೈಸೂರಮ್ಮ! ನೀನು ನಮ್ಮನ್ನು ನಮ್ಮ ಹಳ್ಳಿಯನ್ನೆಲ್ಲಾ ಮರೆತೇ ಬಿಟ್ಟೆ' ಎಂದರು ಆಗ ನಾಗು 'ಮೈಸೂರ್ನವ ರೆಲ್ಲ ಹಳ್ಳಿಯವರೇಪ್ಪಾಜೀ. ಬಟ್ಟೆ ಬದಲಾಯಿಸಿದರೇನು? ಮೈಯಿ ಹಳ್ಳೀದೇ ಅಲ್ವೇ?' ಎನ್ನುವಳು. ಈ ಮಾತು ಅಪ್ಪಮಕ್ಕಳಿಬ್ಬರನ್ನೂ ಸಂತೋಷ ಪಡಿಸುತ್ತಿತ್ತು. ರಾಜುವೀಗ ತನ್ನ ಹೆಂಡತಿ ಸಂಸ್ಕೃತಳೆಂದು ಎದೆತಟ್ಟಿ ಹೇಳಿಕೊಳ್ಳಬಲ್ಲ.

ನಾಗರಾಜು ತಪ್ಪುಹೆಜ್ಜೆ ಹಾಕುವ ದಿನದಿಂದಲೇ ಅವನ ಭವಿಷ್ಯದ ವಿಷಯ ಚರ್ಚೆಗೆ ಬಂತು. ನಾಗು 'ಅವನು ಮೈಸೂರಿನಲ್ಲೇ ಇರುವವನು' ಎಂದಳು. ರಾಜು 'ಉಹ್ಞೂ' ಎಂದನು.

ನಾಗು, "ಅಪ್ಪನ ಹಾಗೆ ಮಗ, ಉಹ್ಞೂ ಅಂದರೆ ಮುಗಿಯಿತೆ. ಅವನಿಗೂ ಸರ್ಕಾರವೇ ಗತಿ" ಅಂದಳು.

ರಾಜು, "ಛೆ ಛೆ! ನಾನು ಕೆಟ್ಟೆ ಅಂದರೆ ನನ್ನ ಮಗನ್ನೂ ಹಾಳುಮಾಡಬೇಕೆ? ಅವನು ಏನೇ ಓದಲಿ, ಏನೇ ಬಿಡಲಿ. ಕಡೆಗೆ ಅವನನ್ನ ಒದ್ದು ಹಳ್ಳಿಗೋಡಿಸುವುದೇ ಸಿದ್ಧ" ಎಂದನು.

ನಾಗು, "ಸಾಕುಸುಮ್ಮನಿರ್ರಿ! ಬರೀ ಆಷಾಢಭೂತಿ ಮಾತಾಡಬೇಡಿ. ನಾಳೆ ಅವನು ಹನ್ನೆರಡು ರೂಪಾಯಿನ ಪರೀಕ್ಷೆ ಮಾಡಿದ ತಕ್ಷಣ ಕೆಲಸಕ್ಕೆ ಸೇರಿಸೋದು ನಾನು ಕಾಣದೆ ಹೋಗ್ತೀನೆಯೆ?" ಅಂದಳು.

ಅಷ್ಟು ಹೊತ್ತಿಗೆ ಕುರ್ಚಿಗೆ ತುಟಿ ತಗುಲಿಸಿಕೊಂಡು, ನಾಗರಾಜು ಅಳುತ್ತಾ ಕುಕ್ಕರಿಸಿದನು. "ಹ್ಞೂ ನೋಡು ಹನ್ನೆರಡು ರೂಪಾಯಿ ಪರೀಕ್ಷೆ ಮಾಡಿದ ನಿನ್ನಮಗ" ಎಂದನು ನಗುತ್ತಾ ರಾಜು.

ಏನಾದರೂ ನಾಗುವಿಗೆ ನಾಗರಾಜು ಹಳ್ಳಿಗೆ ಹೋಗುವುದು ಇಷ್ಟವಿರಲಿಲ್ಲ. ನಾಗರಾಜು ಎಂದರೆ ಅವಳ ರಕ್ತ ಎಂದರ್ಥ. ಅಂಥವನನ್ನು ಹೊಲಕ್ಕೆ ಕಳುಹಿಸುವುದೇ? ಎಂದಿಗೂ ಇಲ್ಲ. ಎಂದುಕೊಂಡಳು. ಸಂಬಳ, ಇನ್ಕ್ರಿಮೆಂಟು, ಗ್ರೇಡು, ಮುಂತಾದ ಮಾತುಗಳಲ್ಲಿ ಮುಳುಗಿ ಉಸಿರು ಕಟ್ಟಿಸಿಕೊಳ್ಳುತ್ತಿದ್ದ ರಾಜುವಿನ ಕಷ್ಟ ಅವಳಿಗೇನು ಗೊತ್ತು, ಅವಳು ಪದೇಪದೇ ಅನ್ನುತ್ತಿದ್ದಳು "ನನ್ನ ನಾಗರಾಜುವನ್ನು ಹಳ್ಳಿಯ ಪಾಲಾಗಗೊಡಿಸುವುದಿಲ್ಲ."

ಅದಕ್ಕೆ ರಾಜು ನಕ್ಕು "ಲೇ, ಸ್ವಲ್ಪ ನಿಧಾನಿಸೇ! ಇನ್ನೂ ನಿನ್ನವರೆಷ್ಟು ಜನ ಇದಾರೆಯೋ ಎಲ್ಲ ಪ್ರಪಂಚಕ್ಕೆ ಬಂದಮೇಲೆ ಹೇಳೋವಂತೆ. ಅವನ ಮೇಲೆ ನಿನಗಿಷ್ಟೇ ವಾತ್ಸಲ್ಯ ಇರತ್ಯೋ ಇಲ್ಲವೋ ಆಮೇಲೆ ನೋಡಿಕೊಳ್ಳೋಣ" ಎನ್ನುತ್ತಿದ್ದನು. ನಾಗು "ನನಗೆ ಇವನೊಬ್ಬನೇ ಸಾಕು" ಎಂದಾಗ ರಾಜು, "ನನಗಿನ್ನೊಬ್ಬಳು ಮಗಳು ಬೇಕಲ್ಲ! ನಾನು ಅದಕ್ಕೆ ಬೇರೆ ಒಂದು ಮದುವೆಮಾಡಿಕೊಳ್ಳಲೇನು?" ಎನ್ನದೇ ಇರುವುದಕ್ಕಾಗುವುದಿಲ್ಲ.

ಕಾಲವು ಅವರಿಬ್ಬರಿಗೆ ಹೀಗೆ ಕಳೆಯುತ್ತಿತ್ತು. ಊರಿನಲ್ಲಿ ಪಾಪ, ಮುದ್ದಪ್ಪನವರಿಗೆ ಕಾಲವೇ ಕಳೆಯುತ್ತಿರಲಿಲ್ಲ. ರಾತ್ರಿಯಾದರೆ ಅವರು ಬೆಳಗ್ಗೆಯನ್ನು ಕಾಯುತ್ತಾ ಕುಳಿತುಕೊಳ್ಳುವರು. ಬೆಳಗಾದರೆ ರಾತ್ರಿಯನ್ನು ಕಾಯುವರು. ಅವರಿಗೆ ಜೀವನದಲ್ಲಿ ಪಡೆಯಬೇಕಾದ ಸಂತೋಷ ಸಮಾಧಾನಗಳೆಲ್ಲ ಮುಗಿದಂತೆಯೇ, ಎನ್ನಿಸುತ್ತಿತ್ತು. ಪದೇ ಪದೇ ಮೈಸೂರಿಗೆ ಹೋಗಿ ಕುಳಿತುಕೊಳ್ಳುವುದು ಚೆನ್ನಾಗಿ ಕಾಣಲಿಲ್ಲ. ತಮ್ಮ ವಂಶೋದ್ಧಾರಕ, ನಾಗರಾಜುವೂ ಮೈಸೂರಿನಲ್ಲೇ ಇದ್ದಾನೆ.

ಹೀಗೇ ಅನ್ಯಮನಸ್ಕರಾಗಿ ಒಂದು ದಿನ ಪಡಸಾಲೆಯ ಮೇಲೆ ಮುದ್ದಪ್ಪನವರು ಕುಳಿತಿದ್ದರು. ಹಳೇ ಹಟ್ಟಿ ಪುಟ್ಟತಾಯಮ್ಮ ಮನೆಗೆ ಏತಕ್ಕೋ ಬಂದಳು. ಅವಳ ಕಂಕುಳಲ್ಲಿದ್ದ ಮಗುವು ಇಳೀಬಿದ್ದಿತು. ಅದನ್ನು ಪಡಸಾಲೆಯ ಮೇಲೆ ಇಳಿಸಿದರು. ಅದು ನಡೆದುಕೊಂಡು ಹೋಗಿ ಮುದ್ದಪ್ಪನವರ ಬೆನ್ನನ್ನು ಮುಟ್ಟಿತು. ತಕ್ಷಣ ಮುದ್ದಪ್ಪನವರು ಎಚ್ಚೆತ್ತುಕೊಂಡು ಆ ಮಗುವನ್ನು ತೋಳಿಗೆ ತೆಗೆದುಕೊಂಡರು. ಆ ಮಗುವು ಅವರ ಮೀಸೆಗೆ ಕೈಹಾಕಿ 'ತ್ತಾತ್ತಾ!' ಎಂದಿತು. ಮುದ್ದಪ್ಪನವರು ಒಂದು ಮುದಿನಗೆಯನ್ನು ನಕ್ಕರು. ಅವರು ಅದರ ಕಣ್ಣಿನಲ್ಲಿ ನಾಗರಾಜುವನ್ನು ಕಂಡರು. ನಾಗರಾಜುವೆಂದುಕೊಂಡು ಅದಕ್ಕೇ ಬಿಗಿಯಾದ ಮುತ್ತು ಕೊಟ್ಟರು. ಇವರ ಮೀಸೆಗೆ ಜೊಲ್ಲು ತುಂಬಿದರೂ, ಅದೇ ಅಳಲು ಮೊದಲಿಟ್ಟಿತು. ಪುಟ್ಟತಾಯಮ್ಮ ತನ್ನ ಕೂಸನ್ನು ಕರೆದುಕೊಂಡಳು. ಮುದ್ದಪ್ಪನವರು ತಾವು ನಾಗರಾಜುವಿಗೆ ಮುತ್ತು ಕೊಟ್ಟರೆ ಅಳುವುದಿಲ್ಲವೆಂದುಕೊಂಡರು. ಎಷ್ಟೇ ಆಗಲಿ ಅವರ ಪದಾರ್ಥ ಅವರಿಗೆ ಹೆಚ್ಚು.

'ಮೈಸೂರಿಂದ ಬಂದು ಇನ್ನೂ ಸರಿಯಾಗಿ ಎರಡು ತಿಂಗಳಾಗಿಲ್ಲ. ಮತ್ತೆ ಓಡಿಹೋಗುವುದೇ, ನೋಡಿದವರು ಏನೆಂದಾರು?' ಎಂದಿತು ಅವರ ಮನಸ್ಸು. ಆದರೆ ನಾಗರಾಜುವನ್ನು ನೋಡಲೇ ಬೇಕೆಂದಿತು ಕಣ್ಣು. ಅವೆರಡರ ಜಗಳದಲ್ಲಿ ಅವರು ಸುಸ್ತಾದರು. ಅವರೂ 'ಅಕ್ಕನನ್ನು ಬಿಟ್ಟು ಓಡಿಓಡಿಹೋಗುವುದು ಸರಿಯಲ್ಲ' ಎಂದುಕೊಂಡರು. ಆದರೆ ಆ 'ತ್ತಾತ್ತಾ' ಎನ್ನುವ ಸ್ವರ ಅವರ ಕಣ್ಣಿನಾಸೆಯನ್ನು ಧಿಗ್ಗನೇಳಿಸುತ್ತಿತ್ತು. ಆದರೆ ಒಂದು ನೆವ ಬೇಡವೇ?

ಅದಕ್ಕೆ ಇಂಥಹ ಭಯಂಕರವಾದ ನೆವ ಸಿಕ್ಕುವುದೆಂದು ಅವರು ಕನಸಿನಲ್ಲೂ ಎಣಿಸಿರಲಿಲ್ಲ. ಅಂದು ಬೆಳಗಿನ ಝಾವಕ್ಕೇ ಕಪನಯ್ಯನವರು ಮನೆಯ ಬಳಿಗೆ ಓಡಿಬಂದು 'ಮುದ್ದಪ್ಪ! ಮುದ್ದಪ್ಪ!' ಎಂದು ಕೂಗಿಕೊಂಡರು. ಮುದ್ದಪ್ಪ ಘಾಬರಿಯಿಂದ ಎದ್ದು ಹೊರಕ್ಕೆ ಬಂದರು. ಕಪನಯ್ಯ 'ಅಯ್ಯಯ್ಯೋ! ಅಯ್ಯೋ........ನಾನು ಕೆಟ್ಟೆ ಮುದ್ದಪ್ಪ....ಮಾದೇವಮ್ಮ ಹೋದಳು........ ಅಯ್ಯೋ!' ಎಂದರು. ಮುದ್ದಪ್ಪನವರಿಗೆ ಜಂಗಾಬಲ ಉಡುಗಿಹೋಯಿತು. "ಹೀಗೆಂದರೇನಣ್ಣ!" ಎಂದು ಗಾಬರಿಯಲ್ಲಿ ಕೇಳಿದರು. ಕಪನಯ್ಯನವರು ನಿಜವಾಗಿ ನಡುಗುತ್ತಿದ್ದರು. 'ಮಹದೇವಮ್ಮ........ಭಾವಿ....ಗೆ....ನಿನ್ನೆ ರಾತ್ರಿ ಬಿದ್ದಳು........ಮುದ್ದಪ್ಪ........ಓಡಿಬನ್ನಪ್ಪ!' ಎಂದರು ಕಪನಯ್ಯನವರು. 'ಹಾ!' ಎಂದುಬಿಟ್ಟು ಅವರಿಗಿಂತ ತಾವೇ ಮುಂಚೆ ಕಪನಯ್ಯನವರ ಮನೆಕಡೆಗೆ ನುಗ್ಗಿದರು ಮುದ್ದಪ್ಪನವರು.

ಆದರೇನು ಎಲ್ಲ ಕೆಲಸ ಮುಗಿದುಹೋಗಿತ್ತು. ಮಹದೇವಮ್ಮನನ್ನು ಎತ್ತಿ ಜಗಲಿಯ ಮೇಲೆ ಹಾಕಿಕೊಂಡಿದ್ದರು. 'ಅಂಗಳ'ಕ್ಕೆ ಜನಗಳನ್ನಟ್ಟಿದ್ದರು. ಯಾರು ಎಷ್ಟೆಷ್ಟು ಅತ್ತರೇನು? ಮಹದೇವಮ್ಮ ಸತ್ತಳು. ಅವಳೇ ಬಿದ್ದಿರುವುದು ಖಂಡಿತ. ಆದರೆ ಕಾರಣ!? ಅದು ಚಂದಣ್ಣನಿಗೊಬ್ಬನಿಗೆ ತಿಳಿದಿರಲು ಸಾಧ್ಯ. ಆದರೆ ಅವನನ್ನು ಮಾತನಾಡಿಸುವವರು ಯಾರು? ಅವನು ಎದ್ದು ನೆಟ್ಟಗೆ ಹೊಲದ ಕಡೆಗೆ ಹೊರಟುಹೋಗಿದ್ದನು. ಅವನ ಕೆಂಗಣ್ಣುಗಳೇ ಹೇಳುತ್ತಿದ್ದುವು—'ಅವಳನ್ನು ನಾನು ಸಾಯಿಸಲಿಲ್ಲ; ಆದರೆ ಆ ಸಾವಿಗೆ ನಾನೇ ಕಾರಣ' ಎಂದು.

ಊರಿನವರೇ ಆಗಲಿ, ಅಂಗಳದವರೇ ಆಗಲಿ ತುಟಿಪಿಟಿಕ್ಕೆನ್ನಲಿಲ್ಲ. ಎಲ್ಲರಿಗೂ ಕಪನಯ್ಯನವರ ವಿಷಯದಲ್ಲಿ ಸಹಾನುಭೂತಿ. ರುದ್ರಕಾರ್ಯಗಳು ಸದ್ದುಗಲಗಿಲ್ಲದೇ ನಡೆದುಹೋಯಿತು. 'ಪಂಚಾಯಿತಿಗಳೇನಾದರೂ ಇದ್ದರೆ ಆಮೇಲಾಗಲಿ' ಎಂದು ಎಲ್ಲರೂ ಸುಮ್ಮನಿದ್ದುಬಿಟ್ಟರು. ಚಂದಣ್ಣನಿಗೆ ಸುಮಾರಾಗಿ ಹುಚ್ಚು ಹಿಡಿಯತೊಡಗಿತ್ತು.

ಮೈಸೂರಿಗೆ ಹೋಗಿ ಕೊಂಚ ಸಾಮಾನುಗಳನ್ನು ತೆಗೆದುಕೊಂಡು ಬರುವುದಕ್ಕೆ ಮುದ್ದಪ್ಪನವರೇ ನೇಮಿತರಾದರು. ಏಕೆಂದರೆ ಅವರಳಿಯ ಮೈಸೂರಿನಲ್ಲಿದ್ದಾನೆ. ಇಲ್ಲದ ಸಾಮಾನುಗಳನ್ನು ಹುಡುಕಿ ತೆಗಸಿಕೊಡು

ತ್ತಾನೆ. ಎಂಬ ಕಾರಣದಿಂದ ಮುದ್ದಪ್ಪನವರೇ ಮೈಸೂರಿಗೆ ಹೊರಡಬೇಕಾಯಿತು. ಹೊರಟರು.

ರಾಜುವು ಕಛೇರಿಯಿಂದ ಮನೆಗೆ ಬಂದನು. ಬೀದಿಯ ಬಾಗಿಲಲ್ಲಿ ನಾಗರಾಜು ಆಡುತ್ತ ಕುಳಿತಿದ್ದನು. ಅವನನ್ನೆತ್ತಿಕೊಂಡು ಒಳಹೊಕ್ಕನು.

ನಾಗುವು ಏನೋ ತಿಂಡಿ ಮಾಡುತ್ತಿದ್ದಿರಬೇಕು. ರಾಜು 'ನಾಗು!' ಎಂದು ಕರೆದನು. 'ಬಂದೇ' ಎಂಬ ಸ್ವರಬಂದ ಮೇಲೆರೂಮಿನೊಳಕ್ಕೆ ಹೋದನು. ಎರಡು ಘಳಿಗೆಯೊಳಗೇ ನಾಗುವು ತಿಂಡಿ ಸಹಿತ ಬಂದು, ರಾಜುವು ಕೋಟು ತೆಗೆದ ತಕ್ಷಣ ಅವನ ಕೈಗೆ ತಿಂಡಿಯ ತಟ್ಟೆಯನ್ನು ಕೊಟ್ಟಳು. ನಾಗರಾಜು, ರಾಜುವನ್ನು ಕುಳಿತುಕೊಳ್ಳುವಂತೆ ಸಂಜ್ಞೆ ಮಾಡಿದನು. ಏಕೆಂದರೆ ಆ ತಟ್ಟೆಯಲ್ಲಿರುವುದೇನೆಂದು ಅವನು ಜರೂರು ನೋಡಬೇಕಿತ್ತು. ಅವನು ನೋಡಿದ ಮೇಲೆ ಸಿಕ್ಕದೇ ಉಂಟೆ. ಬಾಯಿತುಂಬಾ ರವೆ ಉಂಡೆ ತುಂಬಿಕೊಂಡನು.

ನಾಗರಾಜುವಿಗೆ ಕೊಟ್ಟಮೇಲೆ ನಾಗುವಿಗೆ ಕೊಡಬೇಡವೇ. 'ನೀನೂ ತಗೊ' ಎಂದನು. 'ದೊಡ್ಡ ಮನುಷ್ಯರು. ನಾನು ಕೊಟ್ಟದ್ದನ್ನು ನನಗೇ ಕೊಡುವುದಕ್ಕೆ!' ಎಂದಳು ನಾಗು. ರಾಜು, 'ತಗೋಳೇ ಕಂಡಿದೀನಿ ನಿನ್ನ ಬಜಾರಿ ಬಾಯ್ನ' ಎಂದು ದೂರದಲ್ಲಿದ್ದ ನಾಗುವನ್ನು ಹತ್ತಿರಕ್ಕೆಳೆದುಕೊಂಡನು. ಪಾಪ ಅವರಿಬ್ಬರೂ ಆ ಕೂಸನ್ನು ಮರೆತೇಬಿಟ್ಟರು. ಅವನು ಯಥಾಪ್ರಕಾರ ಬೀದಿಯ ಕಡೆಗೆ ಓಡಿದ್ದನು. ನಾಗು, 'ಆ ಗಡಿಯಾರದ ಕಡೆ ನೋಡಿ! ಈಗ ಸಾಯಂಕಾಲದ ಐದು ಗಂಟೆ, ರಾತ್ರಿ ಹತ್ತು ಗಂಟೆಯಲ್ಲ' ಅಂದಳು. ರಾಜು, 'ಕೂತ್ಕೊಳ್ಳೇ, ನನಗೇ ಹೊತ್ತು ತೋರಿಸ್ತಾಳೆ. ತಾನೇನೋ ಮಹಾ ಮುದುಕಿಯ ಹಾಗೆ. ನಾವಿಬ್ಬರೂ ಇನ್ನೂ ಹುಡುಗರೂ ಕಣೆ' ಅಂದನು. ನಾಗು ಕನ್ನಡಿ ಬೀರುವಿನ ಕಡೆ ತಿರುಗಿ ನೋಡಿದಳು. ಅವಳಿಗೂ ತಾನು ಹುಡುಗಿಯೆಂದೇ ತೋರಿತು ಕನ್ನಡಿಯಲ್ಲೂ ರಾಜುವು ಅವಳನ್ನು ಪೀಡಿಸುತ್ತಿದ್ದನು.

ಬೀದಿಯ ಬಾಗಿಲಿನಲ್ಲಿದ್ದ ನಾಗರಾಜು, ಸದ್ಯ 'ತ್ತಾತ್ತಾ' ಎಂದು ಒಳಗಿದ್ದವರಿಗೆ ಎಚ್ಚರಕೊಟ್ಟನು. ರಾಜು 'ಹೋಗು, ಸೈಕಲ್ ಗೀಕಲ್ಲಿಗೆ ಸಿಕ್ಕಿಕೊಂಡಾನು ನೋಡು ಓಡು!' ಎಂದು ನಾಗುವನ್ನು ತಳ್ಳಿದನು. ನಾಗುವು

ಹೊರಗೆ ಬಂದಳು. ನಿಜವಾಗಿಯೂ ಮುದ್ದಪ್ಪನವರು, ನಾಗರಾಜುವನ್ನು ಎತ್ತಿಕೊಂಡು ನಿಂತಿದ್ದರು. ಅವಳು ಆಶ್ಚರ್ಯದಿಂದ,

"ಇದ್ಯಾವಾಗ ಬಂದ್ರಿ ಅಪ್ಪಜೀ?" ಎಂದಳು.

"ಇದೇತಾನೇ ಬರ್‍ತಾ ಇದೀನಿ ಕಣವ್ವಾ" ಎಂದು ಮುದ್ದಪ್ಪನವರು ಮನೆಯೊಳಕ್ಕೆ ಬಂದರು. ರಾಜುವಿಗೆ ತಮ್ಮ ಮಾವನವರ ಸುಳಿವು ಗೊತ್ತಾಯಿತು. ಅವನೂ ಹೊರಕ್ಕೆ ಬಂದು 'ಬಂದಿರಾ!' ಎಂದನು. ಮುದ್ದಪ್ಪನವರು 'ಹ್ಞೂ' ಎಂದುಬಿಟ್ಟು, ತಮ್ಮ ಆ ಕೊಳೆಯ ಕೋಟನ್ನು ಬಿಚ್ಚಿ ಗೂಟಕ್ಕೆ ತಗುಲುಹಾಕಿ, ಹಿತ್ತಿಲ ಕಡೆಗೆ ನಡೆದರು.

ಈಗ ಮುದ್ದಪ್ಪನವರು ಬಂದುದಕ್ಕೆ ಏನೋ ವಿಶೇಷವಿರಬೇಕೆಂದು ನಾಗುವು ಊಹಿಸಿದಳು. ರಾಜುವು ನಾಗುವನ್ನು ಕೇಳಿದನು. ಅವಳು 'ಏನೋಪ್ಪ!' ಎಂದಳು.

ರಾತ್ರಿ ಊಟ ತೀರಿದ ಮೇಲೆ, ಹಜಾರದಲ್ಲಿ ಕುಳಿತಿದ್ದ ಮುದ್ದಪ್ಪನವರು, ರೂಮಿನೊಳಗಿದ್ದ ರಾಜುವಿಗೆ ಕೇಳಿಸುವಂತೆ 'ಊರ್‍ಲಿ ಒಂದು ಕೆಲಸವಾಗಿಬಿಟ್ಟಿತು ನೋಡಿ' ಎಂದರು. ಅದನ್ನು ಕೇಳಿ ರಾಜುವು ರೂಮಿನಿಂದ ಹೊರಕ್ಕೆ ಬಂದು ಬಾಗಿಲಿನ ಹತ್ತಿರದಲ್ಲೇ ನಿಂತುಕೊಂಡನು. ನಾಗುವೂ ಅಡಿಗೇ ಮನೆಯ ಬಾಗಿಲಿಗೆ ಬಂದಳು. ಮುದ್ದಪ್ಪನವರು ವಿಷಯಕ್ಕೆ ತೊಡಗಿದರು.

"ನಮ್ಮ ಕಷನಯ್ಯನೋರಿದಾರಲ್ಲಾ—"

"ಹ್ಞೂ!"

"ಅವರ ಸೊಸೆ ಮೊನ್ನೆ ಬುಧವಾರ ಭಾವಿಗೆ ಹಾರಿ ಪ್ರಾಣಬಿಟ್ಟಳು" ನಾಗು ತಟ್ಟನೆ ನಡುವೆ ಬಾಯಿ ಹಾಕಿದಳು. ಅವಳ ದನಿಯಲ್ಲಿ ಹೆದರಿಕೆಯಿತ್ತು.

"ಯಾರಪ್ಪಜೀ, ಮಾದೇವಮ್ಮನೇ!?" ಎಂದಳು.

ಮುದ್ದಪ್ಪನವರು "ಹೂಕಣಮ್ಮಾ! ಅದರ ಹಿಂದಿನ ದಿವ್ಸ ಒಳ್ಳೆ ನಗನಗತಾ ಅದೇ ಭಾವಿ ಕಟ್ಟೆ ಹತ್ತಿರ ಮಾತಾಡ್ತಿದ್ಲು, ನೀರು ಸೇದ್ಕೊಂಡು ಹೋದ್ಲಂತೆ" ಎಂದರು.

ರಾಜು, "ಅಯ್ಯೋ ಪಾಪ! ಅದ್ಯಾಕೆ ಹಾಗೆ ಮಾಡಿಕೊಂಡ್ಲು?" ಎಂದನು.

ಮುದ್ದಪ್ಪನವರು, " ಅದರ ಹಣೇಬರ " ಎಂದರು.

" ಯಾಕೆ, ಏನು, ಅಂತ ಚಂದಣ್ಣನ್ನ ಕೇಳ್ಳಿಲ್ಲವೇ ? " ರಾಜುವಿನ ಈ ಪ್ರಶ್ನೆಯಿಂದ ನಾಗುವಿನ ಹೃದಯದ ಚಲನೆ ವೇಗವಾಯಿತು.

" ಸರಿಸರಿ ! ಅದೊಂದು ಹುಚ್ಚು ಹುಡುಗ. ಒಳಗೊಳಗೆ ಏನು ಜಗಳ ವಿತ್ತೊ ! ಒಳ್ಳೇ ಕೇಡಿಗನಾಗಿಬಿಟ್ಟಿದಾನೆ. ಮದುವೆ ಆಗುವಾಗಲೇ ಅವನಿಗೆ ನೂರೊಂದು ಸಂಕಟ " ಎಂದರು ಮುದ್ದಪ್ಪ.

" ಸರಿಯಪ್ಪ " ಎಂದನು ರಾಜು.

ಮುದ್ದಪ್ಪನವರು ತಾವು ಆ ಮಹಾದೇವಮ್ಮನ ' ಆರಾಧನೆ 'ಗೆ ಮೈಸೂರಿ ನಿಂದ ತೆಗೆದುಕೊಂಡುಹೋಗಬೇಕಾದ ಸಾಮಾನುಗಳ ಪ್ರಸ್ತಾಪವೆತ್ತಿದರು. ನಾಗುವು ಒಂದು ನಿಟ್ಟುಸಿರುಬಿಡುತ್ತಾ ಅಡಿಗೆಮನೆಯೊಳಕ್ಕೆ ನಡೆದಳು.

ನಾಗುವಿಗೆ ಆ ರಾತ್ರಿಯೆಲ್ಲ ಅದೇ ಯೋಚನೆ. ಚಂದಣ್ಣ ಮಾಡಿದ ಈ ಕೊಲೆಗಾಗಿ ಅವಳು ಬಹಳ ವಿಷಾದಪಟ್ಟಳು. ಮುತ್ತಿನಂತಹ ಮಗಳು ಆ ಮಹದೇವಮ್ಮ. ಅವಳಿಗಾಗಿ ಕಣ್ಣೀರು ಮಿಡಿದಳು. ಚಂದಣ್ಣನ ನಡೆ ವಳಿಕೆಯ ವಿಷಯದಲ್ಲಿ ನಾಗುವಿಗೆ ತುಂಬಾ ಖೇದವಾಯಿತು. ಕಡೆಗೆ ಮನಸ್ಸಿ ನಲ್ಲಿ ಅಂದುಕೊಂಡೂಬಿಟ್ಟಳು. ' ಇನ್ನೊಬ್ಬರ ಪ್ರಾಣಬಿಡಿಸುವುದಕ್ಕಿಂತ ಈ ಮನುಷ್ಯರೇ ಬಿಡಬಾರದೇ ' ಎಂದಳು. ಅವಳಿಗೆ ಈ ಬಾರಿ ಚಂದಣ್ಣನ ಮೇಲೆ ಕನಿಕರವುಂಟಾಗಲಿಲ್ಲ. ಅದಕ್ಕೆ ಬದಲು ದ್ವೇಷ ಹುಟ್ಟಿತು. ಅವಳ ಹೆಂಗರಳು ಅವನಿಗೆ ಶಾಪ ಹಾಕುವುದಕ್ಕೆ ಸಿದ್ಧವಾಯಿತು. ಮಹದೇವಮ್ಮನಿ ಗಾಗಿ ಅವಳ ಕಣ್ಣುಗಳು ಹನಿಗಳನ್ನು ಉರುಳಿಸಿದಾಗಲೇ ಅವಳು ಚಂದಣ್ಣನ ಮೊಂಡತನಕ್ಕಾಗಿ ಹಲ್ಲು ಕಡಿದಳು.

ಮುದ್ದಪ್ಪನವರು ಎರಡೇ ದಿನಕ್ಕೆ ಹೊರಟುಬಿಟ್ಟರು. ಅವರ ಜೊತೆ ಯಲ್ಲೇ ಹೋಗುವುದಕ್ಕೆ ನಾಗರಾಜು ಹಟಮಾಡಿದ. ಆದರೆ ಮುದ್ದಪ್ಪ ನವರು ಕರೆದುಕೊಂಡುಹೋಗಬಲ್ಲರೆ ? ನಾಗರಾಜು ಕೊಂಚಹೊತ್ತು ಅತ್ತು ಸುಮ್ಮನಾದನು ಆದರೆ ಕೊಂಚ ದಿನದಲ್ಲಿಯೇ ಅವನಿಗೆ ಇನ್ನೊಂದು 'ತ್ತಾತ್ತಾ' ಸಿಕ್ಕಿತು.

ಸೆಜ್ಜೆಯ ಶಿವಪ್ಪನವರು ಜೊತೆಗೆ ಇನ್ನೊಬ್ಬರನ್ನು ಕರೆದುಕೊಂಡು ಮೈಸೂರಿಗೆ ಬಂದಿಳಿದರು. ಅವರು ಬಂದ ಕಾರಣವೂ ಹೊರಬಿತ್ತು. ಅವರು

ರಾಜುವಿಗೆ ಆ ಹೊಸಬರ ಪರಿಚಯ ಮಾಡಿಸಿಕೊಟ್ಟರು. ಅವರು 'ಏಳಸ್ವಾಗೆ' ಜಮೀನುದಾರರು. ಅವರ ಹೆಸರು ಮಾದಪ್ಪನೆಂದು.

ರಾಜುವಿಗೆ ವಿರಾಮವಿರುವುದು ರಾತ್ರಿಯ ಕಾಲದಲ್ಲಿತಾನೆ. ರಾತ್ರಿಯೇ ಮಾತುಕತೆಗೆ ಪ್ರಾರಂಭವಾಯಿತು. ಪುನಃ ಎಲ್ಲರೂ ಹಜಾರದಲ್ಲಿ ಸೇರಿದ್ದರು. ಶಿವಪ್ಪನವರು ಆ ಹೊಸಬರಾದ ಮಾದಪ್ಪನವರು, ಇಬ್ಬರೂ ಚಾಪೆಯ ಮೇಲೆ ವಿಸ್ತಾರವಾಗಿ ಕುಳಿತಿದ್ದರು. ರಾಜು ಕಿಟಕಿಗೆ ಒರಗಿಕೊಂಡು ಅರ್ಧ ನಿಂತಿದ್ದನು.

ಶಿವಪ್ಪನವರು, "ಸೋಮಣ್ಣನಿಗೊಂದು ಲಗ್ನಮಾಡಿಬಿಡೋಣ ರಾಜು" ಎಂದರು.

ರಾಜುವಿಗೆ ತಿಳಿಯಿತು. ಬಂದಿರುವ ಮಾದಪ್ಪನವರ ಮಗಳೇ ಇರಬೇಕು ಹೆಣ್ಣು, ಎಂದು.

"ಅದಕ್ಕೇನು ನನ್ನನ್ನು ಕೇಳೋಣಾ ಅಂತ ಬಂದ್ರಾ ?" ಎಂದನು.

"ಹ್ಞಾ, ಮತ್ತೆ ನಿನ್ನ ಕೇಳದೇ ನಾನು ಯಾವ ದೊಡ್ಡ ಕೆಲಸಕ್ಕೂ ಕೈಹಾಕೋದಿಲ್ಲಪ್ಪ. ನಾಳೆ ಒಂದೇ ಮಾತಿನಲ್ಲಿ ನೀನು ಮುಗಿಸಿಬಿಟ್ರೆ ?" ಎಂದರು ಶಿವಪ್ಪ.

ರಾಜು, "ಚೆನ್ನಾಯಿತು, ಈಗಾಗ್ಲೇ ನನ್ನ ಮೇಲೆ ಜವಾಬ್ದಾರಿ ಒರಗಿಸಿ ಬಿಡಬೇಕೂ ಅಂತ ಇದೀರೇನು ?" ಎಂದನು.

"ಎಲಪ್ಪಾ ! ಇನ್ನೇನೂ ಅಂತ ತಿಳ್ಕೊಂಡೆ ! ಹ್ಞಾ ! ನಮ್ಮ ಈ ಮಾದಪ್ಪನವರ ತಂಗೀ ಮಗಳು, ಹುಡುಗಿ. ನಾನು ಹೆಣ್ಣೇನೋ ನೋಡಿ ಒಪ್ಕೊಂಡು ಬಂದಿದೀನಿ. ಸೋಮಣ್ಣ ಮೈಸೂರಿಗೆ ಹೋಗಿದ್ದು ಬನ್ನಿ ಅಂದ. ಹಾಗೇ ಬಂದೊ. ನಿನ್ನ ವಿಷಯ ಏನಪ್ಪ. ನಾಳೆ ಹೊರಡ್ತೀಯೇನೂ ಏಳಸ್ವಾಗೆಗೆ ನಮ್ಮ ಜತೇಲೇ ?" ಎಂದರು ಶಿವಪ್ಪ.

"ನಾನೊಂದು ಸರ್ತಿಯೇನು ಬಿಡಿ. ರಜ ಅನ್ಯಾಯವಾಗುತ್ತದಲ್ಲ ಅಂತಿದ್ದೆ. ನಾನೂ ಒಂದು ತಿಂಗಳು ರಜ ತಕ್ಕೊಂಡು ಊರಿಗೇ ಬಂದ್ಬಿಡ್ತೀನಿ" ಎಂದ ರಾಜು.

ಸೋಮಣ್ಣನ ಮದುವೆಗೆ ರಾಜುವಿನ ಅಂಗೀಕಾರವಾಗಿಹೋಯಿತು. ನಾಗರಾಜು ಧೈರ್ಯವಾಗಿ ಬಂದು ಶಿವಪ್ಪನವರ ತೊಡೆಯ ಮೇಲೆ ಕುಳಿತು

ಕೊಂಡಿದ್ದನು. ಶಿವಪ್ಪನವರು 'ಏನು ನಂಜಪ್ಪ, ನೀನೂ ಬರ್ತೀಯೋ ನಿನ್ನ ಚಿಕ್ಕಪ್ಪನ ಮದುವೆಗೆ?' ಅಂದರು. ನಾಗರಾಜು, ಪಿಳಿಪಿಳಿ ಕಣ್ಣುಬಿಟ್ಟನು. 'ನಿನ್ನೇಕಣೋ ಕೇಳಿದ್ದು' ಅಂದರು ಶಿವಪ್ಪ. ನಾಗರಾಜು ಬಹಳ ಕಷ್ಟ ಪಟ್ಟು 'ಆನು, ಆಗಜು' ಎಂದನು. ಅದು ಶಿವಪ್ಪನವರಿಗೆ ಅರ್ಥವಾಗಲಿಲ್ಲ. 'ಏನೋ ಮಾತಾಡೋ ಹಂಗಾಗಿಬಿಟ್ಟೆ?' ಎಂದು ಅವನ ಕೆನ್ನೆಯ ಮೇಲೆ ಸಂತೋಷದಿಂದ ಚಿವುಟಿದರು. ಅವನು ಪುನಃ 'ಆನು ಆಗಜು' ಎಂದನು. ಶಿವಪ್ಪನವರು ರಾಜುವನ್ನು 'ಏನು ಇವನನ್ನೋದು?' ಎಂದು ಕೇಳಿದರು. ರಾಜು, ನಗುತ್ತ, 'ಅವನು ನಾಗರಾಜುವಂತೆ, ನಂಜಪ್ಪಲ್ಲನವಂತೆ' ಎಂದನು. ಶಿವಪ್ಪನವರು ದೊಡ್ಡದಾಗಿ ನಕ್ಕು 'ಎಲಾ ಘಟಿಂಗ' ಎಂದರು.

ಶಿವಪ್ಪನವರು ಈ ಸರ್ತಿ ತಮ್ಮ ಸೊಸೆ ಮತ್ತು ತಮ್ಮ ಮೊಮ್ಮಗ ನನ್ನು ಕರೆದುಕೊಂಡು ಹೋಗಬೇಕೆಂದು ತೀರ್ಮಾನಿಸಿಕೊಂಡೇ ಬಂದಿದ್ದರು. ಅದರ ಮೇಲೆ ನಾಗರಾಜು ಇನ್ನೂ ಏನೇನೋ ಆಡಿ ತುಂಬಾ ಸಂತೋಷಪಡಿಸಿ ಬಿಟ್ಟಿದ್ದನು. ಅವನನ್ನು ಹೊತ್ತುಕೊಂಡು ಸೆಜ್ಜೆಯನ್ನೆಲ್ಲಾ ಸುತ್ತಬೇಕೆಂದು ಶಿವಪ್ಪನವರು ದೃಢಮಾಡಿಕೊಂಡರು.

ಅವರು ಊರಿಗೆ ಹೊರಡುವಾಗ ಬಟ್ಟೆಯೊಗೆಯುತ್ತಿದ್ದ ನಾಗುವನ್ನು ಕೂಗಿದರು. ಅವಳು ಸಾಬೂನಿನ ಕೈಲೇ ಆತುರದಿಂದ ಬಂದಳು. 'ನಾಗಮ್ಮ, ಈ ಸರ್ತಿ ಮದುವೆ ದರ್ಬಾರೆಲ್ಲ ನಿನ್ನದೇ. ಅವಳ ಕೈಲೇನೂ ಹರಿಯು ವುದಿಲ್ಲ. ಕೊಂಚ ಬೇಗ ಬಂದುಬಿಡು.' ಎಂದರು. ನಾಗು ಆಗಲೆಂದು ತಲೆ ಯಲ್ಲಾಡಿಸಿದಳು. ಇನ್ನೂ ಅವರ ತೋಳಲ್ಲೇ ಇದ್ದ ರಾಜುವನ್ನು ಕರೆದಳು. ನಾಗರಾಜು, ಅವಳ ಸೋಪಿನ ಕೈನೋಡಿ 'ತು, ಅವುಸ್ತಿ!' ಅಂದನು. ನಾಗುವು ಅವನ ಮಾತನ್ನು ಲೆಕ್ಕಿಸದೇ ಅವನನ್ನು ತನ್ನ ನಡುವಿಗೆಳೆದು ಕೊಂಡಳು.

ಶಿವಪ್ಪನವರು 'ಅವನ್ನ ಇಲ್ಲೇ ಬಿಟ್ಬುಟ್ಟು ನೀವೆಲ್ಲ ಬಂದ್ಬುಡಿ' ಅಂದರು. ಅದು ಹೇಗೋ ನಾಗರಾಜನಿಗೆ ಅರ್ಥವಾಗಿಹೋಯಿತು. ಅವನು ಅಳತೊಡ ಗಿದನು. ಪುನಃ ಅವನ 'ಆನು?' ಎನ್ನುವ ಪ್ರಶ್ನೆಗೆ ಶಿವಪ್ಪನವರು 'ಹ್ಞೂ, ನೀನೂವೆ' ಅನ್ನುವವರೆಗೆ ಅವನು ಅಳು ನಿಲ್ಲಿಸಲೇ ಇಲ್ಲ.

ಸೋಮಣ್ಣನ ಮದುವೆಗೆ ಎಲ್ಲರೂ ಸೆಜ್ಜೆಯಲ್ಲಿ ಸೇರಿದರು. ಸಾಮಾನ್ಯ ವಾಗಿ ಹೆಣ್ಣಿನ ಮನೆಯಲ್ಲಿ ಮದುವೆ ನಡೆಯುವುದು ಪದ್ಧತಿಯಾಗಿದ್ದರೂ ಹೆಣ್ಣಿನ ಮನೆಯ ಕೆಲವಾರು ಅನಿವಾರ್ಯ ತಾಪತ್ರಯಗಳಿಂದ ಗಂಡಿನ ಮನೆ ಯಲ್ಲೇ ಮದುವೆ ಏರ್ಪಾಡಾಯಿತು.

ನಾಗು ಸೆಜ್ಜೆಗೆ ಬರುವುದರೊಳಗೆ ಅವರತ್ತೆಯವರೇ ಎಲ್ಲವನ್ನೂ ಸಿದ್ಧ ಪಡಿಸಿದ್ದರು. ಕಜ್ಜಾಯದ ಒಲೆಗಳು ಮಾತ್ರ ಕೆಲಸಮಾಡುತ್ತಿದ್ದುವು. ಅತ್ತೆ ಆ ಒಲೆಗಳ ಮುಂದೆ ಕುಳಿತುಕೊಳ್ಳುವುದಕ್ಕೂ ನಾಗುವಿಗೆ ಅವಕಾಶ ಕೊಡ ಲಿಲ್ಲ ನಾಗುವಿನ ಮುಖ ನೋಡಿದರೆ ಅವಳಿಗೆ ಕೆಲಸ ಹೇಳುವುದಕ್ಕೇ ಸೆಜ್ಜೆ ಯವರಿಗೆ ಬಾಯಿ ಬರುತ್ತಿರಲಿಲ್ಲವೇನೊ. ಆ ಊರಿನವರಿಗೆ ಗಂಡುಹೆಣ್ಣು ಗಳಿಗಿಂತ ರಾಜು ನಾಗುಗಳನ್ನು ನೋಡುವುದೇ ಕೆಲಸವಾಗಿಹೋಗಿತ್ತು. ಗಂಡಸರಿಗೆ ರಾಜುವಿನ ಮೇಲೆ ಹೊಟ್ಟೆಕಿಚ್ಚಾದರೆ ಹೆಂಗಸರಿಗೆ ನಾಗುವಿನ ಮೇಲೆ ಹೆಟ್ಟೆಕಿಚ್ಚು. ಆದರೆ ಆ ಹೊಟ್ಟೆಕಿಚ್ಚುಗಳೆಲ್ಲವೂ ನಡತೆಯಲ್ಲಿ ತೋರಿ ಬರಲಿಲ್ಲ. ಮನಸ್ಸಿನ ಯಾವುದೋ ಒಂದು ಮೂಲೆಯಲ್ಲಿದ್ದದ್ದು ಮಾತ್ರ ಸತ್ಯ.

ನಾಗರಾಜುವಿನ ಓಡಾಟ ನಾಲ್ಕು ಜನರ ತೋಳಿನ ಮೇಲೆಯೇ. ಇಲ್ಲ ನಾಗು, ಇಲ್ಲ ರಾಜು, ಇಲ್ಲವೇ ಮುದ್ದಪ್ಪ ಅಥವಾ ಶಿವಪ್ಪ. ಆ ನಾಲ್ಕು ಜನ ರಿಗೂ ಅವನೊಬ್ಬನೇ ಕೈಗೊಂಬೆ. ಎತ್ತಿಸಿಕೊಳ್ಳುವುದಕ್ಕೆ ನಾಗರಾಜು ಬಹಳ ಶೂರ. ಆದರೆ ಈ ನಾಲ್ಕುಜನರ ಬಡಿತದಿಂದ ಸಾಕಾಗಿ ಅವನಿಗೂ ನೆಲ ಕಂಡೇನೇ ಎನ್ನಿಸಿಬಿಟ್ಟಿತ್ತು.

ಧಾರೆಯ ದಿನ ಮುದ್ದಪ್ಪನವರ ಜೊತೆಗೆ ನಾಗರಾಜು ಆಡುತ್ತ ಕುಳಿ ತ್ತಿದ್ದನು ಇದ್ದಕ್ಕಿದ್ದ ಹಾಗೆಯೇ 'ಹುಚ್ಚ ಬಂದ! ಹುಚ್ಚ ಬಂದ!' ಎಂದನು. ಮುದ್ದಪ್ಪನವರು ತಿರುಗಿ ನೋಡಿದರು. ಚಂದಣ್ಣ ಬೀಡಿ ಸೇದುತ್ತಾ ಬರು ತ್ತಿದ್ದನು. ಅವನನ್ನು ನೋಡಿ ಮುದ್ದಪ್ಪನವರಿಗೆ ಆಶ್ಚರ್ಯವಾಯಿತು. ಕಡೆಗೆ ನಾಗರಾಜು ಹೇಳಿದ್ದೂ ಅಲ್ಪಸ್ವಲ್ಪ ನಿಜವೆನ್ನಿಸಿತು. ಚಂದಣ್ಣನಿಗೆ ಇದ್ದ ದಪ್ಪವೆಲ್ಲ ಕರಗಿಹೋಗಿ ಅವನು ನೆಟ್ಟನೆಟ್ಟಗೆ ಕಾಣುತ್ತಿದ್ದನು. ಗಡ್ಡ ಬೋಳಿಸಿ ಐದು ದಿನವಾದರೂ ಆಗಿತ್ತು. ಎಣ್ಣೆ ಕಾಣದ ತಲೆ ಕೋಪ

ಗೊಂಡು ನಿಂತಿತ್ತು. ಷರಟು ಪಂಚೆಯೆಲ್ಲಾ ಕೊಳೆಯಾಗಿಹೋಗಿತ್ತು. ಮೇಲೆ ಮನೆಯವರು ಯಾರೋ ಒಂದು ಜರೀವಲ್ಲಿಯನ್ನು ಎಸೆದಿರಬೇಕು. ಪಲುಕೂರಿನಿಂದ ಅದು ಹೇಗಿತ್ತೋ ಹಾಗೆಯೇ ಬಿದ್ದುಕೊಂಡು ಬಂದಿತ್ತು. ಈ ವೇಷದಲ್ಲಿ ಚಂದಣ್ಣ ಪಲುಕೂರಿಂದ ಸೆಜ್ಜೆಯ ಮದುವೆಗೆಂದು ಬಂದಿದ್ದನು.

“ಇದೇನು ಚಂದಣ್ಣ, ಬರೋದಿಲ್ಲ ಅಂದವನು ಬಂದೇಬುಟ್ಟೆ ?” ಎಂದು ಪ್ರಶ್ನಿಸಿದರು ಮುದ್ದಪ್ಪ. ಚಂದಣ್ಣ ಬೀಡಿಯನ್ನೆಸೆಯಲೇ ಇಲ್ಲ. ಅವನ ಗುಳಿ ಬಿದ್ದ ಕಣ್ಣುಗಳು ಅಲ್ಲಿಂದಲೇ ಏನನ್ನೋ ಹುಡುಕುತ್ತ ಬಂದಿದ್ದುವು. ಹೊಗೆ ತುಂಬಿದ ಬಾಯಿಯಿಂದಲೇ

“ಹೊಂಟೋಗು ಅನ್ನಿ, ಹೊಂಟೋಯ್ತಿನಿ” ಅಂದ ಚಂದಣ್ಣ. ಅವನ ಬಾಯಿಂದ ಹೊಗೆ, ಕಣ್ಣಿನಿಂದ ಕಿಡಿಗಳು ಹೊರಚೆಲ್ಲಿದುವು. ಮುದ್ದಪ್ಪನವರಿಗೆ ಇದರಿಂದ ಬೇಜಾರಾಯಿತು.

“ನೋಡೂ ಮತ್ತೆ. ನಿನ್ನ ಮಾತಾಡ್ಸೋದೇ ತಪ್ಪಾಗೋಯ್ತು. ಹೋಗ್ಲಿಬಿಡು. ಕೂತ್ಕೊ” ಅಂದರು. ನಾಗರಾಜು “ಇದ್ಯಾರು ತಾತ ?” ಎಂದು ಕೇಳಿದನು. ಮುದ್ದಪ್ಪ, “ಮಾವ !” ಎಂದರು. ನಾಗರಾಜುವು ಅವನಿಗೆ ಹೆದರಿ ಮುಖ ತಿರುಗಿಸಿಕೊಂಡನು. ಚಂದಣ್ಣನೊಡನೆ ಮುದ್ದಪ್ಪ, “ನಮ್ಮ ನಾಗೂನ ಕೂಸು, ಚಂದಣ್ಣ ಇದು. ಚಿನ್ನಮರಿ, ಜಾಣಾಮರಿ” ಎನ್ನುತ್ತಾ ನಾಗರಾಜುವನ್ನು ಬೆನ್ನಿನ ಮೇಲೆ ತೂಗಾಡಿಸಿದರು. ಚಂದಣ್ಣ, ಆಗಲೇ ಊಟಕ್ಕೆ ಹವಣಿಸಿಕೊಂಡು ಬಂದಿದ್ದ ಒಬ್ಬ ಜಂಗಮಯ್ಯನನ್ನೇ ನೋಡುತ್ತಿದ್ದನು. ಅವನು ಆ ಮಾತನ್ನು ಕೇಳಿದರೂ ಅರ್ಥಮಾಡಿಕೊಳ್ಳದವನಂತೆ ಇದ್ದುಬಿಟ್ಟನು.

ಧಾರೆಯ ಹೊತ್ತಾದಾಗ ಬಲವಂತದಿಂದ ಮುದ್ದಪ್ಪನವರು ಚಂದೂವನ್ನು ಮನೆಯೊಳಕ್ಕೆ ಎಳೆದುಕೊಂಡು ಹೋದರು. ತೊಟ್ಟಿಯ ತುಂಬಾ ಜನ ಸೇರಿದ್ದರು. ಅವರ ಮಧ್ಯೆ ಬೆನ್ನಿಗೆ ಗೋಡೆ ಸಿಕ್ಕುವ ಜಾಗವೊಂದರಲ್ಲಿ ಚಂದಣ್ಣ ಹೋಗಿ ಕುಳಿತನು. ಮನೆಯಾದ ಮನೆಯೆಲ್ಲ ಜಂಗಮರ ಆಗಮಘೋಷವೂ ಗಂಧದಕಡ್ಡಿಯ ಸುವಾಸನೆಯೂ ತುಂಬಿಹೋಗಿತ್ತು. ಹೊರಗೆ ಓಲಗವಾಗುತ್ತಿತ್ತು. ಎಲ್ಲ ಜನರ ಕಣ್ಣೆಲ್ಲಿತ್ತೋ, ಚಂದಣ್ಣನ ಕಣ್ಣುಗಳು ಅತ್ತ ಇರಲೇ

ಇಲ್ಲ. ಎಲ್ಲೋ ಒಂದು ಕಡೆ ನೋಡುವನು. ಸಾಕಾದರೆ ನೆಲವನ್ನು ನೋಡು ವನು. ಹೆಣ್ಣುಗಂಡುಗಳು ಏನಾದರೇನಂತೆ. ಚಂದಣ್ಣನಿಗೆ ಅದು ಮುಖ್ಯವಲ್ಲ,

ಚಂದಣ್ಣನಿಗೆ ಮುಖ್ಯವಲ್ಲದ ಧಾರೆಯೂ ನಡೆದುಹೋಯಿತು. ಗಂಡು ಹೆಣ್ಣುಗಳಿಬ್ಬರನ್ನೂ ಶಾಸ್ತ್ರಕ್ಕೆ ಕುಳ್ಳಿರಿಸಿದರು. ಫಲಪೂಜೆಯೂ ಆಯಿತು. ಐದು ಜನ ಮುತ್ತೈದೆಯರ ಶಾಸ್ತ್ರವಾಗಬೇಕು. ಈಗ ಚಂದಣ್ಣನ ಹುಚ್ಚು ಹೃದಯದ ಬಡಿತವು ಅಳತೆಮೀರಿತು. ಸುಬ್ಬಪ್ಪನ ಸೊಸೆ ಮರಮ್ಮ ಬಂದಳು; ಗಂಡುಹೆಣ್ಣಿಗೆ ಕುಂಕುಮವಿಟ್ಟಳು. ವೀಳ್ಯ ತಿದ್ದಿದಳು. ಅಕ್ಷತೆ ಹಾಕಿದಳು. ಪುನಃ ನೇರವಾಗಿ ಬಂದ ದಾರಿಯಲ್ಲೇ ಹೋಗಿ ಅಡಿಗೆ ಮನೆಯೊಳಕ್ಕೆ ನುಸು ಳಿದಳು. ಅನಂತರ ಯಾರೋ ಒಬ್ಬರು ವೃದ್ಧ ಮುತ್ತೈದೆಯು ಬಂದು ಮರಮ್ಮ ಮಾಡಿದಂತೆಯೇ ಶಾಸ್ತ್ರಮಾಡಿ ಹೋದರು. ಆಮೇಲೆ ಬಂದವ ಳನ್ನು ಚಂದಣ್ಣ ಗುರುತಿಸಿದನು. ಅವನಿಗೆ ಎದೆಯು ರಕ್ತದ ಚೀಲ ಒಡೆದು ಹೋದಂತಾಗುತ್ತಿತ್ತು.

ನಾಗು ಗಂಭೀರವಾಗಿ ಅಡಿಗೆ ಮನೆಯಿಂದ ಹೊರಬಿದ್ದಳು. ಅವಳುಟ್ಟಿ ದ್ದುದು ಅಚ್ಚ ಹಸುರು ಸೀರೆ. ಎರಡೇ ಬೆಟ್ಟು ಕಲಾಪತ್ತು. ಅವಳ ಬೆಳವಣಿ ಗೆಯು ಮೊಗ್ಗಿನಿಂದ ಹೂವಿನಷ್ಟಾಗಿತ್ತು. ಅವಳ ಕೂದಲು ಮಿರುಗಿತು. ಮುಖವೆಲ್ಲ ಕೆಂಪಾಗಿತ್ತು. ಸೆರಗನ್ನು ಹಿಡಿದಿದ್ದ ಬಲದೋಳು ಹಾಲಿನಲ್ಲಿ ಮಾಡಿದಂತಿತ್ತು. ಇಂತಹ ರೂಪವನ್ನು ಚಂದಣ್ಣ ನೋಡಿಯೇ ಇರಲಿಲ್ಲ. ಅಂಥಹುದರಲ್ಲಿ ಈ ರೂಪವೆಲ್ಲ ನಾಗುವಿನಲ್ಲೇ ಇರುವುದನ್ನು ಕಂಡು ಅವನು ತಬ್ಬಿಬ್ಬಾದನು. ಅವಳು ಶಾಸ್ತ್ರ ಮುಗಿಸಿ ಪುನಃ ಅಡಿಗೆಮನೆಯೊಳಕ್ಕೆ ನುಗ್ಗುವುದರೊಳಗೆ ಚಂದಣ್ಣ ಅವಳನ್ನು ಸಾವಿರ ಬಾರಿ ನೋಡಿದ್ದನು. ನೂರುಬಾರಿ ದೃಷ್ಟಿ ಬದಲಿಸಿದ್ದನು ಇನ್ನು ಅವನು ಅಲ್ಲಿ ಕುಳಿತುಕೊಳ್ಳ ಲಾಗಲಿಲ್ಲ. ಅವನು ಎದ್ದು ನೇರವಾಗಿ ಚಾವಡಿಗೆ ನಡೆದು ಅದರ ಜಗಲಿಯ ಮೇಲೆ ಕುಳಿತುಬಿಟ್ಟನು. ಅವನ ಮುಂದೆ ನೆಲದ ಮೇಲೆ ಒಂದು ನಾಯಿ ಅರ್ಧಚಂದ್ರಾಕಾರವಾಗಿ ಮುದುರಿಕೊಂಡು ಬಿದ್ದಿತ್ತು. ಉಳಿದ ಪ್ರಾಣಿ ಗಳೆಲ್ಲ ಹೆಚ್ಚುಕಡಮೆ, ಮದುವೆ ಮನೆಯ ಹತ್ತಿರ ಸೇರಿಕೊಂಡಿದ್ದುವು.

ಅವನ ಕಣ್ಣುಗಳು ಶೂನ್ಯದೃಷ್ಟಿ ಬೀರಿದ್ದರೂ, ಅವನ ಮನಸ್ಸಿನ ಚಿತ್ರದಲ್ಲಿ ನಾಗುವು ಪದೇಪದೇ ಬಂದು ಸೋಮಣ್ಣನ ಹಣೆಗೆ ಕುಂಕುಮ

ವಿಡುವುದೋ, ಅಥವಾ ರಾಜು ನಾಗುವನ್ನು ಕೂಗುತ್ತಿರುವ ದೃಶ್ಯವೋ ಕಾಣುತ್ತಿತ್ತು. ಅವನ ಕಿವಿಗೆ ಆಗಾಗ್ಗೆ ನಾಗರಾಜುವಿನ 'ಇದಾಲು ತಾತ?' ಎನ್ನುವ ಪ್ರಶ್ನೆಯೇ ಬಿದ್ದಂತಾಗುತ್ತಿತ್ತು. ಇವೆಲ್ಲದರಿಂದಲೂ ಚಂದಣ್ಣ ಕ್ರೋಧಿತನಾಗಿದ್ದನೇ ಹೊರತು ದುಃಖಿತನಾಗಿರಲಿಲ್ಲ.

ಅವನು ಹಾಗೆಯೇ ಸುಮಾರು ಎರಡು ಗಂಟೆಗಳು ಕೂತಿದ್ದಿರಬಹುದು. ಪುನಃ ಅವನು ಬಿದ್ದದ್ದು ಮುದ್ದಪ್ಪನವರ ಕಣ್ಣಿಗೇ. ಆಗಲೇ ಪಂಙ್ತಿ ಕುಳಿತು ಬಿಟ್ಟಿತ್ತು. ಯಾರ ಮನೆಯಲ್ಲೋ ಅನ್ನದ 'ಮುಕರಿ' ತೆಗೆದುಕೊಂಡು ಹೋಗಲು ಬಂದ ಮುದ್ದಪ್ಪನವರು, ಚಾವಡಿಯಲ್ಲಿ ಒಬ್ಬನೇ ಕುಳಿತಿದ್ದ ಚಂದಣ್ಣನನ್ನು ನೋಡಿ ಮಮತೆಯಿಂದ "ಅಯ್ಯೋ! ಯಾಕೋ ಹಿಂಗಾಡ್ತಿ ಚಂದಣ್ಣ? ಹೊಟ್ಟೆಗೇನೂ ಇಲ್ದೆ ಸಾಯಬೇಕೂಂತ ಏನಾದರೂ ಮಾಡಿದೀಯೇನು?" ಅಂದರು. ಚಂದಣ್ಣ ಎಚ್ಚರಗೊಂಡು "ಹ್ಞಾ" ಎಂದನು. ಮುದ್ದಪ್ಪನವರು "ಇರ್ಲೀ ಎದ್ಬಾ ಸಾಕು. ಊಟಮಾಡೋಣ ಬಾ" ಎಂದು ಅವನ ತೋಳಿಗೆ ಕೈಹಾಕಿದರು. ಚಂದಣ್ಣ ತೋಳನ್ನು ಹಿಂದಕ್ಕೆಳೆದು ಕೊಂಡನು. ಮುದ್ದಪ್ಪನವರು ಸುಮ್ಮನೆ "ನಿನ್ನ ಕಷ್ಟ ನನಗೂ ಗೊತ್ತು ಕಣೇಳ್ಲಾ" ಎಂದರು. ಈ ಮಾತಿನಿಂದ ಮಾತ್ರ ಚಂದಣ್ಣನು ಹೆದರಿದನು. ಅವನು ತಟ್ಟನೆ ಎದ್ದುಬಿಟ್ಟನು.

ಸಂಜೆಗೆ ಗಂಡು ಹೆಣ್ಣಿನ ಆರತಿ ಅಕ್ಷತೆಗಳು ಮುಗಿಯಿತೆಂದರೆ, ಬಂದ ನೆಂಟರಿಷ್ಟರಿಗೆ ಮದುವೆ ಮುಗಿಯಿತೆಂದರ್ಥ. ರಾತ್ರಿಯೇ ಹತ್ತಿರ ಹತ್ತಿರದ ಹಳ್ಳಿಯ ನೆಂಟರುಗಳು ತಮ್ಮ ತಮ್ಮ ಊರಿಗೆ ಹೋಗಿ ಮನೆ ಸೇರಿಕೊಳ್ಳುವುದುಂಟು. ಎಂದರೆ ಸುಮಾರು ಅಂದಿನ ಅರ್ಧರಾತ್ರಿಗೆ ಗಲಾಟೆಯೆಲ್ಲವೂ ಮಳೆ ನಿಂತಂತೆ ನಿಂತುಬಿಡುವುದು. ಚಂದಣ್ಣನ ಮನಸ್ಸಿನಲ್ಲಿ ಈ ಲೆಕ್ಕಾಚಾರಗಳೆಲ್ಲ ನಡೆಯಿತು. ನಾಳೆ ಹೊರಟುಹೋಗುವುದೆಂದುಕೊಂಡನು. ಅವನು ಸೆಜ್ಜೆಗೆ ಬಂದದ್ದು ನಾಗುವನ್ನೊಂದು ಬಾರಿ ನೋಡುವುದಕ್ಕೆಂದು ಮಾತ್ರ.

ಅಂದಿನ ಎಂಟು ಗಂಟೆಗೇ ಚಂದ್ರನು ಆಕಾಶಕ್ಕೆ ಬಂದನು. ಚಂದ್ರನಷ್ಟಗಲ ಬಿಟ್ಟರೆ ಮಿಕ್ಕ ಆಕಾಶವೆಲ್ಲವೂ ಕಪ್ಪು ಬಣ್ಣವಾಗಿತ್ತು. ಮದುವೆ ಮನೆಯಲ್ಲಿ ದೂರದ ಚಂದ್ರನಿಗಿಂತ ಹತ್ತಿರದ 'ರಜನೀಕಾಂತ'ದ ಪ್ರಭಾವ ಹೆಚ್ಚಿತ್ತು. ಆದರೆ ಚಾವಡಿಯಲ್ಲಿ ಪ್ರತಿಷ್ಠಿತನಾಗಿದ್ದ ಚಂದಣ್ಣನಿಗೆ ಎಲ್ಲೆಲ್ಲೂ

ಚಂದ್ರನೇ ಚಂದ್ರನಾಗಿ ಕಾಣುತ್ತಿದ್ದನು. ಮಿಕ್ಕ ಊರೆಲ್ಲ ಸ್ತಬ್ಧವಾಗಿತ್ತು. ಚಾವಡಿ ಎದುರಿಗೇನೇ ಊರೊಟ್ಟಿನ ಭಾವಿ. ಅದೇ ಸಿಹಿನೀರಿನ ಭಾವಿ. ಮದುವೆ ಮನೆಯವರ ಹಗ್ಗವೊಂದು ಮಾತ್ರ ಇನ್ನೂ ರಾಟೆಯ ಮೇಲೆ ಬಿದ್ದಿತ್ತು. ಚಂದಣ್ಣನು ತನಗೂ ಆ ರಾಟೆಯ ಹಗ್ಗಕ್ಕೂ ಹೋಲಿಸಿಕೊಂಡನು. ಆ ಹಗ್ಗ ನೀರನ್ನು ಮುಟ್ಟುತ್ತದೆ. ಅದಕ್ಕೆ ಮುಳುಗಬೇಕೆಂಬ ಆಸೆಯಿದ್ದರೂ, ಮೇಲಿರುವವರು ಬಿಡುವುದಿಲ್ಲ, ಪುನಃ ಮೇಲಕ್ಕೆಳೆದುಕೊಳ್ಳುತ್ತಾರೆ. ಪುನಃ ಅದು ನೀರನ್ನು ಮುಟ್ಟುತ್ತದೆ. ಹಾಗೆ ತಾನೂ ಸಾವನ್ನು ಮುಟ್ಟಿ ಮುಟ್ಟಿ ಹಿಂದಕ್ಕೆ ಬರುತ್ತಿರುವಂತೆ ಚಂದಣ್ಣನಿಗೆ ತೋರಿತು.

ಅಕ್ಕಿ ಬಸಿಯುವುದಕ್ಕೆ ನೀರು ಸಾಲದಾಯಿತೆಂದು ಕಾಣುತ್ತದೆ. ಅದಕ್ಕೇ ಅಂಥ ಪ್ರಚಂಡ ಬೆಳಕಿನಲ್ಲೂ ಮಂಕಾಗಿ ಉರಿಯುತ್ತಿದ್ದ ಒಂದು 'ಲಾಟೀನು' ಕೆಲವು ಹೆಂಗಸರಿಗೆ ದಾರಿ ತೋರಿಸುತ್ತಾ ಬಂದಿತು. ನಾಲ್ಕಾರು ಜನ ಹೆಂಗಸರ ನಡುವಿನ ಮೇಲೂ ಬಿಂದಿಗೆಗಳು. ಲಾಟೀನು ಬಂದು ಭಾವೀ ಕಟ್ಟೆಯ ಮೇಲೆ ಕುಳಿತಿತ್ತು. ಒಂದು ಬಿಂದಿಗೆ ಭಾವಿಗೆ ಇಳಿದಿತ್ತು. ಅದು ತುಂಬಿದ ಮೇಲೆ ಇಬ್ಬರು ಹೆಂಗಸರು ನಾಲ್ಕು ಕೈಗಳಿಂದ ಅದನ್ನು ಸೇದಿಕೊಂಡರು. ಅದು ಒಬ್ಬಳ ನಡುವಿನ ಮೇಲೆ ಕುಳಿತಿತ್ತು. ಅವರು ಮದುವೆ ಮನೆ ಕಡೆ ಹೊರಟರು. ಇವರ ಪೈಕಿ ಬಿಳಿ ಸೀರೆಯುಟ್ಟು ನಡುವಿಗೆ ಸೆರಗನ್ನು ಬಿಗಿದಿರುವವಳು ನಾಗು ಎಂಬುದು ಚಂದಣ್ಣನಿಗೆ ತಿಳಿದುಹೋಯಿತು.

ಬೆಳುದಿಂಗಳಲ್ಲಿ ಬಿಳಿ ಸೀರೆಯುಟ್ಟು 'ಮೋಹಿನಿ' ಅಲೆದಾಡುವುದಂತೆ. ಚಂದಣ್ಣನ ಪಾಲಿಗೆ ನಾಗುವು 'ಮೋಹಿನಿ' ಯಾದಳು. ಅವನಲ್ಲಿ ಹುದುಗಿದ್ದ ರಾಕ್ಷಸೀ ಲಾಲಸೆ ನಾಲಗೆ ನೀಡಿತು. ಸಮಾಜವು ತನಗೆ ಮಾಡಿದ ದ್ರೋಹಕ್ಕೆ ನಾಗುವಿನ ಮೇಲೆ ಸೇಡು ತೀರಿಸಿಕೊಳ್ಳುವುದೆಂದು ಚಂದಣ್ಣನ ಕ್ಷುದ್ರ ಮನಸ್ಸು ನಿರ್ಧರಿಸಿತು.

ನೀರು ತೆಗೆದುಕೊಂಡು ಹೋಗುವವರು ಆ ದೊಡ್ಡಯ್ಯನ ಮನೆಯ ಒತ್ತಿನಲ್ಲಿ ಹೋಗಿಯೇ ತೀರಬೇಕು ಅವೃಷ್ಟಕ್ಕೆ ನಾಗು, ಹಿಂದೆ ಸಿಕ್ಕಿಬಿದ್ದಳು. ದೊಡ್ಡಯ್ಯನ ಮನೆಯಲ್ಲಿ ಯಾರೂ ಇಲ್ಲ. ಮನೆಯ ಜಗಲಿಯ ಮೇಲೆ ಮಾತ್ರ ಚಂದಣ್ಣ ಬಂದು ಸೇರಿಕೊಂಡಿದ್ದಾನೆ. ನಾಗು ಅಲ್ಲಿಗೆ ಬಂದಳು. ಚಂದಣ್ಣನ 'ನಾಗು' ಎಂಬ ಶಬ್ದ ನಾಗುವಿನ ಮೈಯೆಲವನೂ ನಡುಗಿಸಿತು.

ನಾಗುವಿನ ಪುಣ್ಯವಿರಬೇಕು. ಅವಳು ಚೀರಿಕೊಳ್ಳಲಿಲ್ಲ. ಚಂದಣ್ಣ "ಸ್ವಲ್ಪ ನಿಂತ್ಕೊ! ನನಗೆ ಹೇಳಿಬಿಟ್ಟು ಹೋಗು! ನೀನೇ ನನ್ನ ಕಡೆ ಆಸೆ ತೀರಿಸಿ ನನ್ನ ಸಾಯಿಸ್ತೀಯೋ ಇಲ್ಲಾ—ನಾನೇ ಬಲವಂತ ಮಾಡಿ, ನಾವಿಬ್ಬರೂ ಸಾಯಬೇಕೋ ?—ನಾನು........ಹೆದರ್ಕ್ಕೋ ಬೇಡ........ಚಂದಣ್ಣ" ಎಂದು ಗುಡುಗಿದನು.

ಇವು ಹುಚ್ಚು ಹುಚ್ಚು ಮಾತು. ಯಾವ ಮಾತಾದರೇನು? ನಾಗುವಿಗೆ ಇದರಿಂದ ಜೀವ ಹೋಯಿತು. ಅವಳಿಗೆ ಚಂದಣ್ಣ ಸೆಜ್ಜೆಗೆ ಬಂದಿರುವುದು ಗೊತ್ತು. ಯಾವುದೋ ಮಾತಿನ ಮಧ್ಯೆ ಮುದ್ದಪ್ಪನವರು ಅವಳಿಗೆ ಹೇಳಿದ್ದರು. ಆದರೆ ಚಂದಣ್ಣ ಇಷ್ಟು ಭಯಾನಕವಾಗಿ ತನ್ನನ್ನು ಅಡ್ಡಗಟ್ಟುವನೆಂದು ತಿಳಿದಿರಲಿಲ್ಲ. ಅವಳಿಗೆ ಮಾತನಾಡುವ ಶಕ್ತಿ ಬರಲಿಲ್ಲ. ಸದ್ಯ, ದಾರಿಗಡ್ಡಲಾಗಿ ಚಂದಣ್ಣ ನಿಂತಿರಲಿಲ್ಲ. ತನ್ನ ನಡುಗುತ್ತಿದ್ದ ಕಾಲುಗಳನ್ನು ಜೋಡಿಕೊಂಡು ನಾಗು ಮುಂದುವರಿದುಬಿಟ್ಟಳು. ಚಂದಣ್ಣನಿಗೆ ಉತ್ತರ ಸಿಕ್ಕಲಿಲ್ಲ. ನಾಗುವಿಗೆ ಉತ್ತರಕೊಡದಿದ್ದುದೂ ಅಪಾಯವೆನ್ನಿಸಿತು. ಆದರೆ ಅವಳಿಗೆ ಸದ್ಯ, ಜನಗಳ ಗುಂಪು ಬೇಕು ಬೇಗ ಬೇಗ ನಡೆದು ಮನೆಗೆ ಸೇರಿಕೊಂಡಳು. ಅವಳು ಪುನಃ ಭಾವಿಯ ಕಡೆ ಬರುವಳೇ? ಅದಕ್ಕೆ ಉತ್ತರ ಹುಚ್ಚನಾದ ಚಂದಣ್ಣನಿಗೂ ಗೊತ್ತು. ಅವನು ಪುನಃ ಅಲ್ಲಿ ನಿಲ್ಲಲೇ ಇಲ್ಲ. ನಾಗುವಿಗೆ ತನ್ನ ಮಾತುಗಳು ಗಮನಕ್ಕೆ ಬಂದದ್ದೇ ಅವನಿಗೊಂದು ಲಾಭ.

ನಾಗು ಹೆಂಗಸರು ಸೇರಿಕೊಂಡಿದ್ದ ರೂಮಿನಲ್ಲಿ ಒಂದು ಜಾಗಮಾಡಿ-ಕೊಂಡು ನಿಟ್ಟುಸಿರು ಬಿಟ್ಟು ಬಿದ್ದುಕೊಂಡಳು. 'ಮೈಸೂರಿನ ಅರಸಿತಿ ಒಂದು ಚವರಿಗೆ ನೀರು ತರೋ ಅಷ್ಟ್ರಲ್ಲೇ ಸುಸ್ತಾಗಿಬುಟ್ಳು' ಎಂದು ಯಾರಾದರೊಬ್ಬರು, ಮನಸ್ಸಿನಲ್ಲಾದರೂ ಅಂದುಕೊಂಡಿರಲೇಬೇಕು. 'ಇಲ್ಲಾ—ನಾನೇ ಬಲವಂತಮಾಡಿ, ನಾವಿಬ್ಬರೂ ಸಾಯಬೇಕೋ' ಎನ್ನುವ ಮಾತು ನಾಗುವಿನ ಕಿವಿಯಲ್ಲಿ ಶ್ಮಶಾನದ ಭೇರಿಯಂತೆ ಮೊಳಗುತ್ತಿತ್ತು. ಅವಳ ಅಮಂಗಳವನ್ನು ಎತ್ತಿ ಹಾಡುತ್ತಿತ್ತು. ಸ್ವಲ್ಪ ಹೊತ್ತಿನಲ್ಲೇ ಅವಳಿಗೆ ಜ್ವರ ಬಂದದ್ದು ಎಲ್ಲರಿಗೂ ಆಶ್ಚರ್ಯವಾದರೂ ಅವಳಿಗೆ ಆಶ್ಚರ್ಯವೇನಲ್ಲ.

ರಾಜು, ಇದರಿಂದ ತುಂಬಾ ಘಾಬರಿಪಟ್ಟನು. ಎಲ್ಲ ಹೆಂಗಸರನ್ನೂ ಅಲ್ಲಿಂದ ಓಡಿಸಿ ತಾನೇ ಅವಳ ಪಕ್ಕದಲ್ಲಿ ಬಂದು ಕುಳಿತನು. ನಾಗುವಿಗೆ

ರಾಜುವಿನ ಸನ್ನಿಧಿ ಅಗತ್ಯವಾಗಿತ್ತು. ಅವಳು ರಾಜುವಿನ ಕೈಯನ್ನು ಭದ್ರ ವಾಗಿ ಎರಡು ಕೈಯಲ್ಲೂ ಹಿಡಿದು ಅದನ್ನು ತನ್ನ ಬಲಗೆನ್ನೆಯ ಕೆಳಗಿಟ್ಟು ಮಲಗಿಕೊಂಡಳು. ಅವಳ ಕೈಗಳು ನಡುಗುತ್ತಿದ್ದುವು. ಉಸಿರು ಬಿಸಿಲನ್ನು ಮೀರಿಸಿತ್ತು. ಅವಳೆದೆ ಪದೇಪದೇ ಬೆಚ್ಚುತ್ತಿತ್ತು. ರಾಜು, ಅವಳ ಬೆನ್ನು ಸವರಿದನು. ನಾಗು, "ನನಗೆ ಹೆದರಿಕೆಯಾಗುತ್ತೆ. ಹಿಂದೆ ಯಾರೋ ಇದ್ದಾರೆ, ಅವರನ್ನು ಕಳಿಸಿ" ಎಂದಳು.

ಅಲ್ಲಿ ಯಾರಾದರೂ ಇದ್ದರೆ ತಾನೆ ಕಳುಹಿಸುವುದು. ನಾಗು ಪುನಃ "ಹಿಂದೆ ನಿಂತಿರುವವರನ್ನು ಆಚೆಗೆ ಕಳಿಸಿ" ಎಂದಳು. ರಾಜು, "ನನ್ನ ಹತ್ತಿರ ನೀನು ಇರೋವಾಗ ಯಾರಿದ್ದರೇನು ಸುಮ್ಮನೆ ಮಲಕ್ಕೋ ನಾಗು" ಎಂದನು. ನಾಗುವಿಗೆ ಈ ಮಾತು ಧೈರ್ಯಕೊಟ್ಟಿತು. "ಹಾಗಾದರೆ ನೀವೆ ಲ್ಲಿಗೂ ಹೊರಟು ಹೋಗ್ಬೇಡಿ" ಅಂದಳು. ರಾಜು ನಕ್ಕನು. 'ನನ್ನ ಕೈ ನಿನ್ನ ಕೈಲೇ ಇದೆಯಲ್ಲ, ಅದನ್ನು ಇಲ್ಲೇ ಬಿಟ್ಟುಬಿಟ್ಟು ಹ್ಯಾಗೆ ಹೋಗೋದು' ಎಂದನು. ನಾಗು ತನ್ನ ಹಿಡಿತವನ್ನು ಇನ್ನೂ ಬಿಗಿಮಾಡಿದಳು.

ನಾಗು, ಮೂರನೇ ದಿನದಿಂದ ಹೊಸ ಹಟ ಹೂಡಿದಳು. 'ಮೈಸೂರಿಗೆ ಹೋಗೋಣ, ಮೈಸೂರಿಗೆ ಹೊರಟು ಹೋಗೋಣ' ಎನ್ನುವುದೇ ಅವಳ ಉದ್ಗಾರವಾಯಿತು. ಇನ್ನೂ ನಾಗುವಿನ ಆರೋಗ್ಯದ ವಿಷಯದಲ್ಲಿ ಅತೃಪ್ತಿ ಯಿಟ್ಟುಕೊಂಡಿದ್ದ ರಾಜುವಿಗೆ ಅವಳಿಗೆ ಸಮಾಧಾನ ಹೇಳುವುದೇ ಕಷ್ಟವಾಗು ತ್ತಿತ್ತು. "ನೀನು ಈ ತಪ್ಪುಮಾತುಗಳಾಡೋದನ್ನ ನಿಲ್ಲಿಸಿ ಹುಷಾರಾಗು. ಮೂರನೇ ದಿನವೇ ಮೈಸೂರಿಗೆ ಹೋಗೋಣ" ಎಂದು ಭರವಸೆಕೊಟ್ಟನು.

ನಾಗುವಿಗೆ ಹಳ್ಳಿಗಳೆಂದರೇ ಹೆದರಿಕೆ. ಹಳ್ಳಿಯ ಜನರು ಸದ್ಯಕ್ಕೆ ಅವಳಿಗೆ ಒರಟು ರಾಕ್ಷಸರಂತೆ ಕಂಡರು. ಅವಳಿಗೆ ಸಾಧ್ಯವಾದಷ್ಟು ಬೇಗ ಈ ಹಳ್ಳಿಗಳನ್ನು ಬಿಟ್ಟು ಬಹಳ ದೂರದ ಮೈಸೂರಿಗೆ ತಕ್ಷಣ ಹೋಗಬೇ ಕೆಂಬುದೇ ಹಂಬಲವಾಗಿತ್ತು. ಅದಕ್ಕೋಸ್ಕರ ಏನು ಬೇಕಾದರೂ ಮಾಡಲು ಅವಳು ಸಿದ್ಧಳಿದ್ದಳು. ಸೇರದಿದ್ದುದನ್ನು ತಿಂದಳು. ಬರದೇ ಇದ್ದ ನಿದ್ದೆ ಮಾಡಿದಳು. ಮನಸ್ಸಿಲ್ಲದ ನಗೆಯನ್ನು ನಕ್ಕಳು. ತನಗಾಗುತ್ತಿದ್ದ ಕಳವಳ ವನ್ನು ಬಚ್ಚಿಟ್ಟು ತಿರುಗಾಡಿದಳು. ಬೆಳಗಿಂದ ತಲೇನೋವೆನ್ನುತ್ತಿದ್ದ ರಾಜು

ವನ್ನು ಪೀಡಿಸಹತ್ತಿದಳು. “ನಾನೀಗ ಸರಿಯಾಗಿದೀನಿ. ಮೈಸೂರಿಗೆ ಹೋಗೋಣ”

ನಾಲ್ಕು ದಿನ ಒಟ್ಟಿಗೆ ನಿದ್ದೆ ಕೆಟ್ಟದ್ದಕ್ಕೆ ಏನೋ ರಾಜುವಿಗೆ ಅಂದು ಬೆಳಗ್ಗೆ ಎದ್ದಾಗಿನಿಂದ ತಲೆನೋವು ಅಂಥಹುದರಲ್ಲಿ ನಾಗುವಿನ ದೇಹಸ್ಥಿತಿಯ ಕಡೆಗೆ ಗಮನಕೊಟ್ಟನು. ನಾಗುವಿಗೆ ರಾಜುವಿನ ತಲೆನೋವನ್ನೂ ನಿರ್ಲಕ್ಷಿಸುವಷ್ಟು ಭೀತಿ ಉದ್ಭವಿಸಿತ್ತು. ಅವಳಿಗೆ ಎಲ್ಲೆಲ್ಲೂ ಕಾಣುತ್ತಿದ್ದುದು ಚಂದಣ್ಣನ ಘೋರವಾದ ಮುಖ. ಅದನ್ನು ತಪ್ಪಿಸಬೇಕಾದರೆ, ಮೈಸೂರಿನ ಹವ್ಯಾಸವೇ, ತೋರಿದ್ದ ಸಿದ್ಧಾಂತ ಪಥ.

“ನಾಗು, ನಿನ್ನ ಕಷ್ಟವೇ ಮುಖ್ಯವಾಗಿ ಹೋಯಿತು. ನನ್ನ ತಲೆ ನೋವು ನಿನಗೆ ಬೇಕಿಲ್ಲ” ಎಂದ. ರಾಜುವಿಗೆ ಕೊಂಚ ಬೇಸರಿಕೆಯೇ ಇತ್ತು.

“ಇಲ್ಲ, ನೀವಿಲ್ಲಿ ಬೇಕೂಂತಲೇ ಕಾಲಕಳೆಯುತ್ತಿದ್ದೀರಿ. ನಿಮ್ಮ ತಲೆ ನೋವು ನನ್ನದಾಗಿರಲಿ. ಮೈಸೂರಲ್ಲಿ ಎಲ್ಲ ಸರಿಹೋಗುತ್ತೆ. ನನ್ನನ್ನ ನೀವಿಲ್ಲಿ ಕೊಂದರೆ ಆಮೇಲೆ ನಿಮ್ಮ ತಲೆನೋವುಗಳನ್ನು ಯಾರೂ ನೋಡುವವರಿಲ್ಲ” ಎಂದಳು ನಾಗು, ಆತುರದಿಂದ.

“ಇಲ್ಲಿ ಏನಾದರೂ ನಿನಗವಮಾನವಾಯಿತೇ ನಾಗು?” ನಾಗು ಬೆಚ್ಚಿದಳು. “ಸತ್ಯವಾಗೂ ಇಲ್ಲ. ನನಗೇಕೋ ಹೆದರಿಕೆ ಅಷ್ಟೆ. ನನ್ನನ್ನಾದರೂ ಮೈಸೂರಿಗೆ ಕಳುಹಿಸಿಬಿಡಿ.” ರಾಜುವಿಗೆ ದಿಕ್ಕೇ ತೋಚಲಿಲ್ಲ. “ನಿನಗೆ ಹಿಡಿದದ್ದೇ ಹಟ. ನಾಳೇ ಹಾಳಾಗ್ಹೋಗೋಣ ಸುಮ್ಮನಿರು!” ಎಂದನು. ನಾಗು-ರಾಜು, ಇಬ್ಬರೂ ಈ ಮಾತಿನಿಂದ ಇಳಿದುಹೋದರು.

ನಾಗುವಿನ ಯೋಚನೆಯೊಂದು ಕಡೆ, ತಲೆಬಾಧೆಯೊಂದು ಕಡೆ, ರಾಜುವನ್ನು ಹಿಂಸಿಸುತ್ತಿದ್ದುವು. ಇದರ ಮಧ್ಯೆ ನಾಗರಾಜುವಿನ ಕಾಟ ಒಂದು ಕಡೆ. ಇದರಿಂದ ರಾಜು ಬೆಂಡಾದನು. ಅಂದಿನ ರಾತ್ರಿಯೆಲ್ಲ ರಾಜುವಿಗೆ ನಿದ್ದೆಯೇ ಇಲ್ಲ. ಸುಮಾರು ಮೂರು ಗಂಟೆ ರಾತ್ರಿಯಲ್ಲಿ ಮೈ ಚಳಿಚಳಿಯಾಯಿತು. ಪಕ್ಕದಲ್ಲಿ ಮಲಗಿದ್ದ ನಾಗರಾಜು ‘ಮುಲುಮುಲು’ ಎನ್ನುತ್ತಿದ್ದನು. ರಾಜುವಿಗೆ ಚಳಿ ಜಾಸ್ತಿಯಾಯಿತು. ಅವುಡು ಕಚ್ಚಿದ್ದರೂ ಎದೆಯೊಳಗೆ ಮಂಜುಗಡ್ಡೆಯು ಕುಣಿಯುತ್ತಿದ್ದ ಹಾಗಿತ್ತು. ಆ ರಾತ್ರಿಯಲ್ಲೂ ಜಗಲಿಯ ಮೇಲೆ ಮಲಗಿದ್ದ ಯಾರೋ ಒಬ್ಬರನ್ನು ಎಚ್ಚರಮಾಡಿ ಎರಡು ಮೂರು ಕಂಬಳಿ

ಗಳನ್ನು ಒದಗಿಸಿಕೊಂಡನು. ಆದರೂ ಚಳಿ ನಿಲ್ಲಲೇ ಇಲ್ಲ. ನಾಗರಾಜುವಿನ ನಿದ್ದೆಗೆ ಭಂಗ ಬಂದು ಅವನು ನಿದ್ದೆಗಣ್ಣಲ್ಲೇ ಅಳತೊಡಗಿದನು. ಅವನ ಅಳು ಒಳಗೆ ಹೆಂಗಸರ ಗುಂಪಿನಲ್ಲಿ ಕಣ್ಣುಬಿಟ್ಟುಕೊಂಡೇ ಮಲಗಿದ್ದ ನಾಗುವಿಗೂ ಕೇಳಿಸಿತು.

ರಾಜುವು ಚಳಿಯಿಂದ ಮುಕ್ತನಾಗಿ ಬೆವರಿದಾಗ ಐದು ಗಂಟೆಯ ಸಮಯ. ಆಗ ಅವನ ಮೈ ಇನ್ನೂ ಬಿಸಿಯಾಗಿತ್ತು. ಮೊದಲನೇ ಕೋಳಿ ಕೂಗಿದಾಗ ಅವನ ಕಣ್ಣಿಗೆ ನಿದ್ದೆ ಹತ್ತಿತು.

ಮೂರನೆಯ ದಿನವೂ ನಾಗುವನ್ನು ಕೇಳಿಕೊಂಡನು.

"ನಾಳೆ ಖಂಡಿತ ಹೊರಟುಹೋಗೋಣ ನಾಗಾ! ನಿನ್ನೆ ರಾತ್ರಿ ಕೊಂಚ ಚಳಿ ಬಂದಹಾಗಿತ್ತು. ಇವತ್ತು ರಾತ್ರಿಯೂ ಸ್ವಲ್ಪ ನೋಡಿಕೊಂಡು ನಾಳೆ ಸಾಯಂಕಾಲ ಮೈಸೂರಲ್ಲೇ ಇರೋ ಹಾಗೆ ಮಾಡೋಣ."

ನಿಷ್ಠುರಳಾಗಿದ್ದ ನಾಗುವಿಗೆ ರಾಜುವಿನ ಮಾತು ಖಂಡಿತವೆಂದು ತೋರಲಿಲ್ಲ. ಆದರಿಂದ ಅವಳಿಗೆ ಮತ್ತಷ್ಟು ರೇಗಿತು.

"ನನ್ನ ಪ್ರಾಣದ ಮೇಲೆ ನಿಮಗೆ ಹೆದರಿಕೆಯಿಲ್ಲ. ನಿಮ್ಮ ಮಾತು ನಡೆದರೆ ಸರಿ. ನಿನ್ನೆ ನಾಳೆಯೆಂದಾಯಿತು; ಇವತ್ತೂ ಅದೇ ಮಾತು. ಅಯ್ಯೋ ಹೆಂಗಸರೆ! ನಿಮ್ಮ ಬಾಳೇ ಇಷ್ಟು. ಹುಟ್ಟಿದ ಹೆಣ್ಣು ಮಕ್ಕಳನ್ನೆಲ್ಲ ಕತ್ತು ಹಿಸುಕಿ ಕೊಲ್ಲಬಾರದೇ ಅವರ ಅಪ್ಪ ಅಮ್ಮ."—ನಾಗು ಹಣೆಯನ್ನು ಗುದ್ದಿಕೊಂಡಳು.

ರಾಜುವಿಗೆ ಹುಚ್ಚು ಹಿಡಿದಂತಾಯಿತು. ಅವನು ಮೊದಲಿನಿಂದಲೂ ನಿಧಾನಿಯಲ್ಲದಿದ್ದರೆ ನಾಗುವಿನ ಕೆನ್ನೆಯ ಮೇಲೊಂದು ಏಟು ಖಂಡಿತ ತಪ್ಪುತ್ತಿರಲಿಲ್ಲ. ಸುಮ್ಮನೆ ಹಲ್ಲುಕಡಿದು ಕಣ್ಮರೆಯಾಗಿ ಹೋದನು. ತನ್ನ ಕಷ್ಟ ಇನ್ನೊಬ್ಬನದಕ್ಕಿಂತ ಹೆಚ್ಚೆಂಬ ನಂಬಿಕೆ ಇಬ್ಬರಲ್ಲೂ ಇದೆ. ಅದೇ ಅವರಿಬ್ಬರನ್ನೂ ಇಷ್ಟು ತಾಳ್ಮೆಯ ಎಲ್ಲೆ ಮೀರಿಸಿದುದು.

ರಾಜು ತನ್ನ ಹೆಂಡತಿ ಮಕ್ಕಳನ್ನು ಅಂದೇ ಹೊರಡಿಸಿಬಿಟ್ಟನು. ನಾಗುವು ಹೊರಟಾಗಲೂ ಅಸುಖಿಯಾಗಿಯೇ ಇದ್ದಳು. ರಾಜುವು ಮೌನದ ಮುದ್ದೆಯಾಗಿದ್ದನು. ಅವನ ಬಳಲಿದ ಕಣ್ಣುಗಳು ಸಪ್ಪೆಯಾಗಿದ್ದುವು. ಅವನು ಗಾಡಿಯ ಮೇಲೆ ಹತ್ತಿ ಕುಳಿತು, ಎರಡು ಕಿವಿಗಳನ್ನೂ ಸೇರಿಸಿ ತಲೆಗೆ

ಒಂದು ಮಫ್ಲರನ್ನು ಬಿಗಿದುಬಿಟ್ಟನು. ಗಾಡಿ ಹೊರಟು, ಸೆಜ್ಜೆಯನ್ನು ಹಿಂದೆ ಬಿಟ್ಟಾಗ ನಾಗುವಿಗೆ ರಾಜುವಿನ ಪರಿಸ್ಥಿತಿಯು ಅರ್ಥವಾಯಿತು. ಅಷ್ಟರಲ್ಲೇ ರಾಜುವು ಮಲಗಿಬಿಟ್ಟಿದ್ದನು. ಇನ್ನೂ ಇಬ್ಬರೂ ಕೋಪದಿಂದ ಮಾತನಾಡಿಸೇ ಇರಲಿಲ್ಲ. ನಾಗುವೇ ಕಡೆಗೆ ಸೋತಳು. ತಕ್ಷಣ, ಹತ್ತಿರವೇ ಇದ್ದ ರಾಜುವಿನ ಹಣೆಯಮೇಲೆ ತನ್ನ ಕೈಯಿಟ್ಟಳು. ಅದು ಹಬೆಯಾಡುತ್ತಿತ್ತು.

೧೩

ಮಾರನೆಯ ದಿನವೂ ರಜವು ಮಿಕ್ಕಿತ್ತು. ಅದು ರಾಜುವಿನ ವಿಶ್ರಾಂತಿಗೆಂದಾಯಿತು. ಅವನು ಮೈಸೂರಿನ ಮನೆಯನ್ನು ತಲಪಿದಾಗಲೇ ನೆಟ್ಟಗೆ ರೂಮಿಗೆ ಹೋಗಿ ಮಂಚದ ಮೇಲೆ ಮಲಗಿಬಿಟ್ಟನು. ನಾಗುವಿಗೆ ಅದು ತನ್ನ ಮೇಲಿನ ಕೋಪವಲ್ಲವೆಂಬುದು ತಿಳಿದದ್ದು ಅದರ ನಾಳೆಗೆ. ಈಗೀಗ ರಾಜುವಿಗೆ ಚಳಿಯೇ ಇಲ್ಲದೆ ಬರೀ ಜ್ವರವೇ ಕಾಯತೊಡಗಿತ್ತು. ಆ ಜ್ವರ ಅವನ ಅಲ್ಪ ಸ್ವಲ್ಪ ಮಾತಿಗೂ ಅವಕಾಶ ಕೊಡುತ್ತಿರಲಿಲ್ಲ.

ನಾಗುವಿಗೆ ಅಸ್ವಸ್ಥರ ಉಪಚಾರವೇ ತಿಳಿಯದು. ಅವಳು ತುಂಬಾ ಹೆದರಿ ಪಕ್ಕದ ಮನೆಯ ಸರಸ್ವತಿಯನ್ನು, ಅವರ ಮಾವನನ್ನು ಬಂದು ನೋಡುವಂತೆ ಏರ್ಪಡಿಸಲು ಕೇಳಿಕೊಂಡಳು. ಸರಸ್ವತಿಯು ಮಾವ ಬಂದು ನೋಡಿದರು. ಇದೇ ರಾಜುವಿಗೆ ಅವರ ಪರಿಚಯು. ಅವರ ಕೂಡ ಅವನಿಗೆ ಸಲಿಗೆ ಇಲ್ಲ. ಹೇಗೋ ಮಾತನಾಡಿ ಮುಗಿಸಿದನು. ತಾನೇ ಕಷ್ಟಪಟ್ಟು ಗಾಡಿಮಾಡಿಕೊಂಡು ಆಸ್ಪತ್ರೆಗೆ ಹೋಗಿ ಬಂದನು. ಸರಸ್ವತಿ ತನ್ನ ತಮ್ಮ ಶ್ರೀನಿವಾಸನನ್ನು ಔಷಧ ತಂದುಕೊಡಲು ನೇಮಿಸಿದಳು.

ರಾಜು ಮತ್ತೂ ಎರಡು ದಿನ ಆಫೀಸಿಗೆ ಹೋಗಲೇ ಇಲ್ಲ. ಔಷಧವನ್ನು ಬೆಳ್ಳಿಯ ಬಟ್ಟಲಿಗೆ ತುಂಬುತ್ತ, ನಾಗು ಕೇಳಿದಳು.

"ಇನ್ನೂ ಕೊಂಚ ದಿನ ರಜ ತಗೋಳಿ. ನಾಲ್ಕು ದಿನಕ್ಕೇ ಹೀಗೆ ಮಾಡಿದ ಜ್ವರ, ನಿಂತಮೇಲೂ ಎರಡು ದಿನ ಬೇಕು ಸುಧಾರಿಸ್ಕೊಳ್ಳೋಕ್ಕೆ!"

"ಇನ್ನು ಹತ್ತು ದಿನದ ರಜಕ್ಕೆ ನೆನ್ನೆಯೇ ಬರೆದೆ ಏನು ಮಾಡ್ತಾರೋ ಏನೋ ಮ್ಯಾನೇಜರು?"

"ಅವರು ಏನು ಮಾಡಿದರೇನು ಏನು ಬಿಟ್ಟರೇನು? ಗೋಡೆ ಭದ್ರವಿಲ್ಲದೇ ತೊಲೆ ಏರಿಸೋಕ್ಯಾಗುತ್ಯೆ ? "

"ಆ ಮಾತು ಹಾಗಿರಲಿ. ನಿನ್ನ ಗತಿಯೇನು ಹೇಳು. ಆ ನಾಗರಾಜು ಒಬ್ಬ, ನಾನೊಬ್ಬ, ಅಡಿಗೆ, ಗಂಜಿ, ಅಂತ ಎಲ್ಲಕ್ಕೂ ನೀನೊಬ್ಬಳೇ ದುಡೀಬೇಕಲ್ಲ."

"ನಾ ಮಲಗಿದ್ದಿದ್ರೇ ನೀವು ಅದ್ನೆಲ್ಲಾ ಮಾಡ್ಲೇಬೇಕಾಗಿರ್ಲಿಲ್ವೆ ? "

"ನಾನೂ! ಹ್ಞೂ—ಇದ್ನೆಲ್ಲಾ ಮಾಡ್ತಾ ಇದ್ದೆ. ಆಫೀಸೂ ಅಂತ್ಹೇಳಿ ತಲೆ ತಪ್ಪಿಸಿಕೊಳ್ತೋದೇ! ನಾಗು, ಊರಿಗೆ ಕಾಗದ ಬರೀಲೆ? "

"ಸರಿಹೋಯ್ತು. ನಾನು ಹೆದರಿಕೊಂಡೆ ಅಂತ ತಿಳ್ಕೊಂಡ್ರೇನೂ? ಕಾಗದವೂ ಬೇಡಿ, ಏನೂ ಬೇಡಿ; ಎಲ್ಲ ಸರಿಹೋಗುತ್ತೆ, ಸುಮ್ನಿರಿ."

"ಎಲ್ಲ ಸರಿಹೋಗ್ಬಿಟ್ಟಮೇಲೇನುಮಾಡ್ತಾರ್ಯೇ? ನಾಗೂನೂ ನಾಗ-ರಾಜೂನೂ ಸೇರ್ಕೊಂಡು ಅಳ್ತಾರೆ ಅಷ್ಟೆ."

ನಾಗು ಸಿಡುಕಿದಳು. ಹುಬ್ಬು ಗಂಟಿಕ್ಕಿದಳು.

"ನೀವು ಹೀಗೆಲ್ಲ ಮಾತಾಡ್ತಾ ಇದ್ರೆ ನಾನು ಹೊರಟ್ಹೋಗ್ತೀನಿ ನೋಡಿ."

ಔಷಧಿ ಕುಡಿದ ಮೇಲೆ ರಾಜು ಒಂದು ಕಾಗದವನ್ನು ಬರದೇ ಬರೆದನು. ಶ್ರೀನಿವಾಸನ ಕೈಲಿ ಕೊಟ್ಟು ಪೋಸ್ಟು ಮಾಡಿಸಿಯೂ ಬಿಟ್ಟನು. ಅವನ ದೇಹಸ್ಥಿತಿ ಅವನಿಗೆ ತಿಳಿಯದೇ. ಅವನ ಜ್ವರವು ಬರುತ್ತ ಬರುತ್ತಾ ದಿನವನ್ನೆಲ್ಲಾ ಆಕ್ರಮಿಸಿಕೊಳ್ಳುತ್ತಾ ಬಂದಿತು. ಸದಾ ಅವನ ಮೈ ಬೆಚ್ಚಗೇ ಇರತೊಡಗಿತು. ಹುತ್ತಕ್ಕೆ ಹಾಲೆರದಂತೆ ಔಷಧವೇನೋ ತಪ್ಪದೇ ಗಂಟಲೊಳಗಿಂದ ಕೆಳಗಿಳಿಯುತ್ತಿತ್ತು.

ನಾಗುವು ಮಾತ್ರ ತುಂಬಾ ಎಚ್ಚರಿಕೆಯಿಂದಿದ್ದಳು. ಅವಳಿಗೆ ಒಂದೊಂದು ಸಮಯ ಬುದ್ಧಿಯೇ ಓಡುತ್ತಿರಲಿಲ್ಲ. ದಿನ ದಿನಕ್ಕೂ ಹೆಚ್ಚುತ್ತಿದ್ದ ಅವಳ ಭಯದ ಜೊತೆಗೆ ರಾಜುವೂ ಒಂದೊಂದು ಮಾತನಾಡಿ ನಾಗುವಿನ ಮನಸ್ಸನ್ನೇ ಕೆಡಿಸಿಬಿಡುತ್ತಿದ್ದನು. ಸಾಯಂಕಾಲ ಸರಸ್ವತಿ ಬಂದು ನಾಗುವನ್ನು ಕೂಗಿದಾಗ ಅವಳು ಅಡಿಗೆಮನೆಯಲ್ಲಿದ್ದಳು. ಸರಸ್ವತಿಗೆ ಅವಳನ್ನು ನೋಡಿದಾಗ, ಅಳುತ್ತಿದ್ದಂತೆ ತೋರಿತು.

"ಇದೇನು ಮಾಡ್ತಾ ಇದ್ದೆ ನಾಗಮ್ಮ?"

"ಸ್ವಲ್ಪ ಕಾಫಿಗಿಡ್ತಿದ್ದೆ."

"ಇದ್ಲೊಲೆ ಮೇಲೆ ತಾನೆ?"

"ಹ್ಞೂ ?! ಅದ್ಯಾಕೆ ಹಾಗೆ ಕೇಳ್ತೀಯೆ?"

"ಹೊಗೆ ಇಲ್ಲ, ಏನಿಲ್ಲ. ಇದ್ಯಾಕೆ ನಿನ್ನ ಮುಖ ಇಷ್ಟು ಕೆಂಪಗಿದೆ? ಕಣ್ಣು ಚಿಕ್ಕದಾಗಿವೆ?"

"ಸರಿಸರಿ. ಅಳ್ತಾ ಇದ್ನಂತೆ, ಸುಮ್ಮನಿರು ನಕ್ಕಾರು!"

"ಹೋಕ್ಕೊಳ್ಳಿ, ಈಗ ಹ್ಯಾಗಿದೆಯೋ ನಿಮ್ಮ ಯಜಮಾನ್ರಿಗೆ?"

"ಏನು ಹೇಳೋದೇ? ನನಗಂತೂ ಏನೂ ತೋರೊಲ್ಲಮ್ಮ. ದಿನದಿನಕ್ಕೆ ಅವರ ಕಷ್ಟ ಹೆಚ್ಚುತಾನೇ ಇದೆ. ನನ್ನಲ್ಲಿ ನನಗೆ ಜೀವವೇ ಇಲ್ಲ."

ಗೆಳತಿ ಎದುರಿಗೂ ಕಣ್ಣೀರನ್ನು ಬಚ್ಚಿಡುವುದು ಸಾಧ್ಯವೆ? ಚಿತ್ರದ ದೇವರೆದುರಿಗೆ ಬಿದ್ದ ಕಣ್ಣೀರು, ಸರಸ್ವತಿಯೆದುರಿಗೂ ಹನಿಯಾಡಿತು. ನಾಗುವಿನ ಕಣ್ಣಂಚಿನಿಂದ ಒಂದು ದೊಡ್ಡ ತೊಟ್ಟು ಕಳಚಿಬಿತ್ತು.

"ಛಿ! ಹುಚ್ಚಿ. ಸಣ್ಣ ಹುಡುಗಿಯ ಹಾಗೆ ಆಡ್ತೀಯಲ್ಲೆ. ನಿಮ್ಮ ಯಜಮಾನರಿಗೆ ಸ್ವಲ್ಪ ಜ್ವರ ಬಂದರೆ ಹೀಗೆ ಮಗುವಾಗಿ ಬಿಡ್ತೀಯಲ್ಲ. ಹಾಗಾದರೆ ಮನುಷ್ಯರಿಗೆ ಕಷ್ಟವೇ ಬರಬಾರದು ಅನ್ನು."

"ಅದಕ್ಕಲ್ಲ ಸರಸಿ, ನಾನು ಬೆದರೋದು. ಅವರಿಗೆ ಮೈ ಸುಡುತಾ ಇದ್ದಾಗ್ಲೇ ತಮಾಷೆಯಾಗಿ ಒಂದೊಂದು ಮಾತಾಡ್ಬಿಡ್ತಾರೆ, ಅದನ್ನು ಕೇಳುವಾಗ ಎದೆ ಒಡೆದುಹೋದ ಹಾಗಾಗುತ್ತೆ. ನಿನಗೇನು ಗೊತ್ತು."

"ಅಯ್ಯೊ ಬಿಡೆ. ಸಾವು ಅನ್ನೋದು ಸಂತಾನದ ಹಾಗೆ, ಪದೇ ಪದೇ ಕೇಳ್ಕೊಳ್ಳೋರ್ಗೆ ಒದಗೋದೇ ಇಲ್ಲ. ಅದಕ್ಕೆ ಹೆದರೋರ್ಗೇನೆ ಮೈಮೇಲೆ ಬಂದು ಬೀಳೋದು."

ಅಷ್ಟರೊಳಗೆ ನಾಗರಾಜು ಸರಸ್ವತೀ ಕಂಡು ಓಡಿಬಂದನು. ಸರಸ್ವತಿ ಒಂದು ಪಕ್ಕಕ್ಕಾದಳು. ನಾಗು, ಅವನನ್ನು ತನ್ನ ಕಡೆಗೆಳೆದುಕೊಂಡಳು. ಸರಸ್ವತಿ, 'ಏಯ್! ತಾಳೊ, ಕೊಂಚ ದೇವರ ಮನೆ ತೊಳೆದು ಬರ್ತೀನಿ. ಆಮೇಲೆ ಮೈಮೇಲೆ ಬಿದ್ದು ಒದ್ದಾಡೋವಂತೆ.' ಎಂದಳು. ನಾಗರಾಜು ಹಟ

ಮಾಡಿದ್ದರಿಂದ ಅವಳು ತನ್ನ ಮಡಿಗೆ ಹೆದರಿಕೊಂಡು ಮನೆಗೆ ಓಡ ಬೇಕಾಯಿತು.

ಅಂದಿನ ರಾತ್ರಿ ರಾಜು ತುಂಬಾ ಕಷ್ಟಪಟ್ಟನು. ಜ್ವರದಿಂದ ಮೈ ಬೇಯು ತ್ತಿತ್ತು. ಇಷ್ಟು ದಿನವೂ ತಡೆದುಕೊಂಡಿದ್ದ ನರಳುವಿಕೆಗಳು ಹೊರಬೀಳಲಾ ರಂಭಿಸಿದುವು. ಅವನು ಒಂದು ಸರ್ತಿ 'ಅಮ್ಮಾ' ಎಂದು ಕೂಗಿದರೆ ನಾಗುವು ನಡುಗುತ್ತಿದ್ದಳು. ನಾಗರಾಜುವಿಗೆ ಇವರಿಬ್ಬರ ಕಷ್ಟವೂ ತಿಳಿಯದು. ಅವನ ಮನಸ್ಸಿಗೆ ಇಬ್ಬರೂ ತನ್ನನ್ನು ಉಪೇಕ್ಷೆ ಮಾಡುತ್ತಿರುವರೆಂದು ತೋರಿರ ಬಹುದು. ಆದರಿಂದಲೇ ಅವನು ಎಂದಿಗಿಂತ ಹಟಹಿಡಿಯುತ್ತಿದ್ದನು. ನಾಗು ವಿನ ಇವೆಲ್ಲ ತಾಪತ್ರಯಗಳೂ ಅವಳನ್ನು ಶಕ್ತಿಗುಂದಿಸಿದುವು. ಅವಳ ದೇಹವು ಸೊರಗಲಾರಂಭಿಸಿತು. ರಾಜುವನ್ನು ಕುತೂಹಲದಿಂದ ನಿರೀಕ್ಷಿಸುತ್ತಿದ್ದ ಅವಳ ಕಣ್ಣುಗಳನ್ನು ಬಿಟ್ಟು ಮಿಕ್ಕ ಮುಖವೆಲ್ಲವೂ ಮಂಕಾಯಿತು. ಅವಳ ಶುಭ್ರತೆ ಎಲ್ಲಿಯೋ ಹೋಗಿ ಅವಿತುಕೊಂಡಿತು. ಅವಳ ದೃಷ್ಟಿ, ಯೋಚನೆಗಳೆಲ್ಲವೂ ರಾಜುವಿನಲ್ಲಿ ಕೇಂದ್ರೀಕರಿಸಲ್ಪಟ್ಟಿದ್ದುವು

"ನಾಗು, ನಾಗರಾಜು, ಆಫೀಸಿನಿಂದ ಬಂದನೇ?" ರಾಜು ಕೂಗಿದನು. ನಾಗು ಹತ್ತಿರ ಕುಳಿತು 'ಶ್, ಮೈ ತುಂಬಾ ಹೊದ್ದುಕೊಳ್ಳಿ' ಎಂದು ಶಾಲನ್ನು ತುಂಬಾ ಹೊದ್ದಿಸಿದಳು. ರಾಜುವಿಗೆ ತೃಪ್ತಿಯಾಗಲಿಲ್ಲ. "ನಾಗರಾಜೂ ಸ್ಕೂಲೆಲ್ಲಿದೆ?" ಎಂದು ಕೇಳಿದನು. "ಯಾವ ನಾಗರಾಜೂ ಸ್ಕೂಲು! ಹಾಗೆಲ್ಲ ಮಾತಾಡಿದರೆ ಸುಮ್ಮನೆ ಗಂಟಲು ಆರುತ್ತೆ" ನಾಗುವು ನಿಟ್ಟುಸಿರು ಬಿಟ್ಟು ಹೇಳಿದಳು. ರಾಜು ಎಚ್ಚೆತ್ತುಕೊಂಡು 'ನಾಗು, ಊಟಮಾಡಿದೆಯಾ?' ಎಂದು ಬಾಯನ್ನು ತಹಬಂದ ಸ್ಥಿತಿಗೆ ತಂದು ಕೇಳಿದನು. ನಾಗು 'ಹ್ಞೂ' ಅಂದಳು.

"ಊರಿಂದ ಯಾರೂ ಬರಲಿಲ್ಲವೆ?"

"ಯಾಕೆ?"

"ಕಾಗದ ಬರೆದಿದ್ದೆ. ಹಾಗಾದರೆ ಆ ಹುಡುಗ ಪೋಸ್ಟುಮಾಡಿದನೋ ಇಲ್ಲವೊ?"

"ಕಡೆಗೂ ಕಾಗದ ಬರೆದಿದ್ದೀರೇನು? ಹಳ್ಳಿ ಪೋಸ್ಟು. ಇವತ್ತು ನಾಳೇಲಿ ಯಾರಾದರೂ ಬರಬಹುದು"

"ಅಲ್ಲಿ ಅವರಿಗೆ ಕಾಗದ ಹೋಗೋ ಹೊತ್ತಿಗೆ ಇಲ್ಲಿ ನನಗೆ ಪ್ರಾಣ ಹೋಗಿರುತ್ತೆ"

ನಾಗು ಬಾಯಿ ಮುಚ್ಚಿದಳು. ನಾಗುವಿನ ಕೈ ಅವನ ಪಾಲಿಗೆ ಮಂಜುಗೆಡ್ಡೆಯಷ್ಟು ಆನಂದವಾಗಿತ್ತು. ಅದೇ ಕೈಯನ್ನು ತೆಗೆದು ತನ್ನ ಹಣೆತುಂಬಾ ಇಟ್ಟುಕೊಂಡನು. ನಾಗುವಿನ ಕೈಬಿಸಿಯಾಗುವ ಹೊತ್ತಿಗೆ ಮನೆ ಮುಂದೆ ಗಾಡಿ ನಿಂತ ಶಬ್ದವಾಯಿತು. ನಾಗು ಎದ್ದು ಬೀದಿಯ ಬಾಗಿಲಲ್ಲಿ ಇಣುಕಿದಳು. ಗಾಡಿಯಿಂದ ಕೆಳಕ್ಕೆ ಶಿವಪ್ಪನವರು ಧುಮುಕಿದರು. ಪುನಃ ನಾಗುವು ಕೊಟಡಿಯೊಳಕ್ಕೆ ಬಂದು 'ಮಾವಯ್ಯ ಅವರೆಲ್ಲ ಬಂದೇ ಬಂದರು' ಎಂದಳು. ರಾಜು 'ಎದ್ದು ಕೂತ್ಕೊಳ್ಳೋಣ' ಎಂದು ಕೈನೀಡಿದನು. ನಾಗು ಅವನನ್ನು ಎತ್ತಿ, ದಿಂಬನ್ನೊರಗಿಸಿ ಕುಳ್ಳಿರಿಸಿದಳು. ಅಷ್ಟರೊಳಗೆ ಶಿವಪ್ಪ ನವರು ರೂಮಿನೊಳಕ್ಕೆ ಬಂದಿದ್ದರು. ನಾಗು ಹೊರಗೆ ಬಂದು ಹಜಾರದಲ್ಲಿ ನಿಂತಿದ್ದ ತಮ್ಮ ಅತ್ತೆಯವರನ್ನೂ ಕಂಡಳು.

ನಾಗುವಿಗೆ ಕೊಂಚಕೊಂಚವಾಗಿ ಜೀವ ಕೂಡಿಹಾಕಿಕೊಂಡಿತು. ಎಷ್ಟಾದರೂ ಜನರ ಮಧ್ಯೆ ಇರುವ ಕಷ್ಟ ಸ್ವಲ್ಪವೇ. ಒಬ್ಬೊಂಟಿಗರಿಗೆ ಅದು ಸ್ವಲ್ಪ ಕಷ್ಟವೇ. ಆದರೂ ನಾಗುವಿಗೆ ಹೆದರಿಕೆ ತಗ್ಗಿದಂತೆ ಖಾಯಿ ಲೆಯ ಬೆದರಿಕೆ ತಗ್ಗಲಿಲ್ಲ. ಅದು ರಾಜುವಿನ ತಂದೆತಾಯಿಗಳಿಗೂ ಹೆದರ ಲಿಲ್ಲ. ದಿನದಿನಕ್ಕೆ ಅದರ ಶಕ್ತಿ ಜಾಸ್ತಿಯಾಯಿತು. ಶಿವಪ್ಪನವರೂ ಘಾಬರಿ ಪಟ್ಟು ಮನೆಗೇ ಒಬ್ಬ ಡಾಕ್ಟರನ್ನು ಕರೆಸಿದರು.

ರಾಜುವನ್ನು ನೋಡಿದ ಡಾಕ್ಟರ ಮುಖದಲ್ಲಿ ಕಳೆಯಿತ್ತು. ನಾಗು ವಿಗೆ ಧೈರ್ಯ ಬಂದಿತು. ಆದರೆ ಅವರು ರಾಜುವಿನ ಕಾಯಿಲೆಗೆ ಮಾಡಿದ ನಾಮಕರಣ ಎಲ್ಲರನ್ನೂ ಹೆದರಿಸಿತು. 'ಟೈಫಾಯಿಡ್.' ಅದನ್ನು ನಾಗು ಪ್ರತಿಯೊಂದು ಸರ್ತಿ ತನ್ನ ಮನಸ್ಸಿನಲ್ಲಿ ಹೇಳಿಕೊಂಡಾಗಲೂ ಅವಳಿಗೆ ತನ್ನೆದೆಯಲ್ಲಿ ಒಂದು ತೋಪು ಹಾರಿಸಿದ ಅನುಭವವಾಗುತ್ತಿತ್ತು. ಇದಕ್ಕೆ ಸರಿಯಾಗಿ ರಾಜುವಿನ ಮಾತುಗಳೂ ನಾಗುವನ್ನು ಕೊಲ್ಲಹತ್ತಿದುವು.

ಡಾಕ್ಟರು ಕೆಲವು ದಿನ ಬಹಳ ಎಚ್ಚರಿಕೆಯಿಂದಿರಬೇಕೆನ್ನುತ್ತಿದ್ದರು. ಅಂತಹ ದಿನ ಅವರು ಎರಡು ಬಾರಿ ಮನೆಗೆ ಬಂದು ರಾಜುವನ್ನು ನೋಡಿ ಕೊಂಡು ಹೋಗುತ್ತಿದ್ದರು. ಶಿವಪ್ಪನವರ ಜೇಬಿರುವವರೆಗೂ ಡಾಕ್ಟರಿಗೆ

ಹೆದರಿಕೆಯಿಲ್ಲ. ಆದುದರಿಂದಲೇ ಏನೋ ಅವರು ವಿಕ್ರಮರಿಗೂ ಧೈರ್ಯ ಹೇಳುತ್ತಿದ್ದರು. ರಾಜುವಿಗೆ ಜ್ವರ ಬರಲು ಮೊದಲಿಟ್ಟ ಇಪ್ಪತ್ತೊಂದನೇ ದಿನ ಅವರು ಇಲ್ಲೇ ಒಂದು ಗಂಟೆಯ ಹೊತ್ತಿದ್ದರು. ಆ ದಿವಸ ಬಲು ಕೆಟ್ಟದ್ದಂತೆ. ಈ ಕಾಯಿಲೆಗೆ ಅಂದೇ ಸತ್ವ ಪರೀಕ್ಷೆಯಂತೆ.

ಮಾರನೇ ದಿನ ಡಾಕ್ಟರು ನಾಗರಾಜುವನ್ನು ಮಾತನಾಡಿಸಿದ್ದೂ ಆಡಿಸಿದ್ದೆ. ಶಿವಪ್ಪನವರೊಡನೆ ನಕ್ಕಿದ್ದೂ ನಕ್ಕಿದ್ದೇ. ರಾಜುವಿನ ಬೆನ್ನು ತಟ್ಟುತ್ತಾ ಅವರಂದರು "ಈ ವಿಷಮಶೀತಜ್ವರ, ಜೂಜಾಡಿದ ಹಾಗೆ ಮಿಸ್ಟರ್ ರಾಜಶೇಖರ್. ನಿನ್ನೆ ಕಳೆದುಹೋದಮೇಲೆ, ಇನ್ನು ಎಷ್ಟು ಜ್ವರ ಬಂದರೂ ಪರವಾಗಿಲ್ಲ. ಇಲ್ಲಿಂದೀಚೆಗೆ ನೀವು ಪೈಲ್ವಾನರಾಗೋದೊಂದೇ ಬಾಕಿ."

"ಹಾಗಂದ್ರೇನು ಸಾರ್!" ರಾಜು ಆಶ್ಚರ್ಯಪಟ್ಟನು.

"ಅದು ಹಾಗೇ ಕಂಡ್ರಿ ಇಲ್ಲ—ಕೈಕೊಟ್ಟುಬಿಡುತ್ತೆ. ಇಲ್ಲ—ಮೈಕಟ್ಟಿ ಕೊಡುತ್ತೆ. ಅದು ಟೈಫಾಯಿಡಿನ ಲಕ್ಷಣ." ಎಂದು ಹೇಳಿ ಡಾಕ್ಟರು ಹೊಗಳಿಸಿಕೊಳ್ಳುತ್ತಾ ಹೊರಟುಹೋದರು.

ಆದರೆ ನಾಗು ಮಾತ್ರ ರಾಜುವಿಗೆ ಔಷಧವನ್ನು ಕುಡಿಸುವುದನ್ನು ಬಿಡಲಿಲ್ಲ. ಪ್ರತಿಯೊಂದು ಹೊತ್ತೂ ಅವಳೇ 'ಔನ್ಸ್ ಗ್ಲಾಸ್' ಹಿಡಿದುಕೊಳ್ಳಬೇಕು, ಔಷಧ ಅವಳ ಕೈಲಿದ್ದ ಹಾಗೇ ಅದು ರಾಜುವಿನ ಬಾಯೊಳಗೆ ಹೋಗಬೇಕು. ಇಲ್ಲದಿದ್ದರೆ ಅವಳಿಗೆ ತೃಪ್ತಿಯಿರುತ್ತಿರಲಿಲ್ಲ.

"ಯಾಕೆ ನನ್ನ ಗೋಳು ಹುಯ್ಕೋತೀಯೇ? ಡಾಕ್ಟರು ಹೇಳಿಲ್ಲವೇನೇ? ಅದಕ್ಕೋಸ್ಕರ ಚಪಾತಿ, ಫಜೀತಿ ವಗೈರೆ ಮಾಡಿಕೊಟ್ಟರೆ ಪೈಲ್ವಾನನಾದರೂ ಆದೇನು? ಈ ಹಾಳು ಬಣ್ಣದ ಕ್ಷೇಲ ನೀರು ಯಾಕೆ ಕೊಟ್ಟು ಅಳಸ್ತೀಯ" ಎಂದನು ರಾಜು.

ನಾಗು ಔಷಧಿ ತುಂಬಿದ ಔನ್ಸ್ ಬಾಟ್ಲನ್ನು ಎತ್ತಿಹಿಡಿದು 'ಈ ಬಣ್ಣದ ಕ್ಷೇಲನೀರೆ ನಿಮ್ಮನ್ನ ಇಷ್ಟು ಮಾತಾಡೋ ಹಾಗೆ ಮಾಡಿದ್ದು" ಎಂದಳು.

"ಓಹೊಹೊ ಧನ್ವಂತರಿ ನೀನು?" ರಾಜು ನಾಗುವನ್ನು ಹೀಯಾಳಿಸಿದನು.

ಇಬ್ಬರೂ ನಕ್ಕರು. ಆದರೆ ಆ ನಗು ಹೆಚ್ಚು ಕಾಲ ನಿಲ್ಲಲಿಲ್ಲ. ಪುನಃ ಮುಂದಿನ ಸೋಮವಾರದ ಹೊತ್ತಿಗೆ ಇಳಿಮುಖವಾಗುತ್ತಿದ್ದ ಜ್ವರ ಹಾಗೆಯೇ ನಿಂತಿತು. ಎಂದಿನಂತೆ ಡಾಕ್ಟರು ಬರಲು ಮೊದಲುಮಾಡಿದರು. ಡಾಕ್ಟರ ಆಸಕ್ತಿ ಹೆಚ್ಚಿದಂತೆಲ್ಲ ಜ್ವರವೂ ಹೆಚ್ಚಿತು. ಪುನಃ ಹಿಂದಿನ ರಾಜುವೇ ಆದನು.

ನಗೆಮಾತುಗಳನ್ನಾಡುವಷ್ಟು ಸ್ವಸ್ಥವಾಗಿದ್ದ ರಾಜುವಿಗೆ ಜ್ವರ ಮರು ಕೊಳಿಸಿದುದನ್ನು ಕಂಡು ಊರಿಗೆ ಹೊರಟಿದ್ದ ಶಿವಪ್ಪನವರು ಪತ್ನಿ ಸಮೇತ ರಾಗಿ ನಿಂತರು. ಜೊತೆಗೆ ಮುದ್ದಪ್ಪನವರನ್ನೂ ಮೈಸೂರಿಗೆ ಬರಮಾಡಿದರು. ರಾಜುವಿನ ಜ್ವರಕ್ಕೆ ಬಿಡುವೇ ಸಿಕ್ಕದಹಾಗಾಯಿತು. ವೈಶಾಖದ ಬಿಸಿಲಿನಂತೆ ರಾಜುವಿನ ಮೈ ಕಾಯತೊಡಗಿತು. ಮಾತು ಹುಚ್ಚುಹುಚ್ಚಾಯಿತು:

"ಚಾಕಲೇಟೇ ಸೋಮು? ಧಾಣಾಧಿಕಾರಿಯನಾಗಿ ಈ ವಯಸ್ಸಿನಲ್ಲೀಕೋ ನಿನಗೆ ಚಾಕಲೇಟು?"

"ಹಲುಬೆ ಮೂಲೆ ಮೂಲೆಗೆ ಹೊಡೆದರೆ ನೆಟ್ಟನೆ ನೆಟ್ಟಗೆ ಅವರೇ ಸಾಲು ಹಾಕೋದಕ್ಕೆ ಸರಿಹೋಗುತ್ತೆ."

"ಥೂ! ದೇವರಿಗೆ ತೆಂಗಿನಕಾಯಿ ಒಡಸೋದಕ್ಕೆ ಸುಂಕಾ ಬೇರೆ ಕೊಡ ಬೇಕಂತೆ."

"ನಾಗೂ, ಸಾಯೋದ್ರಲ್ಲಿ ನೀನು ಮುಂಚೆಯೋ ನಾನು ಮುಂಚೆಯೋ? ಆದರೆ........ನಾಗರಾಜು ಹುಷಾರು."

ನಾಗು ಅಳುತ್ತಿದ್ದಳು. ರಾಜುವಿನ ಈ ಅಸಂಬದ್ಧವಾದ ಮಾತುಗಳು ನಾಗುವಿನ ಎದೆಯನ್ನು ಸೀಳುತ್ತಿತ್ತು. ನಾಗುವಿನ ಕಣ್ಣಲ್ಲಿ ನೀರನ್ನು ನೋಡಿದ ಮುದ್ದಪ್ಪನವರು ತಾವೂ ಹೆಂಗಸರಂತೆ ಅಳುತ್ತಿದ್ದರು. ಶಿವಪ್ಪ ನವರು ಹೆಚ್ಚುಕಡಮೆ ರಾಜುವಿನ ಹಾಗೆಯೇ ಆಗಿಹೋಗಿದ್ದರು. ಅವರ ಹೆಂಡತಿಗೆ ಅವಕಾಶಕೊಟ್ಟಿದ್ದಿದ್ದರೆ ಅವರು ಖಂಡಿತ ಆತ್ಮಹತ್ಯೆಯನ್ನೇ ಮಾಡಿಕೊಳ್ಳುತ್ತಿದ್ದರೇನೋ?

ನಾಗುವಿಗೆ ಇನ್ನೂ ಇಪ್ಪತ್ತಾರು ವರ್ಷ. ಅವಳು ತಾಯಿಯಾಗಿದ್ದರೂ, ಇನ್ನೂ ಪ್ರಪಂಚದ ಅನುಭವ ತಿಳಿಯದವಳು. ಏಳು ವರ್ಷದ ನಾಗ ರಾಜುವೇ ಅವಳಿಗಿಂತ ಬುದ್ಧಿವಂತನೆಂದರೂ ಸರಿಹೋಗುತ್ತಿತ್ತು. ಮುದ್ದಪ್ಪ ನವರು ಮುಗ್ಧಪ್ಪನವರೆ. ನಾಗುವಿಗೆ ರಾಜುವೇ ತನ್ನ ಜೀವನೆಂದು ನಿರ್ಧಾರ.

ಅವನು ಹಾಗೆ ಬಳಲುವುದನ್ನು ಅವಳ ಕಣ್ಣುಗಳು ಸಹಿಸಲಾರವು ಅವನು ಉಳಿದುಕೊಳ್ಳುವನೆಂಬ ಆಸೆ ಅವಳಿಗಿಲ್ಲದಿದ್ದರೆ ಇಷ್ಟುಹೊತ್ತಿಗೆ ಅವಳು ಇರುತ್ತಲೇ ಇರಲಿಲ್ಲ.

ಎಲ್ಲರೂ ರಾಜುವನ್ನೇ ತಮ್ಮ ಕಣ್ಣುಮುಂದೆ ಇಟ್ಟುಕೊಂಡಿದ್ದಾರೆ. ರಾಜುವಿಗೆ ನಾಗುವಿನ ಹುಚ್ಚೇ ಹುಚ್ಚು. ಅವಳು ಪಕ್ಕದಲ್ಲೇ ಇರಬೇಕು. ಅವಳ ಕೈಗಳು ತನ್ನ ಕೈಯಲ್ಲೇ ಇರಬೇಕು. ಅವಳ ಊಟ ತಿಂಡಿ, ನಾಚಿಕೆ, ಗೌರವಗಳೊಂದು ಅವನ ಪರಿವೆಯಲ್ಲಿಲ್ಲ. ಅವನ ಕೆನ್ನೆ ಅವಳ ತೊಡೆಗೆ ಸೋಕುತ್ತಿರುವ ಹೊತ್ತಿಗೇ ಇನ್ನೂ ತನ್ನ ಪ್ರಾಣ ಹೋಗಿಲ್ಲವೆಂದು ಅವನ ಭಾವನೆ.

ಭಾನುವಾರದ ದಿನ ಬೆಳಗಿನಿಂದ ಡಾಕ್ಟರೇ ಬಂದಿರಲಿಲ್ಲ. ಮನೆಯವರಿಗೆಲ್ಲಾ ಗಾಬರಿ ರಾಜುವಿಗೆ ಜ್ವರ ಹೆಚ್ಚಿದಂತೆ ನಾಗುವಿಗೆ ತೋರಿತು. ಶಿವಪ್ಪನವರು ಡಾಕ್ಟರ ಷಾಪಿಗೆ ಓಡಿದರು. ಅಲ್ಲಿದ್ದ ಅವರ ಕಾಂಪೌಂಡರು ಅವರಿಗೆ ಡಾಕ್ಟರ ಮನೆಯ ಗುರ್ತನ್ನು ಹೇಳಿಕಳುಹಿಸಿದರು. ಶಿವಪ್ಪನವರು ಅಲ್ಲಿಗೇ ಓಡಿದರು. ಅವರು ಹೋದ ರಭಸಕ್ಕೆ 'ಗೇಟು' ತೆಗೆದುಕೊಂಡಿತು ನಾಲ್ಕು ಸರ್ತಿ ಕೂಗಿದರು. ಒಳಗಿಂದ ಹೆಂಗಸರ ಧ್ವನಿ 'ಅವರಿಲ್ಲ' ವೆಂದಿತು. ಶಿವಪ್ಪನವರು 'ಎಲ್ಲಿಗೆ ಹೊರಟುಹೋಗಿದ್ದಾರೆ?' ಎಂದು ಆತುರದಿಂದ ಕೂಗಿದರು. 'ಬೆಂಗಳೂರಿಗೆ!'–ಈ ಉತ್ತರ ಅವರನ್ನು ಹಾಳುಮಾಡಿತು. ಬಿಸಿಲಿನಲ್ಲಿ ಓಡಿ ಬಂದಿದ್ದ ಅವರಿಗೆ ಆಗ ಕಣ್ಣು ಕತ್ತಲೆ ಬಂದಿತು. ಕಾಲುಗಳು ನಡುಗಿದುವು ಯಾವುದೊ ಭಂಡಶಕ್ತಿಯೊಂದು ಅವರ ಕಾಲುಗಳನ್ನು ಮನೆಗೆ ಹಿಂತಿರುಗುವಂತೆ ಪ್ರೇರೇಪಿಸಿತು.

ಮನೆಯು ದೂರದಲ್ಲೇ ಕಾಣಿಸಿತು. ಆಗಲೇ ಅವರ ಜ್ಞಾನ ತಪ್ಪಿತು. ಮನೆಗೆ ಮನೆಯೇ ಅಳುತ್ತಿತ್ತು. ಮನೆಯ ಹೊರಗೆ ಬೀದಿಯ ನಾಲ್ಕಾರು ಜನಗಳು ಮನೆಯೊಳಗೆ ಏನಾಗಿರುವುದೆಂಬುದನ್ನು ಇಣಿಕಿ ನೋಡಲು ಪ್ರಯತ್ನಿಸುತ್ತಿದ್ದರು. ಪಕ್ಕದ ಮನೆಯವರೆಲ್ಲ ಜಗಲಿಗೆ ಬಂದು ನಿಂತಿದ್ದರು. ಶಿವಪ್ಪನವರು ಓಡಿದರು. ತಮ್ಮ ಮನೆಯ ಬಾಗಿಲಲ್ಲೇ ಪಕ್ಕದ ಮನೆಯ ಸರಸ್ವತಿ ನಿಂತಿದ್ದಳು. ಶಿವಪ್ಪನವರು ಅವಳನ್ನು ಒತ್ತರಿಸಿಕೊಂಡೇ ಮನೆಯೊಳಕ್ಕೆ ಹಾರಿದರು.

ಹಿಂದೆ ಸೆಜ್ಜೆಯಲ್ಲಿ ನಾಗು, ಅಸ್ವಸ್ಥಳಾಗಿದ್ದಾಗ ನಾಗು, 'ಹಾಗಾದರೆ ನೀವೆಲ್ಲ ಹೊರಟುಹೋಗ್ಬೇಡಿ' ಎಂದು ಕೇಳಿಕೊಂಡಳು ಅದಕ್ಕೆ ರಾಜು ನಕ್ಕು 'ನನ್ನ ಕೈ, ನಿನ್ನ ಕೈಲೇ ಇದೆಯಲ್ಲ. ಅದನ್ನು ಇಲ್ಲೇ ಬಿಟ್ಬಿಟ್ಟು ಹ್ಯಾಗೆ ಹೋಗೋದು ?' ಎಂದನು. ಈ ದಿವಸವೂ ರಾಜುವಿನ ಕೈ ನಾಗು ವಿನ ಕೈಗಳಲ್ಲೇ ಇದೆ. ಆದರೆ ಅವುಗಳನ್ನು ಇಲ್ಲೇ ಬಿಟ್ಟು ತಾನೆಲ್ಲಿಗೋ ಹೊರಟುಹೋಗಿದ್ದಾನೆ. ನಾಗುವಿನ ಎರಡು ಕಣ್ಣುಗಳೂ ಕೆಂಡದ ತುಂಡು ಗಳಾಗಿವೆ. ಕೂದಲು ಬಿಚ್ಚಿಹೋಗಿ ನೆಲವನ್ನು ಗುಡಿಸುತ್ತಿವೆ. ರಾಜು ಕಣ್ಮುಚ್ಚಿ ಮಲಗಿದ್ದಾನೆ. ಅವನ ಜ್ವರ ಅವನ ಉಸಿರೊಂದನ್ನು ಮಾತ್ರ ತೆಗೆದುಕೊಂಡು ಹೊರಟುಹೋಗಿದೆ. ಈಗ ಒಂದು ಗಂಟೆಯ ಹಿಂದಿದ್ದ ಜ್ವರದ ಕಾವು ಅವನ ಮೈಯಲ್ಲಿ ಈಗ ಇಲ್ಲ. ಅದಕ್ಕೆ ಬದಲು ಅವನ ಮೈ ನಾಗುವಿನ ಕೆನ್ನೆಗಳಷ್ಟು ತಣ್ಣಗಿವೆ.

ನಾಗು, ಸಂತೋಷ, ನಾಚಿಕೆಗಳ ಸಲುವಾಗಿಯೂ ಅಳುವ ಸ್ವಭಾವ ದವಳು. ಇನ್ನು ಇಂದು ಅವಳ ಕಣ್ಣೀರನ್ನು ಅಳೆಯುವುದು ಹೇಗೆ. ಅವಳಿಗೆ ಎದೆನೋವು ತಲೆನೋವುಗಳ ಕಡೆಗೆ ಲಕ್ಷ್ಯವೇ ಇರಲಿಲ್ಲ. ಆಡುವ ಮಾತಿಗೆ ಅವಕಾಶವೇ ಇರಲಿಲ್ಲ ಕಣ್ಣುಗಳು ಮಾತ್ರ ನೀರನ್ನು ಧಾರೆಯಾಗಿ ಸುರಿ ಸಿದುವು. ರಾಜುವಿನ ಒಂದೊಂದು ನೆನಪೂ ಅವಳ ಕಣ್ಣುಗಳ ಒಂದೊಂದು ತೊಟ್ಟು ನೀರಾಗಿ ಹರಿದುಬರುತ್ತಿತ್ತು. ತನ್ನ ಹಣೆಯ ಕುಂಕುಮವನ್ನು ಅವ ನೆದೆಗೆ ಆಗಲೇ ತೊಡೆದುಬಿಟ್ಟಿದ್ದಳು. ಹೊರಗಡೆ ಮುದ್ದಪ್ಪನವರ ಕಣ್ಣೀ ರನ್ನು ನಾಗರಾಜು ತೊಡೆಯುತ್ತಿದ್ದನು.

ರಾಜು ತನ್ನ ಮಣ್ಣುಗಾಣುವುದಕ್ಕೆಂದು ಸೆಜ್ಜೆಗೆ ಹೊರಟಿದ್ದನು. ಟ್ಯಾಕ್ಸಿಯೊಂದು ಮನೆಯ ಬಾಗಿಲ ಮುಂದೆ ಬಂದು ನಿಂತಿತ್ತು. ರಾಜುವನ್ನು ಅದರೊಳಗೆ ಮಲಗಿಸಿದರು. ಮೈಸೂರು ಮನೆಗೆ ಬೀಗ ಬಿತ್ತು. ಬಿಸಿಲು ಉರಿಯುತ್ತಿತ್ತು. ಟ್ಯಾಕ್ಸಿಯು ಓಡುತ್ತಿತ್ತು. ಒಳಗಿದ್ದ ಕಣ್ಣುಗಳು ಅಳು ತ್ತಿದ್ದುವು. ಟ್ಯಾಕ್ಸಿ ಡ್ರೈವರು ಅವರಿಗೆ ವೇದಾಂತವನ್ನು ಬೋಧಿಸುತ್ತಿದ್ದನು.

ನಾಗುವಿನ ಆ ಬಿಳಿದಾವರೆಯ ಬಣ್ಣದ ಕತ್ತಿನಲ್ಲಿ ಕರಿಮಣಿಯ ಸರ ವಿಲ್ಲ. ಅವಳ ವಿಶಾಲವಾದ ಹಣೆಯಲ್ಲಿ ಕುಂಕುಮವಿಲ್ಲ ಕೈಯಲ್ಲಿ ಗಾಜಿನ ಬಳೆಗಳಿಲ್ಲ. ಯಾವ ಮರವನ್ನು ನಂಬಿ ಅವಳ ಜೀವನದಬಳ್ಳಿ ಹಬ್ಬಿ ತುದಿಯ ವರೆಗೂ ಹೋಗಿತ್ತೊ ಆ ಮರವು ಇದ್ದಕ್ಕಿದ್ದಂತೆ ಮಾಯವಾಗಿ ಆ ಬಳ್ಳಿ ಧೊಪ್ಪನೆ ನೆಲದ ಮೇಲೆ ಬಿತ್ತು. ನಾಗುವಿನಂತಹ ಹೆಣ್ಣಿಗೆ ಬರಬಾರದ ವೈಧ ವ್ಯವು ಬಂದು ಅವಳನ್ನು ಸದೆ ಬಡಿಯಿತು ಆದರೂ ಅವಳ ಸುತ್ತ ಕಾವಲಿದೆ, ಅವಳ ಜೀವದ ಮೇಲೆ ನಾಲ್ಕಾರು ಜನರ ಕಣ್ಣಿದೆ. ಅವಳು ಆ ಕಣ್ಣುಗಳನ್ನು ತಪ್ಪಿಸಿ ತನ್ನ ಶಾಂತಿಯನ್ನು ತಾನು ಪಡೆದುಕೊಳ್ಳುವ ಹಾಗಿಲ್ಲ. ತನ್ನ ನಾಗರಾಜುವನ್ನು ಬಿಟ್ಟು ತಾನು ಎಲ್ಲಿಗೂ ಹೊರಟುಹೋಗುವ ಹಾಗಿಲ್ಲ.

ನಾಗರಾಜುವಿನ ಮುಖದಲ್ಲಿನ ರಾಜು, ನಾಗುವನ್ನು ಪದೇಪದೇ ಎಚ್ಚ ರಿಸುತ್ತಿದ್ದಾನೆ. ತಾನು ನಾಗರಾಜುವಿನಲ್ಲಿ ಅಡಗಿಕೊಂಡಿರುವ ವಿಷಯವನ್ನು ರಾಜು ಹೇಗೋ ನಾಗುವಿಗೆ ತಿಳಿಸಿದ್ದಾನೆ. ಆದರೂ ನಾಗುವಿಗೆ ಮನಶ್ಶಾಂತಿ ಯಿಲ್ಲ ತಾನು ಏಕೋ ಬದುಕಬಾರದೆಂದು ಅವಳು ತೀರ್ಮಾನಿಸಿಕೊಂಡಿದ್ದಾಳೆ.

ರಾಜುವಿನ ಮೂಳೆಗಳು ಮಣ್ಣಾಗುತ್ತಿದ್ದ ದಿನಗಳು. ಮುದ್ದಪ್ಪನವರು ತಮ್ಮ ಮಗಳನ್ನು ತಮ್ಮೂರಿಗೆ ಕರೆದುಕೊಂಡು ಹೋಗಲು ಪ್ರಯತ್ನ ಪಟ್ಟರು. ಶಿವಪ್ಪನವರಲ್ಲಿ ವಿಚಾರಿಸಿದರು. ಅವರು ಒಪ್ಪಿಕೊಂಡರು. ಆದರೆ ತನ್ನ ಮೂರನೇ ಮನೆಯನ್ನು ಬಿಟ್ಟು ಮತ್ತೆಲ್ಲಿಗೂ ಹೋಗುವುದು ನಾಗುವಿನ ಇಷ್ಟದಲ್ಲಿಲ್ಲ.

"ನಾನು ಬರೋದಿಲ್ಲಾಪ್ಪಜಿ, ಸೆಜ್ಜೆಯಲ್ಲೇ ಸಾಯಬೇಕೇಂದಿದೀನಿ."

"ಒರಟು ಮಾತಾಡಬೇಡ ನಾಗು. ಒಂದೆರಡು ತಿಂಗಳಾದರೂ ನಿನ್ನ ಪ್ಪನ ಮನೇಲಿದ್ರೆ ತಪ್ಪೆ, ಬಾ ಹೋಗೋಣ."

"ನನ್ನ ಅತ್ತೇಮನೆ ಬಿಟ್ಟಮೇಲೆ ನಾನು ಹೋಗೋದು ಆ ಪನ್ನೇರಳೇ ಗಿಡದ ಬುಡಕ್ಕೇನೆ. ಸುಮ್ಮನೆ ಹಂಸೆಮಾಡಬೇಡಿ."

"ನಿಮ್ಮ ಪಲುಕೂಂನತ್ತಿಗೆ ಕಣ್ಣು ಕಾಣ್ಸೋದಿಲ್ಲ. ಮನೆಯ ಮಗ ಳಾಗಿದ್ದುಕೊಂಡು, ಮನೆತಪ್ಪಿದ ಹುಡುಗಿಯಾದ ಮೇಲೂ, ನನಗೆ ಅಷ್ಟು ಸಹಾಯ ಮಾಡ್ತಿದ್ದಾರ್ಲೆ."

ನಾಗುವಿಗೆ ದುಃಖ ಒತ್ತರಿಸಿಕೊಂಡು ಬಂದಿತು. ಅವಳ ಕಣ್ಣುಗಳಲ್ಲಿ ನೀರಾಡಿತು. ಅಪ್ಪನ ಮೇಲೆ ಕೋಪವೂ ಬಂತು.

"ಮನೆತಪ್ಪಿದ ಹುಡುಗಿಯೆಂದಾದ ಮೇಲೆ ಅವಳಿಗೆ ಯಾವ ಮನೆಯೂ ಬೇಡ. ನಿಮ್ಮ ಮನೆಯೂ ನನ್ನದಲ್ಲ. ಈಗ, ಯಾವ ಮನೆಯನ್ನು ಬೇಕಾದರೂ ನಾನು ಬಿಡಬಲ್ಲೆ."

"ಎಷ್ಟೇ ಮಾತು? ನಿನ್ನಿಷ್ಟಬಂದಹಾಗೆ ಮಾಡಿಕೊ; ಇನ್ನು ನಿನ್ನನ್ನ ಕರೆದರೆ ದೇವರವೇಲಾಣೆ."

ಮುದ್ದಪ್ಪನವರು ಸಿಟ್ಟಿನಿಂದ ಪಲುಕೂರಿಗೆ ಹೊರಟುಹೋದರು. ನಾಗುವಿಗೆ ಆದರಿಂದ ಮನಸ್ಸಿಗೆ ಎಳ್ಳಷ್ಟೂ ತೊಂದರೆಯಾಗಲಿಲ್ಲ. ಮುದ್ದಪ್ಪನವರು ತನ್ನನ್ನು ಸೆಜ್ಜೆಯಲ್ಲಿ ಇರಗೊಟ್ಟದ್ದೇ ತನಗೊಂದು ದೊಡ್ಡ ಉಪಕಾರವೆಂದುಕೊಂಡಳು. ಸೋಮಣ್ಣನ ಮದುವೆಯ ಸಮಯದಲ್ಲಾದ ಚಂದಣ್ಣನ ಭೇಟಿಯನ್ನು ಅವಳು ಎಂದೆಂದೂ ಮರೆಯುವಹಾಗಿಲ್ಲ. ಅವಳಿನ್ನು ಪಲುಕೂರಿಗೆ ಹೋಗುವುದು ಸಾಧ್ಯವಿಲ್ಲ. ಅದೇತರ ಭೀತಿಯೆಂದು ಮಾತ್ರ ಅವಳು ಯಾರಿಗೂ ಹೇಳುವುದಕ್ಕೆ ಸಿದ್ಧಳಿಲ್ಲ.

ನಾಗುವಿನ ಮನೆಯಲ್ಲಿ ಸದ್ಯಕ್ಕಿರುವವರು ಮೂರುಜನ ಹೆಂಗಸರು, ಮೂವರು ಗಂಡಸರು. ಹೊಲಗದ್ದೆಗಳಲ್ಲೇ ಸದಾ ಅಲೆಯುತ್ತಿದ್ದ ಸೋಮಣ್ಣ, ಜಗಲಿಯ ರಾಜುವಿನ ಕೊಟಡಿಯನ್ನಾಕ್ರಮಿಸಿಕೊಂಡಿದ್ದ ಶಿವಪ್ಪನವರು, ಬೀದಿಯ ಮಕ್ಕಳೊಡನೆ ಕುಣಿಯುತ್ತಿದ್ದ ನಾಗರಾಜುವು, ಆ ಮನೆಯ ಗಂಡಸರು. ರಾಜುವನ್ನು ಕಳೆದುಕೊಂಡ ನಾಗು, ಉಗ್ರಾಣದ ಬೀಗದ ಕೈಯಿನ ಅತ್ತೆ, ಸೋಮಣ್ಣನ ಹೊಸ ಹೆಂಡತಿ ನಂಜಮ್ಮ ಇವರು ಹೆಂಗಸರು. ಇವೇ ನಾಗುವಿನ ಬದುಕಿನಲ್ಲಿ ಕಾಣುತ್ತಿದ್ದ ಮುಖಗಳು. ಮನಸ್ಸಿನಲ್ಲಿ ರಾಜನ ಸಾಮ್ರಾಜ್ಯವೇ ಮೊಳಗುತ್ತಿತ್ತು;

. ಹೆಂಗಸು ರೂಪವತಿಯಾದರೆ ಅವಳಿಗೆ ಹೆಣ್ಣೂ ಶತ್ರು. ಗಂಡೂ ಶತ್ರು. ಇದರ ಅನುಭವ ನಾಗುವಿನ ತಿಳಿವಿಗೆ ಬಂದದ್ದು ಈಗ್ಗೆ ಎಂಟುದಿನಗಳ ಹಿಂದೆ. ಅವತ್ತೇ ನಂಜಮ್ಮನಿಗೆ ತನ್ನನ್ನು ಕಂಡರೆ ಏಕೋ ಆಗುವುದಿಲ್ಲವೆಂದು ಅವಳಿಗನ್ನಿಸಿದುದು. ಮಾತೆತ್ತಿದರೆ 'ನಾಗಕ್ಕ ದಪ್ಪವಾಗುತ್ತಿದ್ದಾರೆ ಪಾಪ! ಅವರಿಗಾಗಲಿ ಉಪಚಾರ' 'ಎಲ್ಲರ ಯೋಗಕ್ಷೇಮಾನೂ ನೋಡ್ಕೊಳ್ಳೋರು

ಅವ್ರು; ಅವರ ಎದ್ರಿಗೆ ನಾವೆ?' ಮುಂತಾದ ಮಾತುಗಳನ್ನೇ ನಂಜಮ್ಮ ಆಡುತ್ತಿದ್ದುದು. ಇದರ ಮರ್ಮ ನಾಗುವಿಗೆ ತಿಳಿಯಲೇ ಇಲ್ಲ.

ನಾಗು ಕನ್ನಡಿ ನೋಡಿಕೊಂಡಳು. ಅವಳ ಕೆನ್ನೆಗಳು ಉಬ್ಬಿರುವುದು ನಿಜ. ಕಣ್ಣುಗಳು ತಿಟ್ಟಗೆ ಬಂದಿರುವುದೂ ನಿಜ. ಕತ್ತು ತುಂಬಿಕೊಂಡಿರುವುದೂ ನಿಜ. "ಅಯ್ಯೊ ಈ ಹಾಳು ಮೈ ಈಗೇಕೆ?" ಎಂದುಕೊಂಡಳು. ನಂಜಮ್ಮ ತಾನು ದಪ್ಪನಾಗುತ್ತಿರುವೆನೆಂದದ್ದು ಸುಳ್ಳಲ್ಲ. ಆದರೆ ಅವಳು ಅದನ್ನು ಬಾಯಲ್ಲಿ ಆಡಿದ ಕಾರಣ ಮಾತ್ರ ನಾಗುವಿಗೆ ತಿಳಿಯದು. ನಂಜಮ್ಮನ ಗೆಳತಿ ಆ ಪುಟ್ಟ! ಈ ವಾರಗಿತ್ತಿಯರ ದ್ವೇಷ ಬೆಳಸುತ್ತಿರುವಳೆಂದು ನಾಗು ಊಹಿಸಿದಳು.

ಅದೇ ಸಮಯದಲ್ಲಿ ನಾಗುವಿಗೆ ಒಂದು ಆಶ್ಚರ್ಯ. ಪುಟ್ಟಮ್ಮ ಪಲುಕೂರಿನ ಹೆಣ್ಣು. ತನ್ನಂತೆಯೇ ಸೆಜ್ಜೆಗೆ ಮದುವೆಯಾದವಳು; ನ್ಯಾಯವಾಗಿ ಅವಳು ತನ್ನ ಜೊತೆ ಸೇರಿಕೊಳ್ಳಬೇಕು. ಅವಳು ನಂಜಮ್ಮನ ಗೆಳೆತನ ಏಕೆ ಅಪೇಕ್ಷಿಸಿದಳು? ಇದೇ ಅವಳಿಗೆ ಆಗಾಗ ಬರುತ್ತಿದ್ದ ಒಂದು ಪ್ರಶ್ನೆ.

ಒಂದು ದಿನ ನಾಗು, ಪುಟ್ಟಮ್ಮ ನಂಜಮ್ಮನನ್ನು ಸಂಧಿಸುವ ಮೊದಲೇ ಪುಟ್ಟಮ್ಮನನ್ನು ಹಿಡಿದಳು.

"ಅದೇನೇ ಪುಟ್ಟಮ್ಮ, ನಿಮ್ಮೂರೋಳು ನಾನು. ನನ್ನ ಬಿಟ್ಟು ನಂಜಮ್ಮನ ಜೋಡಿ ಆಗ್ಬಿಟ್ಟಿದೀಯೆ?"

"ಅಯ್ಯೋ! ನೀವೆಲ್ಲಿ, ನಾನೆಲ್ಲಿ ನಾಗಕ್ಕ. ಒಂದೂರ್‍ನೋರೂ ಅಂತ ಹೆಸರು. ಚಿಕ್ಕದ್ರಿಂದ ನೀವು ದೊಡ್ಡಮನುಷ್ಯರಾಗೇ ಬಂದಿದೀರಿ. ಏನೋ ನಾನು ಪಲುಕೂರ್‍ನೋಳು ಅಂತ ನೀವು ಗುರ್ತಿಸ್ದ್ರಲ್ಲ. ಅದೇ ಒಂದು ದೊಡ್ಡ ವಿಷಯ." ಪುಟ್ಟಮ್ಮ ಕೊಂಚ ನಿಧಾನವಾದರೂ ಸಾಕಾದಷ್ಟು ಮುಳ್ಳು ಸೇರಿಸಿಯೇ ಮಾತನಾಡಿದಳು.

ನಾಗುವಿಗೆ ಬೇಸರವಾಯಿಯಿತು. "ಹೋಗ್ಲೀ ಬಿಡಮ್ಮ, ಷುರು ಮಾಡೋವಾಗ್ಲೇ ನಿನಗೆ ಬೇಜಾರು. ಏನೋ ಒಬ್ಬೊಬ್ಬರಿಗೆ ಒಬ್ಬಬ್ಬರು" ಎಂದಳು.

"ಅದನ್ನ ಸಾವಿರ ಸರ್ತಿ ಹೇಳಿ ನಾಗಕ್ಕ" ಪುಟ್ಟಮ್ಮನೇ ಸಂಭಾಷಣೆಯನ್ನು ಕೊನೆಗಾಣಿಸಿದಳು.

ನಾಗುವಿಗೆ ಪುಟ್ಟಮ್ಮನ ಮೇಲೆ ಕೋಪ ಬರಲಿಲ್ಲ. ಆದರೆ ಅವಳು ಅಂತಹ ಗಂಭೀರವಾದ ಮಾತುಗಳನ್ನಾಡುತ್ತಿರುವಾಗಲೂ ತೋರುತ್ತಿದ್ದ ಮುಗುಳುನಗೆ ಮಾತ್ರ ನಾಗುವನ್ನು ಕೆರಳಿಸಿತು. ಅದನ್ನು ತನ್ನ ಸ್ನೇಹಿತೆ ಮರಮ್ಮನ ಕೂಡ ಹೇಳಿಕೊಂಡು ವ್ಯಸನಪಟ್ಟಳು. ಮರಮ್ಮ ತಾನೂ ಒಂದು ನಿಟ್ಟುಸಿರುಬಿಟ್ಟಳು.

ದಿನದಿನಕ್ಕೆ ನಾಗುವಿಗೆ ಈ ನಂಜಮ್ಮ ಪುಟ್ಟಮ್ಮರ ಕಾವು ಹೆಚ್ಚ ತೊಡಗಿತು. ಅತ್ತೆಯೊಂದಿಗೆ ಇದನ್ನೆಲ್ಲ ಹೇಳಿಕೊಳ್ಳಲು ಮನಸ್ಸು ಒಗ್ಗಲಿಲ್ಲ. ಮಾವನವರೊಂದಿಗೆ ಮಾತನಾಡುವುದಿರಲಿ, ಅವರೆದುರಿಗೆ ಅಳುವುದಕ್ಕೂ ಅವಕಾಶವಿಲ್ಲ. ಇನ್ನುಳಿದ ಸೋಮಣ್ಣ ನಿರ್ಲಿಪ್ತ. ಅವನೊಡನೆಯೂ ಅವಳು ಅಷ್ಟು ಮಾತನಾಡುತ್ತಿರಲಿಲ್ಲ. ಅವಳಾಯಿತು, ಅವಳ ಅಸಹಾಯ ಮರಮ್ಮ ನಾಯಿತು.

ಸೋಮಣ್ಣನೇ ಒಂದು ತರಹದ ಮನುಷ್ಯ. ಮನೆಯಲ್ಲಿದ್ದಾಗ ತಂದೆ ಯಲ್ಲಿ ಗೌರವ, ಅತ್ತಿಗೆಯಲ್ಲಿ ಭಕ್ತಿ, ಹೆಂಡತಿಯಲ್ಲಿ ವಿಶ್ವಾಸ, ಅಮ್ಮನಲ್ಲಿ ಸಲಿಗೆಯಿಂದ ವರ್ತಿಸುತ್ತಿದ್ದ. ಆಮೇಲೆ ಅವನಿಗೊಂದು ಸಂಸಾರವಿದೆಯೋ ಅಥವಾ ಇಲ್ಲವೋ ಎನ್ನುವ ಹಾಗೆ ನಿರಾಳವಾಗಿ ಇದ್ದುಬಿಡುತ್ತಿದ್ದ. ಅವನ ಬದುಕೆಲ್ಲ ಬಯಲಿನಲ್ಲಿ.

ಅಂದು ಮನೆಯವರ ಮೇಲಿನ ಸಿಟ್ಟಿಗಾಗಿಯೇ ನಂಜಮ್ಮ ಎಲ್ಲ ಕೆಲಸ ಗಳನ್ನೂ ಮುಖ ಗಂಟುಹಾಕಿಕೊಂಡು ಮಾಡುತ್ತಿದ್ದಳು. ನಾಗುವು ಕೆಲಸ ಕ್ಕಾಗಿ ಹುಡುಕಿ ಹುಡುಕಿ ಬೇಸತ್ತಳು. ಕೆಲಸದ ಹೊತ್ತಿನಲ್ಲಿ ಕೈಗಳಿಗೆ ಬಿಡುವು ಕೊಡುವುದು ನಾಗುವಿಗೆ ಒಂದು ತರಹದ ಅಧೈರ್ಯ. ಕಸ ಗುಡಿ ಸಾಗಿತ್ತು. ಪಾತ್ರೆಗಳೆಲ್ಲ ಬೆಳಗುತ್ತಿದ್ದುವು. ಒಲೆ ಹಚ್ಚಿ ಆಗಿತ್ತು. ಎಲ್ಲೆಲ್ಲೂ ನೀರು ತುಂಬಿ ತುಳುಕಾಡುತ್ತಿತ್ತು. ಎಮ್ಮೆ ಕರೆದಾಗಿತ್ತು. ನಾಗುವಿಗೆ ತುಂಬಾ ಹೆದರಿಕೆಯಾಯಿತು. ಸೂರ್ಯನನ್ನು ನೋಡಿದಳು. ಅವನೂ ಆಗತಾನೇ ಎದ್ದು ಒಂದು ಮಾರು ದೂರ ನಡೆದಿದ್ದನು. ನಾಗುವು ತಾನು ಎದ್ದದ್ದು ಹೊತ್ತಾಗ ಲಿಲ್ಲವೆಂಬ ಧೈರ್ಯ ಬಂದ ಮೇಲೆ ಅಡಿಗೆಮನೆಯಲ್ಲಿ ನಂಜಮ್ಮನನ್ನು ಕಂಡಳು. ಅವಳು ಒಲೆಯ ಮುಂದಕ್ಕೆ ತನ್ನೆರಡು ಕಾಲುಗಳನ್ನು ಅರ್ಧ ಚಾಚಿ, ಮೊಳ ಕಾಲುಗಳ ಮೇಲೆ ಕೈಕಟ್ಟಿ ಬಿರುಗಣ್ಣು ಬಿಟ್ಟುಕೊಂಡು ಒಲೆಯನ್ನೇ ನೋಡು

ತ್ತಿದ್ದಳು. ಅವಳ ಮುಖದ ಮೇಲೆ ಕೆಂಪು ಬೆಳಕು ಕುಣಿಯುತ್ತಿತ್ತು ನಾಗುವೂ ಬಂದು ಅವಳ ಪಕ್ಕದಲ್ಲಿ ಕುಳಿತಳು.

"ನಿನ್ನ ಮುಖ ಎಷ್ಟು ಚೆನ್ನಾಗಿದೆ ನೋಡು ಉರೀ ಮುಂದೆ ಇರೋ ಹೊತ್ಗೆ" ಎಂದಳು ನಾಗು ನಗುನಗುತ್ತಲೇ.

"ಹ್ಞೂ, ಆ ಉರಿಯೇ ನನ್ನ ಮುಖದ ಮೇಲಿದ್ದಿದ್ದರೆ ಇನ್ನೂ ಚೆನ್ನಾಗಿರ್ತಿತ್ತು ನಿಮಗೆ" ಸಿಡುಕಿ ನಂಜಮ್ಮ ಗೊಣಗಿದಳು.

"ನನ್ನ ಮುಖ ನೋಡಿದರೆ ನಿನಗೆ ಇಂಥ ಮಾತೇ ಏನೇ ಬರೋದು ?" ತಮಾಷೆಯಾಗಿ ನಂಜಮ್ಮನ ತೋಳನ್ನು ಚಿವುಟಿ ನಾಗು ಕೇಳಿದಳು.

"ನಮ್ಮ ನಮ್ಮ ಹಣೇಬರ ಹಾಗೆ ಮಾತಾಡಸ್ತದೆ."

"ಸಾಕು ಸುಮ್ನಿರೆ. ಗಂಡ ಹೆಂಡಿರು ಎಲ್ಲೋ ಜಗಳ ಕಾಯ್ಕೊಂಡಿದೀರಿ. ಆ ಕೋಪಾನೆಲ್ಲ ನನ್ನ ಮೇಲೆ ಯಾಕೆ ತೋರಿಸ್ತೀಯೆ" ನಾಗು ಇನ್ನೂ ನಗುತ್ತಲೇ ಇದ್ದಳು.

"ಕಾರಣಾ ಇಲ್ದೇ ಕೋಪ ತೋರ್ಸೋರು ಹುಚ್ಚರು" ನಂಜಮ್ಮನ ಮಾತು.

ಅಷ್ಟರೊಳಗೇ ಸೋಮಣ್ಣ "ಗರಿಕೆ ಆಳುಗಳ ಜೊತೇಲಿ ಹೋಗ್ಬೇಕೂ ನಾನು. ಅದ್ಯಾರೋ ಅಡಿಗೇಮನೇಲಿರೋರು ಒಸಿ ನೀರ್ಕೊಟ್ಬುಡಿ" ಎಂದು ತೊಟ್ಟಿಯಿಂದಲೇ ಕೂಗಿಕೊಂಡನು. ನಂಜು ಕದಲಲೇ ಇಲ್ಲ. ನಾಗುವೇ ಕೆಲಸವೊಂದು ಸಿಕ್ಕಿತಲ್ಲಾ ಎನ್ನುವ ಹಿಗ್ಗಿನಿಂದ ಎದ್ದು ಸೋಮಣ್ಣನಿಗೊಂದು ಬಟ್ಟಲಿಟ್ಟು ಕೈಕಾಲಿಗೆ ನೀರು ಕೊಟ್ಟಳು. ನಂಜಮ್ಮನ ಹುಬ್ಬುಗಳು ಇನ್ನೂ ಹತ್ತಿರ ಹತ್ತಿರಕ್ಕಾದುವು.

ಸೋಮಣ್ಣ ತಲೆ ತಗ್ಗಿಸಿಕೊಂಡು ಹೊಟ್ಟೆತುಂಬ ಊಟಮಾಡಿ ಹೋದನು. ಪುನಃ ನಾಗುವಿಗೆ ಬಿಡುವಾಯಿತು. ನಂಜಮ್ಮ ಇನ್ನೂ ಹಾಗೆಯೇ ಅಡಿಗೇಮನೆಯಲ್ಲಿ ಕುಳಿತಿದ್ದಳು. ನಾಗುವು ಪುನಃ ನಂಜಮ್ಮನನ್ನು ಕೆಣಕಲು ಹೋದಳು.

"ಏನು ನಂಜೂ, ಕೋಣೆಯ ನಂದಾದೀಪದ ಬೆಳಕಿನ ಹಾಗೆ ಅಲ್ಲಾಡದೆ ಕುಳಿತುಬಿಟ್ಟೆ ?" ಎಂದಳು ನಾಗು.

" ಹೌದು ಆ ಊರಿಗೆ ಬತ್ತಿಯೊಂದೇ ಗತಿ. ಮಿಕ್ಕವರ ಹಾಗೆ ನಾನು ಒಲೆಯ ಉರಿಯೇನಲ್ಲ; ಒಂದು ಸೌದೆ ತಪ್ಪಿದರೆ ಮತ್ತೊಂದು ಸೌದೆಗೆ ಹಬ್ಬಿ ಕೊಳ್ಳೋಕ್ಕೆ! "

ನಾಗುವು ಪೆಚ್ಚಾದಳು. ನಂಜಮ್ಮ ಏನೋ ತನ್ನ ಮನಸ್ಸಿನಲ್ಲಿಟ್ಟುಕೊಂಡು ಹೀಗೆಲ್ಲ ಬಳಸು ಮಾತುಗಳನ್ನಾಡುತ್ತಿದ್ದಾಳೆ, ಎಂದು ಅವಳಿಗೆ ಅನ್ನಿಸಿತು. ಅವಳ ಮನಸ್ಸು ತುಂಬಾ ನೊಂದಿತು. ಅಡಿಗೆಮನೆಯನ್ನು ಬಿಟ್ಟು ಹೊರಗೆ ಬಂದಳು. ಅವಳಿಗೆ ಗುಟ್ಟಾಗಿ ಅಳುವುದಕ್ಕೆ ಒಂದು ಜಾಗ ಸಿಕ್ಕಿದ್ದರೆ ಅವಳ ದುಃಖವನ್ನೆಲ್ಲಾ ತೋಡಿಕೊಳ್ಳುವುದಕ್ಕಾಗುತ್ತಿತ್ತು.

ಆದರಿಂದಲೇ ನಾಗುವು ಅಂದಿನ ರಾತ್ರಿ ತುಂಬಾ ಅತ್ತಳು. ಅವಳ ಕಣ್ಣೀರು ಪಕ್ಕದ ನಾಗರಾಜುವಿನ ಕೆನ್ನೆಯನ್ನೆಲ್ಲ ತೋಯಿಸಿಬಿಟ್ಟಿತು. ನಂಜಮ್ಮನ ಮಾತಿಗೆ ಅರ್ಥವನ್ನು ಕಲ್ಪಿಸುತ್ತಾ ಕಲ್ಪಿಸುತ್ತಾ ದುಃಖವು ಉಕ್ಕುತ್ತಿತ್ತು. ಅವಳಿಗೆ ಸಾಯಬೇಕೆನ್ನಿಸಿತು. ಆದರೆ ನಾಗರಾಜು, ಅವ ಳನ್ನು ತಬ್ಬಿಕೊಂಡು ಮಲಗಿದ್ದನು. ಕಡೆಗೆ ತನ್ನ ಎಡ ತೋಳನ್ನು ಅವನ ಮೇಲೆ ಹರಡಿ ಮಲಗಿಕೊಂಡಳು....

ರಾಜುವು ಮನೆಯೊಳಕ್ಕೆ ಬಂದನು. ನಾಗರಾಜು, ಅಳು ನಿಲ್ಲಿಸಿದನು. ನಾಗು, " ಅಯ್ಯೋ ಮಹರಾಯರೇ! ಇಷ್ಟು ದಿವಸ ಎಲ್ಲಿಗೆ ಹೋಗಿದ್ದಿರಿ? " ಎಂದಳು. ರಾಜು, " ನಾನೆಲ್ಲಿ ಹೋಗಿದ್ನೇ ಹುಚ್ಚಿ! ನೀವೇ ನನ್ನ ಮೈಸೂರ್ನಲ್ಲೇ ಬಿಟ್ಬಿಟ್ಟು ಓಡಿ ಬಂದ್ಬಿಟ್ರಿ! " ಎಂದನು. ಏನಾದರಾಗಲಿ ನಾಗುವಿಗೆ ತುಂಬಾ ಸಂತೋಷವಾಯಿತು. ರಾಜುವು ಅದೇನನ್ನೋ ಕೈಯಲ್ಲಿ ಹಿಡಿದುಕೊಂಡಿದ್ದನು. "ಥೂ, ಹಾಳು ಸಿಗರೇಟು! ಇನ್ನೂ ಬಿಟ್ಟಿಲ್ವೆ?" ನಾಗು ಅಸಹ್ಯಪಟ್ಟುಕೊಂಡಳು. ರಾಜು " ಸಿಗರೇಟಲ್ಲವೇ ಅದು, ಸಂಪಿಗೆಹೂವು ನಿಮ್ಮ ಅಪ್ಪಾಜೀ ಕಳಿಸಿದಾರೆ ತಗೊ " ಎಂದು ನಾಗುವಿನ ಕೈಗೆ ಅದನ್ನು ಕೊಟ್ಟನು. ನಾಗು ಅದೇನನ್ನೋ ಜ್ಞಾಪಿಸಿಕೊಂಡು, " ನೋಡಿ, ಅಪ್ಪಾಜೀ ಊರಿಗೆ ಬಾ ಅಂತ ಬಲವಂತಮಾಡಿ ದರು, ನಾನು ಬರಲ್ಲ ಅಂದೆ. ಅದಕ್ಕೇ ಅವರು ಕೋಪಿಸಿಕೊಂಡು ಇನ್ನೂ ಈ ಕಡೇ ಬಂದೇ ಇಲ್ಲ " ಎಂದಳು. " ಅಲೆ! ಅವ್ರು ಇಲ್ಲೇ ಇದ್ದಾರಲ್ಲೇ " ಎಂದು ರಾಜು ಅವರ ಕಡೆಗೆ ಬೆರಳುಮಾಡಿ ತೋರಿಸಿದ. ಹೌದು. ಮುದ್ದಪ್ಪನವರು ಅಲ್ಲೇ ನಿಂತಿದ್ದರು. ಪುನಃ ರಾಜುವೇ " ಒಂದು ನಾಲ್ಕು ದಿನ ಹೋಗಿ ಬಂದಿ

ದ್ರೇನಾಗಿತ್ತು ಊರಿಗೆ?" ಎಂದನು. ಅಷ್ಟರೊಳಗೆ ಯಾರೋ ನಾಗುವನ್ನು ಎಳೆದರು.

ಇನ್ಯಾರು? ನಾಗರಾಜು, ನಾಗುವನ್ನು ಎಚ್ಚರಿಸಿದನು. ನಾಗುವಿಗೆ ಕನಸು ಒಡೆದುಹೋಯಿತು. ಬೆಳಗಿನ ಝಾವದ ಕನಸದು. ಹಾಗೇ ನಾಗರಾಜುವನ್ನು ತಟ್ಟಿ ಮಲಗಿಸಿಬಿಟ್ಟು ನಾಗು ಎದ್ದುಬಿಟ್ಟಳು. ಅವಳ ಮನಸ್ಸಿನಲ್ಲಿ "ಒಂದು ನಾಲ್ಕು ದಿನ ಹೋಗಿ ಬಂದಿದ್ರೇನಾಗಿತ್ತು ಊರಿಗೆ?" ಎಂದ ರಾಜುವಿನ ಮಾತು ಪದೇಪದೇ ಶಬ್ದಮಾಡುತ್ತಿತ್ತು. ಆಗ ಅವಳಿಗನ್ನಿಸಿತು "ಅಯ್ಯೋ ಅಪ್ಪಾಜೀ ಬರಬಾರದೇ" ಎಂದು.

ಅಂತೆಯೇ ಮುದ್ದಪ್ಪನವರ ಮನಸ್ಸು ಕರಗುವುದಕ್ಕೆ ಎರಡು ಮೂರು ತಿಂಗಳ ಕಾಲ ಬೇಕಾಯಿತು. ಅಷ್ಟರಲ್ಲಿ ನಾಗುವಿನ ಪಾಡು ನಾಯಿಪಾಡಾಗಿ ಹೋಗಿತ್ತು. ದಿನ ಬೆಳಗಾದರೆ ನಂಜಮ್ಮನ ಮಾತಿನ ಹೊಡೆತವನ್ನು ನಾಗುವು ತಡೆದುಕೊಳ್ಳುವುದು ಅಸಾಧ್ಯವಾಯಿತು. ಅದಕ್ಕಿಂತ ಹೆಚ್ಚಾಗಿ ಅಸಹ್ಯವಾಯಿತು. ಅವಳ ಮಾತೆಲ್ಲ ನಾಗುವಿನ ಯೌವನ, ಸೋಮಣ್ಣನ ಮೇಲೆ ಅವಳಿಗಿದ್ದ ಕಣ್ಣು ಎಂತಲೇ ಇರುತ್ತಿತ್ತು. ಇದರಿಂದಾಗಿ ನಾಗು, ಹುಚ್ಚಿಯಂತಾಗಿದ್ದಳು. ಅವಳಿಗೆ ಕಣ್ಣೀರು ಭಾವಿ ನೀರಿಗಿಂತ ಅಗ್ಗವಾಗಿ ಹೋಗಿತ್ತು. ತನ್ನ ಅಪ್ಪನನ್ನು ಒಮ್ಮೆ ನೋಡಿದರೆ ತನ್ನ ಜೀವಿತದ ಕೆಲಸಗಳೆಲ್ಲ ಮುಗಿದಂತೆಯೇ ಎನಿಸಿತು. ಅವರ ಕೈಲಿ ತನ್ನ ನಾಗರಾಜುವನ್ನು ಹಾಕಿಬಿಟ್ಟರೆ ತಾನು ಸ್ವತಂತ್ರಳು, ಎನ್ನಿಸಿತು. ಆದುದರಿಂದ ಅವಳು ತನ್ನ ತಂದೆಯನ್ನೇ ನೀರುಗಣ್ಣುಗಳಿಂದ ನಿರೀಕ್ಷಿಸುತ್ತಿದ್ದಳು.

ಕಡೆಗೂ ಒಂದು ದಿನ ಮುದ್ದಪ್ಪನವರು ತಮ್ಮ ಅಕ್ಕನ ಸಮೇತ ಸೆಜ್ಜೆಗೆ ಬಂದಿಳಿದರು. ತಾವು ನಾಗುವನ್ನು ಕರೆಯುವುದಕ್ಕೆ ದೇವರ ಮೇಲೆ ಆಣೆ ಇರುವುದರಿಂದ ತಮ್ಮ ಅಕ್ಕನನ್ನು ಕರೆದುಕೊಂಡು ಬಂದಿದ್ದರು. ನಾಗುವೂ ಅದನ್ನೇ ಬಯಸಿದ್ದದ್ದು. ಅವರು ನಿರೀಕ್ಷಿಸಿದ ಹಾಗೆ ನಾಗು ಎದುರುತ್ತರ ಮಾಡಲೇ ಇಲ್ಲ. ಮಾವನ ಅಪ್ಪಣೆ ಪಡೆದು ಗಾಡಿ ಹತ್ತಿದಳು. ಮುದ್ದಪ್ಪನವರು ತಮ್ಮ ಮಗಳನ್ನು ಕರೆದುಕೊಂಡು ಪಲುಕೂರಿಗೆ ಬಂದು ತಲಪಿದರು.

ಐದಾರು ದಿನಗಳಲ್ಲೇ ನಾಗರಾಜು ಪಲುಕೂರಿಗೆ ಹೊಂದಿಕೊಂಡನು. ಮುದ್ದಪ್ಪನವರೊಡನೆ, "ತಾತ! ನಾನು ಇನ್ನೆಲ್ಲಿಗೂ ಹೋಗೋದಿಲ್ಲ" ಎಂದ.

ಮುದ್ದಪ್ಪನವರಿಗೆ ತುಂಬಾ ಸಂತೋಷವಾಯಿತು. ನಾಗು ಇನ್ನೂ ಆ ಮಾತು ಅಂದಿರಲಿಲ್ಲ. ಆದರಿಂದ ಅವರಿಗೆ ಕೊಂಚ ಕಸಿವಿಸಿಯಾಗಿತ್ತು. ನಾಗುವಿನ ನಡೆವಳಿಕೆಯಲ್ಲೇ ಒಂದು ಭಾರಿ ವ್ಯತ್ಯಾಸ ಅವರಿಗೆ ಕಂಡುಬಂದಿತ್ತು. ಅವಳ ಕಣ್ಣುಗಳಲ್ಲಿ ಸದಾ ಭಯ ತುಂಬಿದಂತಿರುತ್ತಿತ್ತು. ಅವಳ ಅಡ್ಡಾಡುವಿಕೆಯಲ್ಲಿ ನೆಮ್ಮದಿಯ ಗುರುತೇ ಕಾಣುತ್ತಿರಲಿಲ್ಲ.

ನಿಜಕ್ಕೂ ನಾಗುವಿಗೆ ಪಲುಕೂರೆಂದರೆ ತುಂಬಾ ಹೆದರಿಕೆ. ತನ್ನ ಗಂಡ ಜೀವಂತನಾಗಿದ್ದಾಗ ಅವನ ಊರಿಗೇ ಬಂದು ತನ್ನನ್ನು ಹೆದರಿಸಿದ ಚಂದಣ್ಣನ ಸ್ವಂತ ಊರದು. ಅದೇ ಅವಳಿಗೆ ದಿಗಿಲು. ಯಾವ ಹೊತ್ತಿನಲ್ಲಿ ಏನಾಗುವುದೋ ಎಂಬುದೇ ಅನುಮಾನ. ನಾಗುವಿಗೆ ಸಾಮಾನ್ಯವಾಗಿ ರಾತ್ರಿಯ ವೇಳೆಯಲ್ಲಿ ನಿದ್ದೆಯೇ ಬರುತ್ತಿರಲಿಲ್ಲ. ಚಂದಣ್ಣನು ನಾಗುವಿನ ಮೇಲಿಟ್ಟಿದ್ದ ಪ್ರೀತಿ ನಾಗುವನ್ನು ಹೀಗೆ ಹಿಂಸಿಸುತ್ತಿತ್ತು.

ಚಂದಣ್ಣನು ಈಚೆಗೆ ಸುಮ್ಮಸುಮ್ಮನೆ ನಕ್ಕುಬಿಡುವುದನ್ನು ಅಭ್ಯಾಸ ಮಾಡಿಕೊಂಡಿದ್ದನು. ಅದನ್ನೇ ಜನರು ಹುಚ್ಚು ಎನ್ನುತ್ತಿದ್ದರು. ಆದರೆ ಚಂದಣ್ಣನಿಗೆ ಹುಚ್ಚಲ್ಲ; ನಾಗುವಿನ ಹುಚ್ಚು. ಆ ಹುಚ್ಚಿನಿಂದ ಅವನು ಎಲ್ಲಾ ವಿಷಯಕ್ಕೂ ನಗುವುದು ಸಾಧ್ಯವಾಗಿತ್ತು. ಅವನ ದುಃಖಕ್ಕೆ ಕಣ್ಣೀರಿರಲಿಲ್ಲ. ಆದ್ದರಿಂದ ಅವನು ಅಳುವುದಕ್ಕೂ ನಗುವನ್ನೇ ಉಪಯೋಗಿಸುತ್ತಿದ್ದನು.

ಈ ನಗುವೇ ನಾಗುವನ್ನು ಬೆದರಿಸಿ ನಡುಗಿಸಿದುದು. ಮಧ್ಯಾಹ್ನದ ಹೊತ್ತಿನಲ್ಲಿ ಮುದ್ದಪ್ಪನವರಿಲ್ಲದ ಸಮಯದಲ್ಲಿ ಚಂದಣ್ಣ ಬಂದು ತಲೆಬಾಗಿಲಲ್ಲಿ ವಿಕಟವಾಗಿ ನಕ್ಕನು. ನಾಗುವು ಬಾಗಿಲನ್ನು ಹಚ್ಚಿಬಿಡಬೇಕೆನ್ನುವುದರೊಳಗೆ ಚುದಣ್ಣ ಅವಳೆದುರಿಗೆ ಬಂದು ನಿಂತನು.

"ನಾಗು ಊರಿಗೆ ಬಂದವಳು ನೀರಿಗೆ ಬರುತಾಳೇಂತ ಆಚೆ ಕಾಯಕೊಂಡಿದ್ದು ಸಾಕಾಯ್ತು. ಅದಕ್ಕೇ ಒಳಕ್ಕೆ ಬಂದೆ." ಚಂದಣ್ಣ ಪುನಃ ನಕ್ಕನು.

ನಾಗು ಓಡಿ ಹೋಗಲು ಕಾಲು ಬರಲಿಲ್ಲ. "ಚಂದಣ್ಣನು ಕೂಗಿಕೊಳ್ಳುವುದಕ್ಕೂ ಹೇಸುವುದಿಲ್ಲ, ಓಡಬೇಡ ಎಂದಿತು ಮನಸ್ಸು. ಅವಳು ತನ್ನ ನಡುಗುವ ಶರೀರವನ್ನು ಕಂಬಕ್ಕೆ ಒರಗಿಸಿ ಅಧೋಮುಖಿಯಾಗಿ ನಿಂತಳು.

"ನೋಡಿದೆಯೋ, ಹೇಗೆ ನಿನ್ನನ್ನ ಈ ಊರಿಗೆ ಎಳೆಸಿ ತಂದೆ?" ಗೆಲವಿನ ಸ್ವರದಲ್ಲಿ ಚಂದಣ್ಣ ಹುಬ್ಬು ಹಾರಿಸಿದನು.

"ಚಂದಣ್ಣ, ಅಪ್ಪಜೀ ಇಲ್ಲದೇ ಇದ್ದ ಸಮಯ." ಎಂದಳು ನಾಗು. ಚಂದಣ್ಣ ದೊಡ್ಡದಾಗಿ ನಕ್ಕ. "ಅದಕ್ಕೇ ಬಂದೆ. ಅಕಸ್ಮಾತ್ ಅವರು ಬಂದರೂ ನಾನು ಹೆದರಬೇಕಾದ್ದಿಲ್ಲ. ನನ್ನ ಎಲ್ಲರೂ ಹುಚ್ಚ ಅಂತಾ ಇದಾರೆ. ನನ್ನ ಹುಚ್ಚನ್ನು ಇಳಿಸಿಕೊಳ್ಳೋಕ್ಕೇ ಇಲ್ಲಿಗೆ ಬಂದಿರೋದು" ಎಂದನು.

ನಾಗು ತೊದಲುತ್ತ "ಚಂದಣ್ಣ!" ಎಂದು ಬೇಡುಗಣ್ಣಿಟ್ಟಳು. "ನೀನು ನನ್ನ ಅಣ್ಣ ಅಂತ ಕೂಗಿದಾಕ್ಷಣ ನಾನು ನಿನ್ನ ಅಮ್ಮ ಅಂತ ಕೂಗ್ತೀನೀಂತ್ಲೆ? ಅದನ್ನ ಮರೆತುಬಿಡು. ನೀನು ಏನಾದರೂ ನನಗೆ ಬೇಕಿಲ್ಲ. ನೀನು ಈಗ ಲಾದರೂ ನನ್ನ ನಾಗು ಆಗಲೇಬೇಕು."

"ಚಂದಣ್ಣ ನನ್ನ ಮದುವೆ ಮಾಡ್ಕೋಬೇಕೂ ಅಂತ ಇದ್ದದ್ದೂ ಈ ಹುಚ್ಚೀನೆ?"

"ಹೌದು. ಈಗ ನಿನಗೂ ಸೆಜ್ಜೆ ಸೋಮಣ್ಣನಿಗೂ ಸಂಬಂಧ ಹುಟ್ಟಿಸಿ, ನಿನ್ನ ಪಲುಕೂಂಗೆ ಕರೆಸಿರೋದೂ ಈ ಹುಚ್ಚೀನೆ!"

ಸೋಮಣ್ಣ ಪಿಶಾಚಿಯ ಹಾಗೆ ಕಂಡನು. ನಾಗುವು ಸೆಜ್ಜೆಯ ನಂಜಮ್ಮನ ಮಾತುಗಳೆಲ್ಲವನ್ನೂ ಈಗ ಅರ್ಥಮಾಡಿಕೊಂಡಳು.

"ಅಯ್ಯೋ! ಅಪ್ಪಜೀ, ಅತ್ತೆ, ಎಲ್ಲರಿಗೂ ಈ ಅಪ್ವಾದದ ವಿಷ ಹಂಚಿ ಬಿಟ್ಟಿದೀರೇನು?"

"ಗೊತ್ತಿದ್ರೂ ಇರಬಹುದು."

ನಾಗುವಿಗೆ ತಲೆಸುತ್ತು ಬಂದಿತು. ಕಣ್ಣು ಕಾಣಿಸದಾಯಿತು. ಇದ್ದ ಕ್ಕಿದ್ದ ಹಾಗೆಯೇ ಅವಳ ಕೈಯನ್ನು ಯಾರೋ ಹಿಡಿದುಕೊಂಡ ಹಾಗಾಯಿತು. ಎಂತಹ ಕಬ್ಬಿಣದ ಕೈ ಅದು! ಮೃತ್ಯುವಿನ ಕೈ ಇರಬಹುದು. ತನ್ನ ಕಡೆಗೆ ಎಳೆದುಕೊಳ್ಳುತ್ತಿದೆ! ನಾಗುವು ಎಚ್ಚೆತ್ತಳು. ಚಂದಣ್ಣನ ಕೈ ತನ್ನ ಕೈಯನ್ನು ಮುಟ್ಟಿರುವುದು ಅರಿವಿಗೆ ಬಂದ ತಕ್ಷಣ, ಅವಳಿಗೆ ಯಾವ ದೇವರು ಶಕ್ತಿ ಕೊಟ್ಟನೋ ಏನೋ? ತಕ್ಷಣ ಅವಳು ಅಡಿಗೆ ಮನೆಯೊಳಗಿದ್ದಳು. ಆದರೂ ದೂರದಿಂದಲೇ ಚಂದಣ್ಣನ ಧ್ವನಿ ಕೇಳಿಸಿತು.

"ಹುಚ್ಚು ಹುಡುಗಿ! ದಾರ ನನ್ನ ಕೈಲದೆ. ಪಟದ್ಹಂಗೆ ನೀನು ಎಷ್ಟು ದೂರ ಹಾರಿದರೇನು? ಹೋಗು ಹೋಗು."

ಚಂದಣ್ಣ ಆಚೆಗೆ ಹೊರಟುಹೋದ. ಬಹಳ ಹೊತ್ತಿನ ಮೇಲೆ ನಾಗು ಈಚೆಗೆ ಬಂದಳು. ಅವಳ ಮೈ ಇನ್ನೂ ನಡುಗುತ್ತಿತ್ತು. ಅವಳ ಅತ್ತೆ ಮೈಗೆ ಸ್ವಸ್ಥವಿಲ್ಲವೆಂದು ಮಲಗಿದ್ದರು. ನಾಗು ಮನೆಯ ಕಂಬ, ಗೋಡೆಗಳಿಗೆಲ್ಲ ಹೆದರಿದಳು. ಅವಳಿಗೆ ತನ್ನ ತಂದೆಯ ಮನೆಯೇ ನರಕವಾಗತೊಡಗಿತು. ತಾನು ಪಲುಕೂರಿಗೆ ಬಂದದ್ದು, ಹುಲಿ ಅವಿತ ಪೊದೆಯನ್ನು ತಿನ್ನಲು ಹೋದ ಆಡಿನಂತಾಯಿತೆಂದು ತಿಳಿದುಕೊಂಡಳು. ಅವಳು ಕಂಡಿರುವುದು ಮೂರೇ ಮನೆ ಪಲುಕೂರು, ನರಕವಾಯಿತು. ಮೈಸೂರು ಮುಗಿಯಿತು. ಕಷ್ಟ ವಾದರೂ ಕೊನೆಕೊನೆಗೆ ನೆಮ್ಮದಿ ಸಿಕ್ಕಬೇಕಾದರೆ ಸಜ್ಜೆಯೇ ಸರಿ, ಎನ್ನಿಸಿ ತವಳಿಗೆ. "ನಾನು ನಿರ್ಮಲವಾಗಿದ್ದರೆ ಸರಿ. ಯಾರು ಏನೆಂದುಕೊಂಡರೇನು? ಜನಗಳ ಬಾಯಿಗೆ ಮುಚ್ಚಲು ನಮ್ಮ ಎರಡು ಕೈಗಳು ಸಾಲದು." ಎನ್ನುವ ಯೋಚನೆ ಅವಳ ಸಿದ್ಧಾಂತಕ್ಕೆ ಬೆಂಬಲ ಕೊಟ್ಟಿತು.

"ನಾನು ಸಜ್ಜೆಗೆ ಹೋಗಬೇಕು. ನನ್ನ ಕರೆದುಕೊಂಡು ಹೋಗಿಬಿಡಿ" ಎಂದು ತಮ್ಮ ತಂದೆಯನ್ನು ಕೇಳಿಕೊಂಡಳು. ಮುದ್ದಪ್ಪನವರಿಗೆ ತಲೆ ಕೆಟ್ಟಿತು.

"ಏನು ನಾಗು ನಿನ್ನ ಅವಾಂತರ! ಹೇಳೋರು ಕೇಳೋರು ಯಾರೂ ಇಲ್ಲ ಅಂತ ಮಾಡಿದೀಯೇನು?" ಎಂದರು, ಮುದ್ದಪ್ಪ.

"ನನಗೊಂದೂ ಗೊತ್ತಿಲ್ಲ. ನೀವು ಕರಕೊಂಡು ಹೋಗ್ತೀರೋ ಅಥವಾ ನಾನೇ ಹೋಗಲೋ?" ನಾಗು ವಿಧೇಯತೆ ಮೀರಿದಳು.

"ಹುಚ್ಚುಗಿಚ್ಚು ಹಿಡಿಯಿತೇನೆ? ನೀನು ಬಂದು ಇನ್ನೂ ಸರಿಯಾಗಿ ಒಂದು ತಿಂಗಳಾಗಿಲ್ಲ. ಆಗ್ಲೇ ಏನೋ ಮಾತಾಡ್ತಾ ಇದಾಳೆ. ಇವೆಲ್ಲ ನನ್ನ ಹತ್ತಿರ ಆಡಬೇಡ. ಬಾಯಿಮುಚ್ಚಿಕೊಂಡಿರು."

ಸರ್ರನೆ ನಾಗು ಅತ್ತುಬಿಟ್ಟಳು. ಮುದ್ದಪ್ಪನವರ ಮುಖದಲ್ಲಿ ವ್ಯತ್ಯಾಸ ವೇನೂ ಆಗಲಿಲ್ಲ

"ಇವತ್ತು ಕಳಿಸದಿದ್ದರೇ ನಾಳೇ ನಾಳಿದ್ದಿನ ಅನಾಹುತಕ್ಕೆ ನಾನು ಕಾರಣವಲ್ಲ" ನಾಗು ಹಿಂದಕ್ಕೆ ಹೊರಟಳು.

"ನಾನು ಕರಕೊಂಡೂ ಬರಲಿಲ್ಲ; ನಾನು ಕಳಿಸೋದೂ ಇಲ್ಲ. ನಿಮ್ಮತ್ತೆ ಇಷ್ಟ; ನಿನ್ನಿಷ್ಟ" ಇನ್ನೂ ಗಂಭೀರವಾಗಿಯೇ ಅಂದರು ಮುದ್ದಪ್ಪ.

ನಾಗು, ಸೆರಗಿನಿಂದ ಮುಖ ಮುಚ್ಚಿಕೊಂಡು ಒಳಕ್ಕೆ ನಡೆದಳು. ಮುದ್ದಪ್ಪ ನಿಧಾನವಾಗಿ ಹೊರಕ್ಕೆ ಹೊರಟುಹೋದರು. ನಾಗು ಒಳಗೆ ಯಥೇಚ್ಛವಾಗಿ ಅತ್ತುಕೊಂಡಳು.

ಅಂದು ಮಧ್ಯಾಹ್ನ ಮನೆಯವರೆಲ್ಲ ಒಂದೊಂದು ಕಡೆಗಾಗಿ, ಮನೆ ನಿಶ್ಶಬ್ದವಾಗಿದ್ದ ಸಮಯ. ಅಡಿಗೆಮನೆಯೊಳಗೇ ನಾಗು ಸೇರಿಕೊಂಡಿದ್ದಳು. ಅಡಿಗೆಮನೆಯಲ್ಲಿ ಏನೊ ಸದ್ದಾಗುತ್ತಿರುವುದನ್ನು ಕೇಳಿ ನಾಗುವಿನ ಅತ್ತೆ, ಹಿತ್ತಿಲಿಂದಲೇ "ಏನವ್ವಾ ಅದು?" ಎಂದು ಕೂಗಿದರು. ನಾಗುವಿನಿಂದ ಉತ್ತರ ಬರಲಿಲ್ಲ. ಅವರೇ ಬಂದರು. ಅಡಿಗೆ ಮನೆಯೊಳಕ್ಕೆ ನುಗ್ಗಿದ ತಕ್ಷಣ ಚಿಟ್ಟನೆ ಚೀರಿಕೊಂಡರು. ತಕ್ಷಣ ಅವರು ನಾಗುವನ್ನು ಹಿಡಿದು ಹೊರಕ್ಕೆ ಎಳೆದು ತಂದರು ನಾಗುವಿನ ತಲೆ ಕೆದರಿತ್ತು.

ಮುದ್ದಪ್ಪನವರು ಮನೆಗೆ ಬಂದಾಗ ಅಕ್ಕ ಗಲಾಟೆ ಮಾಡುತ್ತಿದ್ದುದನ್ನು ಕಂಡು "ಏನಕ್ಕಾ ಈ ಗಲಾಟೆ!" ಎಂದರು. ನಾಗು ಮೂಲೆಯಲ್ಲಿ ದೆವ್ವ ಬಡಿದಂತೆ ಕುಳಿತಿದ್ದಳು. ಮುದ್ದಪ್ಪನವರ ಅಕ್ಕ ಮುದ್ದಪ್ಪನವರನ್ನು ಅಡಿಗೆಮನೆಯೊಳಕ್ಕೆ ಕರೆದುಕೊಂಡು ಹೋಗಿ ತೋರಿಸಿದರು. ತೊಲೆಗೆ ಒಂದು ಕುಣಿಕೆ ಹಗ್ಗ ಕಟ್ಟಿತ್ತು. ಮುದ್ದಪ್ಪನವರಿಗೆ ಅರ್ಥವಾಗಿ, ಸಿಟ್ಟು ವಿಪರೀತವಾಯಿತು. ಅಲ್ಲಿಂದ ವೇಗವಾಗಿ ನಾಗುವಿದ್ದೆಡೆಗೆ ಬಂದವರೇ ಝಾಡಿಸಿ ಒದ್ದುಬಿಟ್ಟರು. ನಾಗು, ಏಕೆ ಅಳಬೇಕು? ಪೆಟ್ಟಾಗದವರಂತೆ ಪುನಃ ಎದ್ದು ಹಾಗೆಯೇ ಕುಳಿತಳು. ಅವರತ್ತೆಗೆ ಮಾತ್ರ ಕರುಳು ಹಿಂಡಿದಂತಾಯಿತು. ಅವರು ಮಧ್ಯೆ ಬರದಿದ್ದರೆ, ಹಗ್ಗ ಹಿಡಿಸಬೇಕಾಗಿದ್ದ ನಾಗುವನ್ನು ಮುದ್ದಪ್ಪನವರೇ ತೀರಿಸಿಬಿಡುತ್ತಿದ್ದರೋ ಏನೋ?

"ಎಲ್ಲಾದರೂ ಹಾಳಾಗಿಹೋಗಲಿ. ನನ್ನ ಹೊಟ್ಟೆಯಲ್ಲಿ ಮಕ್ಕಳೇ ಆಗಲಿಲ್ಲವೆಂದು ತಿಳಕೊಂಡರಾಯಿತು." ಎಂದರು ಮುದ್ದಪ್ಪ. ಅಂತೆಯೇ ನಾಗುವನ್ನು ಸೆಜ್ಜೆಗೆ ಕಳಿಸಿಬಿಡುವುದೆಂದು ತೀರ್ಮಾನವಾಯಿತು. ಆದರೆ ನಾಗುವೊಬ್ಬಳಿಗೇ ಅನುಮತಿ. ಅವಳ ಜೊತೆಯಲ್ಲಿ ನಾಗರಾಜುವನ್ನು ಕಳುಹಿಸಕೂಡದೆಂತಾಯಿತು.

ನಾಗು, ಪೆಚ್ಚಾಗಿ "ನಾಗರಾಜು ಬರೋದಿಲ್ಲವೆ?" ಅಂದಳು.

"ಇಲ್ಲ—ಶಿವಪ್ಪಣ್ಣ ಅವನನ್ನು ನಮ್ಮ ಮನೆಗೆ ಕೊಟ್ಟಿದ್ದಾರೆ" ಎಂಬ ಉತ್ತರ ಬಂತು. ನಾಗು ಮಾತನಾಡಲಿಲ್ಲ. ಅವಳು ಗಾಡಿ ಹತ್ತುವಾಗ ಸಹ ನಾಗರಾಜುವನ್ನು ನೋಡಲಾಗಲಿಲ್ಲ. ಈಗಾಗಲೇ ನಾಗುವನ್ನು ಮರೆಯಿಸಬೇಕೆಂದು ನಾಗರಾಜುವನ್ನು ಅವರತ್ತೆ ಮರೆ ಮಾಡಿದ್ದರು. ನಾಗರಾಜುವಿಗೆ ತನ್ನಮ್ಮ ಹೋಗುವುದು ತಿಳಿಯದು. ಇಲ್ಲದಿದ್ದರೆ ಅವರು ಕೊಟ್ಟ 'ಕಳ್ಳೇಕಾಯಿ'ಯ ಆಸೆಗೋಸ್ಕರ ಹೊಲಕ್ಕೆ ಹೊರಟುಹೋಗುತ್ತಿದ್ದನೆ?

ನಾಗು ಮಾತನ್ನೇ ಆಡುತ್ತಿರಲಿಲ್ಲ. ಅದದೇ ದಾರಿ. ಅದದೇ ಸಾಲು ಮರಗಳು. ಅದದೇ ಹೊಲಗಳು. ಆದ್ದರಿಂದ ಕಣ್ಣುಗಳಿಗೂ ಬೇಸರವಾಗಿತ್ತು. ಅಪ್ಪ ತನ್ನೊಡನೆ ಕೋಪವಾಗಿರುವುದರಿಂದ ಅವರೊಡನೆ ಮಾತೂ ಇಲ್ಲ. ಮೆದುಳು ಮಾತ್ರ ತನ್ನ ಹುಚ್ಚು ಕೆಲಸಕ್ಕೆ ತೊಡಗಿತ್ತು. ಅವಳ ಕಣ್ಣು ಶೂನ್ಯದೃಷ್ಟಿಯನ್ನು ತುಂಬಿಕೊಂಡಿತ್ತು. ಗಾಡಿ ಅವಳ ಮೈಯನ್ನು ಕುಲುಕುತ್ತಿತ್ತು, ಅಷ್ಟೆ.

ಯಾರೋ ಬಹು ಹಿಂದೆ ಕೂಗಿದ ಹಾಗಾಯಿತು. ಮುದ್ದಪ್ಪನವರು ಅದನ್ನು ಆಲಿಸಿ ಕೇಳಿದರು. ಸ್ವಲ್ಪಹೊತ್ತಿನಲ್ಲೇ ಚಂದಣ್ಣನು ಸೈಕಲ್ ಮೇಲೆ ಆತುರವಾಗಿ ಬರುತ್ತಿದ್ದುದು ಕಾಣಬಂತು. ಮುದ್ದಪ್ಪನವರು ಗಾಡಿ ನಿಲ್ಲಿಸುವಂತೆ ಹೇಳಿದರು. ಚಂದಣ್ಣನು ಗಾಡಿಯ ಬಳಿ ಸೇರಿದನು.

"ಈ ಗೊಲಸು" ಚಚ್ಚಿಹಾಕಿಸಿ, ನಾಗರಾಜನಿಗೆ ಒಂದು ಜೊತೆ 'ಕಡಕು' ಮಾಡಿಸಬೇಕೂಂತ, ಅಮ್ಮಯ್ಯ ರಾಚಳ್ಳಿ ಪುಟ್ಟಸ್ವಾಮಾಚಾರಿಗೆ ಹೇಳಿದ್ರಂತೆ. ಹೊಯ್ತಾಹೊಯ್ತಾ ದಾರೀಲಿ ಇದನ್ನ ಕೊಟ್ಬುಡೀ ಅಂತ ಹೇಳಿ ಕೊಟ್ಬುಟ್ಟು ಬಾ ಅಂದರು ಅಮ್ಮಯ್ಯ" ಎಂದು ಚಂದಣ್ಣ ಆ ಗೊಲಸನ್ನು ಮುದ್ದಪ್ಪನವರ ಕೈಗೆ ಕೊಟ್ಟನು. ಆದರೆ ಅವನು ನೋಡುತ್ತಿದ್ದುದು ನಾಗುವನ್ನೇ.

ನಾಗುವು ಕಿರುಗಣ್ಣಿನಲ್ಲಿ ಚಂದಣ್ಣನನ್ನು ನೋಡಿದಳು. ಅಬ್ಬಾ! ಎಂತಹ ಭೇತಾಳ ಇದು, ಎನ್ನಿಸಿತು. ಚಂದಣ್ಣ ತನ್ನ ಹಳದೀ ಹಲ್ಲುಗಳನ್ನು ಬಿಟ್ಟು ನಕ್ಕನು. ಎರಡು ಕಣ್ಣುಗಳಿಂದಲೂ ನಾಗುವಿನ ಮೇಲೆ ಕಿಡಿಯುದುರಿಸಿದನು. ನಾಗುವಿಗೆ ತನ್ನ ಈ ಕಣ್ಣುಗಳನ್ನು ಮತ್ತೊಮ್ಮೆ ತೋರಿಸಿ

ಹೋಗಬೇಕೆಂದು ಬಂದ ಚಂದಣ್ಣನ ನೆವ, ಕಾರ್ಯಗಳೆರಡೂ ಮುಗಿದುವು. ಅವನು ಹೊರಟುಹೋದನು.

ಗಾಡಿ ಮುಂದಕ್ಕೆ ಹೊರಟಿತು. ಮುದ್ದಪ್ಪನವರು ಮನಸ್ಸಿನಲ್ಲೇ ವಿಚಾರಿಸಹತ್ತಿದರು. "ಅಯ್ಯೊ, ನಾಗು ಯಾಕೆ ಹೀಗಾದಳು? ಅವಳು ನೇಣು ಹಾಕಿಕೊಳ್ಳಬೇಕಾದ ಅಪರಾಧವೇನು? ಅವಳಿಗೆ ಯಾಕೆ ಹಾಳು ಈ ಮುಂಡೇತನ ಬಂತು? ಪಲುಕೂರಿನಲ್ಲಿ ಇವಳಿಗೇನು ತೊಂದರೆ? ಅನ್ಯಾಯವಾಗಿ ನನ್ನ ಮಗಳನ್ನು ನಾನೇ ಒದ್ದುಬಿಟ್ಟೆನಲ್ಲಾ ಪಾಪಿ! ನಾಗರಾಜುವೂ ಅವಳ ಜೊತೆಗಿಲ್ಲ. ಆದರೂ ಅವಳು ವ್ಯಸನಪಡಲಿಲ್ಲ. ಏನು ಕಾರಣ? ಅಯ್ಯೊ, ನಾಗು ಯಾಕೆ ಹೀಗಾದಳು?"

ಸೆಜ್ಜೆ ಹತ್ತಿರಹತ್ತಿರಕ್ಕೆ ಬಂದಹಾಗೆಲ್ಲ ಮುದ್ದಪ್ಪನವರ ಮನಸ್ಸಿನಲ್ಲಿ ಮಗಳಿಗಾಗಿ ಮರುಕಹುಟ್ಟಿತು. ಕೊಂಚ ತಿರುಗಿ ನೋಡಿದರು. ನಾಗು ಎಲ್ಲೋ ನೋಡುತ್ತಿದ್ದಳು. ಅವಳ ಒಳಕಣ್ಣುಗಳಂಚಿನಿಂದ ಎರಡು ಚರ್ಮದ ಗೆರೆಗಳು ಮುಂಗೆನ್ನೆಗಳ ವರೆಗೂ ಬೆಳೆದುಬಂದಿತ್ತು.

ಆಗ ನಾಗುವು ಯೋಚನೆ ಮಾಡುತ್ತಿದ್ದುದು ನಾಗರಾಜುವಿನ ವಿಷಯ.

೧೫

ಪ್ರಪಂಚವೇ ವ್ಯತ್ಯಾಸವಾಯಿತು. ನಾಗುವಿನ ಕಣ್ಣಿಗೆ ಎಲ್ಲರ ಮುಖಗಳೂ ಅಣಕಿಸುತ್ತಿರುವಂತೆ ಕಂಡಿತು. ಸೆಜ್ಜೆಗೆ ಬಂದರೆ ನೆಮ್ಮದಿ ಸಿಕ್ಕಬಹುದೇನೋ ಎಂಬ ನಾಗುವಿನ ಊಹೆಯು ಮಣ್ಣುಪಾಲಾಯಿತು. ನಾಗು ಬಂದಿಳಿದಾಗಲೇ ಅವರ ಮಾವ ಕೇಳಿದರು. "ಇದೇನಮ್ಮಾ ಸಮಾಚಾರವೇ ಇಲ್ದೇ ಬಂದ್ಬುಟ್ಟಿ?" ಎಂದರು. ಅದಕ್ಕಿಂತ ಹೆಚ್ಚಾಗಿ ಅಡಿಗೆ ಮನೆ ಮೆಟ್ಟಿತ್ತಿರುವುದರಲ್ಲೇ ನಂಜಮ್ಮ ಇದಿರಾಗಿ 'ಸೆಜ್ಜೆ ಬಿಟ್ಬುಟ್ಟು ಹೋಗೋಕೆ ಸಾಧ್ಯವೆ?' ಎಂದು ತನಗೆ ತಾನೇ ಹೇಳಿಕೊಂಡಳು. ನಾಗುವಿಗೆ ಇದರಿಂದ ಶೀರ ಖೇದವಾಯಿತು. ಪಲುಕೂರಿನ ಚಂದಣ್ಣ, ಹೊತ್ತಿಸಿದ ಬೆಂಕಿಯಿಂದ ಒಂದು ಕಿಡಿ, ಸೆಜ್ಜೆಯ ಸೊಸೆ ಪುಟ್ಟಮ್ಮನ ಮೂಲಕ ಬಂದು ನಂಜಮ್ಮನನ್ನು ಆವರಿಸಿಕೊಂಡಿದೆ ಎಂಬುದು ನಾಗುವಿಗೆ ಮನದಟ್ಟಾಯಿತು.

ನಾಗುವಿನ ಕಷ್ಟಗಳನ್ನೆಲ್ಲಾ ಕೇಳುವುದಕ್ಕೆ ಅರ್ಹರಾದವರೊಬ್ಬರಿದ್ದರೆ ಅವರೆದುರಿಗೆ ನಾಗುವು ಅವುಗಳನ್ನೆಲ್ಲಾ ತೋಡಿಕೊಳ್ಳಲು ಸಿದ್ಧಳಾಗಿದ್ದಳು. ಆದರೆ ಅಂತಹವರು ಅವಳ ದೃಷ್ಟಿಗೇ ಒಬ್ಬರೂ ಬಿದ್ದಿರಲಿಲ್ಲ. ಮರಮ್ಮನಲ್ಲೂ ಹೇಳಿಕೊಳ್ಳುವ ಹಾಗಿಲ್ಲ. ಅವಳು ಏನೆಂದುಕೊಳ್ಳುವಳೋ? ಆದರೂ ನಾಗುವಿಗೆ ಮರಮ್ಮನಲ್ಲಿ ಒಂದು ಬಗೆಯ ನಂಬಿಕೆ.

"ಬಾ ಮರಕ್ಕ ಕೂತ್ಗೊ" ಎಂದು ಕರೆದಳು ನಾಗು.

ಮರಮ್ಮ ನಿಂತುಕೊಂಡೇ "ಇಲ್ಲಾಮ್ಮ, ಇನ್ನೂ ಮನೇಲಿ ಕೆಲಸಗಳು ಬಿದ್ದಿವೆ. ನಿನ್ನ ಮುಖನೋಡ್ಕಂಡುಹೋಗವೇ ಅಂತ ಬಂದೆ" ಎಂದಳು. ನಾಗು ವಿಷಾದದಿಂದ ನಕ್ಕಳು. "ಹಾಗಾದರೆ ಇನ್ನು ನಾನು ಸಾಯೋವರೆಗೂ ಬರಕ್ಕಿಲ್ಲಾ ನಮ್ಮನೆಗೇ ಅನ್ನು" ಎಂದಳು.

"ಉಹ್ಞು—ಹಂಗಲ್ಲ. ಇನ್ನು ನಾನು ಸಾಯೋವರೆಗೂ ನಿಮ್ಮನೇಗೆ ಬರೋದಿಲ್ಲ ಅಂತ ಕಾಣಸ್ತದೆ" ಮರಮ್ಮ ತಲೆ ತಗ್ಗಿಸಿ ಹೇಳಿದಳು.

"ಇದೇನಕ್ಕ ನೀ ಹೇಳೋದು?" ಆಶ್ಚರ್ಯಪಟ್ಟು ನಾಗು ಕೇಳಿದಳು.

"ನಂಜಮ್ಮನಿಗೂ ನನಗೂ ಬಹಳ ಮಾತುಕತೆ ನಡೆಯಿತು" ಮೌನವೇ ಮಾತಾಡಿದಂತೆ ಮರಮ್ಮ ನುಡಿದಳು.

"ಯಾವ ವಿಷಯಕ್ಕೆ?"

ನಾಗುವಿನ ಈ ಪ್ರಶ್ನೆಗೆ ಬೇಗ ಉತ್ತರ ಕೊಡುವುದು ಮರಮ್ಮನಿಗೆ ಅಸಾಧ್ಯವಾಯಿತು. ನಾಗುವು ಪುನಃ ಅದೇ ಪ್ರಶ್ನೆ ಹಾಕಿದ ಮೇಲೆ ಮರಮ್ಮ "ನಿನ್ನ ವಿಷಯಕ್ಕೇನೆ" ಎಂದಳು.

ನಾಗು ಗಂಭೀರವಾದಳು. ಅವಳೆದೆಯಲ್ಲಿ ಹೊಯ್ದಾಟ ಪ್ರಾರಂಭವಾಗಿತ್ತು. ಕಣ್ಣುಗಳು ಮರಮ್ಮನ ಕಾಲುಗಳನ್ನೇ ನೋಡುತ್ತಿದ್ದುವು. ಮರಮ್ಮನ ಸ್ನಿಗ್ಧ ಗಾಂಭೀರ್ಯವೇ ನಾಗುವಿಗೆ ನಡೆದ ವಿಷಯವನ್ನು ವರ್ಣಿಸಿತು. ನಾಗು ತಲೆಯೆತ್ತಿದಳು.

"ನಿನ್ನ ವಿಷಯದಲ್ಲಿ ನನಗೆ ನಂಬಿಕೆ ಇದೆ ನಾಗು. ಆದರೂ ನಂಜಮ್ಮ ಎಂತೆಂಥ ಮಾತಾಡಿದಳು!" ಎಂದಳು ಮರಮ್ಮ.

"ಅಕ್ಕ, ಇಷ್ಟಾದ ಮೇಲೂ ನನ್ನ ಬದುಕಿರು ಅಂತೀಯಾ?" ನಾಗು ಕೇಳಿದ್ದು ಮರಮ್ಮನಿಗೂ ದುಃಖ ತಂದಿತು. ಅವಳಿಗೆ ನಾಗುವಿನ ಒಳಹೊರ

ಗೆಲ್ಲ ಗೊತ್ತು. ಹಿಂದೆ ಸೆಜ್ಜೆಗೆ ಸೆಜ್ಜೆಯೇ, 'ನಾಗುವಿನಂತಹ ಹೆಣ್ಣೇ ಈ ಸುತ್ತಿನಲ್ಲಿಲ್ಲ' ಎಂದು ಮಾಡಿದ್ದ ನಿರ್ಧಾರ ಈಗಲೂ ಮರಮ್ಮನಲ್ಲಿ ಉಳಿದುಕೊಂಡಿದೆ. ಆದರೆ ಯಾರೋ ಮಾಡಿದ ಅಪಪ್ರಚಾರದ ಯಜ್ಞಕ್ಕೆ ನಾಗು ಬಲಿಯಾಗಿ ನಿಂತಿದಾಳೆ. ಇದನ್ನು ಸಹಿಸುವುದು ಮರಮ್ಮನಿಗೆ ಸಾಧ್ಯವಾಗಲಿಲ್ಲ. ಆ ಮಾತನ್ನೇ ಕೊನೆಗಾಣಿಸಬೇಕೆಂದು,

"ನಾಗರಾಜ ಎಲ್ಲಿ, ಪಲುಕೂರಲ್ಲೇ ಉಳಿದುಕೊಂಡನೋ?" ಎಂದಳು. ನಾಗುವು ದುಃಖಿಸಲಿಲ್ಲ. ಅದಕ್ಕೆ ಬದಲು ಮುಖದಲ್ಲಿ ಒಂದು ನಗೆ ಮಿರುಗಿತು.

"ನಮ್ಮಪ್ಪನ ವಂಶ ಉದ್ಧಾರ ಮಾಡೋಕ್ಕೆ ಅವನು ಅಲ್ಲೇ ಇದಾನೆ" ಎಂದಳು ನಾಗು. ಪುನಃ ಒಂದು ನಿಮಿಷ ಮೌನವು ಅವರಿಬ್ಬರ ನಡುವೆ ನಿಂತಿತು. ಅನಂತರ ನಾಗುವೇ "ಮರಕ್ಕ, ನಾನು ಸತ್ತರೆ ನನ್ನ ಎಲ್ಲಿ ಸಮಾಧಿ ಮಾಡ್ತೀರಿ?" ಎಂದು ನಗುತ್ತಲೇ ಕೇಳಿದಳು. ಉತ್ತರ ಸಿಕ್ಕುವ ಪ್ರಶ್ನೆ ಇದಲ್ಲವೆಂದು ನಾಗುವಿಗೂ ತಿಳಿಯಿತು. ಮರಮ್ಮ ಈ ಪ್ರಶ್ನೆಗೆ ಅಸಹ್ಯಪಟ್ಟುಕೊಂಡು "ನಾನು ಹೋಗ್ತೀನಿ" ಎಂದು ಹೊರಟೇಬಿಟ್ಟಳು. ನಾಗು "ಅಕ್ಕೋ........ ನನ್ನ ಆ ಪನ್ನೇರಳೇ ಗಿಡದ ಕೆಳಕ್ಕೆ ಕಳಿಸಿಬಿಡಿ" ಎಂದು ಕೂಗಿಕೊಂಡಳು. ಮರಮ್ಮ ಅದನ್ನು ಕಿವಿಯ ಮೇಲೆ ಹಾಕಿಕೊಳ್ಳದವಳಂತೆ ಹೊರಟುಹೋದಳು.

ಮರಮ್ಮ ಹೋದ ಸ್ವಲ್ಪಹೊತ್ತಿಗೇ ಸೋಮಣ್ಣ ಮನೆಯೊಳಕ್ಕೆ ಬಂದನು. ಯಾವಾಗಲೂ ಅವನ ಮುಖದಲ್ಲಿ ಒಂದು ಯೋಚನೆ ಕಂಡದ್ದೇ ಇಲ್ಲ. ಇವತ್ತು ಏಕೋ ಬಂದವನೇ ಹಜಾರದ "ಪೆಟಾರಿ" ಯ ಮೇಲೆ ರಗ್ಗು ಹಾಸಿ ಮಲಗಿಬಿಟ್ಟನು. ಯಾವುದೋ ಯೋಚನೆಗೆ ಅವಕಾಶಬೇಕಿದ್ದುದರಿಂದ ಅವನು ನಿದ್ದೆಯನ್ನು ನಟಿಸಬೇಕಾಯಿತು.

ಬೆಳಗ್ಗೆ ಸೋಮಣ್ಣ ತೋಟದಲ್ಲಿದ್ದನು. ಹಿಂದಿನ ಊರಿನಿಂದ ಒಂದು ಕೋತಿಯ ದಂಡೇ ಸೆಜ್ಜೆಯ ತೋಟಗಳಿಗೆ ವಲಸೆ ಬಂದಿದ್ದುದರಿಂದ ಎಲ್ಲ ತೋಟಗಳಲ್ಲಿಯೂ ಯಾವಾಗಲೂ ಒಬ್ಬರಿದ್ದೇತೀರಬೇಕಾಗಿತ್ತು. ಜೀತಗಾರನನ್ನು ತಂಗಳುಣ್ಣುವುದಕ್ಕೆ ಕಳುಹಿಸಿ ಸೋಮಣ್ಣ ತಾನೇ ತೋಟದಲ್ಲಿ ನಿಂತನು. ಬೆಳಗ್ಗೆ ಹತ್ತುಗಂಟೆಯ ಹೊತ್ತಿಗೇ ಬಿಸಿಲು ಜೋರಾಗಿತ್ತು. ತೋಟದೊಳಗಿದ್ದ ಸೋಮಣ್ಣನಿಗೆ ಬಿಸಿಲಿಲ್ಲದಿದ್ದರೂ ಹೊರಗೆ ನೋಡಿದರೆ ಕಣ್ಣು ಕುಕ್ಕುತ್ತಿತ್ತು.

ತೋಟದ ಸುತ್ತಲೂ ಸೆಜ್ಜೆ ಕೆರೆಯ ಗದ್ದೆಯ ಬಯಲು. ಭತ್ತದ ಪಸಲು ಮುಗಿದು ಕಾಳು ಚೆಲ್ಲಿದ್ದ ಕಾಲ. ತೆವರುಗಳಲ್ಲಿ ಆಗಲೇ ದನಗಳು ಬಿಸಿಲು ಕಾಯಿಸುತ್ತಾ ಹುಲ್ಲು ಕುರುಕುತ್ತಿದ್ದುವು. ಅವುಗಳ ನೆರಳು ಕಪ್ಪಗೆ ನೆಲದ ಮೇಲೆ ಓಡಾಡುತ್ತಿದ್ದವು. ಕೆರೆಯಂಚಿನ ಬಳಿ ಕೊಕ್ಕರೆಗಳು ಎಮ್ಮೆಗಳ ಮೈಮೇಲಿನ "ಉಣ್ಣೆ" ಗಳಿಗಾಗಿ ಆ ಎಮ್ಮೆಗಳ ಪಕ್ಕದಲ್ಲೇ ಓಡಾಡುತ್ತಿದ್ದುವು. ಅನತಿದೂರದ ಮಾರಮ್ಮನ ದೊಡ್ಡ ಜೇಲದಮರದ ಬುಡದಲ್ಲಿ ದನಕಾಯುವ ಹುಡುಗರೆಲ್ಲ ಸೇರಿಕೊಂಡಿದ್ದರು. ಆ ಕಡೆಯಿಂದ ಬಂದ ಕಂದ ವೃತ್ತಗಳೆಲ್ಲ ಸೋಮಣ್ಣನ ಕಿವಿಯ ವರೆಗೆ ಹರಿದುಬರುತ್ತಿದ್ದುವು. ಅವುಗಳ ಪೈಕಿ ತನಗೆ ಬರುವುದನ್ನು ಕುರುಕುತ್ತಾ ಸೋಮಣ್ಣ, ಕೆಳಗೆ ಬಿದ್ದಿದ್ದ ಮಟ್ಟೆಗರಿಗಳನ್ನು ಆಯ್ದು ಒಂದು ಗುಡ್ಡೆ ಮಾಡುತ್ತಿದ್ದನು.

ಇದ್ದಕ್ಕಿದ್ದ ಹಾಗೆಯೇ ಹೆಣ್ಣೊಂದು "ಸೋಮಪ್ಪ! ಸೋಮಪ್ಪ!!" ಎಂದು ಕೂಗಿಕೊಳ್ಳುತ್ತಾ ತೋಟದೊಳಕ್ಕೆ ನುಗ್ಗಿತು. ಸೋಮಣ್ಣ ಘಾಬರಿಯಿಂದ ತಲೆಯೆತ್ತಿ ನೋಡಿದನು. ತೊರೆಗೇರಿಯ ಹುಡುಗಿ ಕೆಂಪಿ, ಅಳುತ್ತಾ ನಿಂತಿದ್ದಳು. ಸೋಮಣ್ಣ "ಏನಮ್ಮ?" ಅಂದ. ಕೆಂಪಿ ಇನ್ನೂ ಅಳುವುದನ್ನು ಹೆಚ್ಚಿಸಿದಳು. ಸೋಮಣ್ಣ ಪುನಃ "ಆದೇನ್ರಮ್ಮ ನಿಮ್ಮ ಹೊಡಬಾಳು?" ಎಂದು ಕೂಗಿದ. ಕೆಂಪಿ, ಬಿಕ್ಕುತ್ತಾ "ನೋಡೀ ಸೋಮಪ್ಪ!....ಆ ಚನ್ನಪ್ಪ ....ನನ್ನ ಏನೇನ್ನೋ ಬಯ್ದು........ನನ್ನ ಸೆರಗನ್ನೂ ಹಿಡಕಂಡು........ರಂಪ ಮಾಡ್ಬುಟ್ಟರು" ಎಂದಳು. ಸೋಮಣ್ಣ "ಯಾವ ಚನ್ನಪ್ಪನೇ?" ಎಂದು ಕೇಳಿದನು "ಅದೇ ನಿಮ್ಮ ದೊಡ್ಡಯ್ಯನಟ್ಟೆ ಚನ್ನಪ್ಪ!" ಅಂದಳು. ರಕ್ಷಣೆಗೆಂದು ಬಂದ ಹೆಣ್ಣನ್ನು ಸೋಮಣ್ಣನಂಥ ಗಂಡಸು ಬಿಟ್ಟುಕೊಡುವನೇ. ಆದರಲ್ಲೂ ತಮ್ಮ ಜನದ ಚನ್ನಪ್ಪ ತೊರೆಯ ಹುಡುಗಿಯನ್ನು ಕೀಟಲೆ ಮಾಡಿದ್ದು ಅವನಿಗೆ ಮತ್ತಷ್ಟು ಕೋಪ ಬರುವ ಹಾಗೆ ಮಾಡಿತು. "ಎಲ್ಲವ್ನೆ ಅವ್ನು?"– ಸೋಮಣ್ಣ ಗುಡುಗಿದನು. ಕೆಂಪಿ ನಡೆದಳು. ಸೋಮಣ್ಣ ಹಿಂದೆ ಹೊರಟನು.

"ಏನೋ ಚೆನ್ನ? ನಿನಗೆ ಮಾನಮರ್‍ಯಾದೆ ಏನೂ ಇಲ್ಲವಾ?" ಎಂದ ಸೋಮಣ್ಣ.

"ಮಾನಮರ್‍ಯಾದೆ ಏನು ಬಂತು ಇದರಲ್ಲಿ?" ಅಂದ ಚನ್ನಪ್ಪ.

"ಥೂ ಮೂದೇವಿ! ನಿನ್ನ ಜಾತಿ ನಿನಗೆ ಜ್ಞಾಪ್ತಿಯಿರಬೇಡವೇನೋ?"

"ಜನಕ್ಕೆ ರಕ್ತಸಂಬಂಧವೇ ಗ್ಯಾಪ್ತಿ ಇಲ್ಲವಂತೆ—ಅಂಥಾದ್ರಲ್ಲಿ ಹೆಣ್ಣೂ ಗಂಡ್ಗೂ ಜಾತಿ ಬೇರೆಯಂತೆ!"

"ಏಯ್! ಏನೋ ತಲೆಯೆಲ್ಲ ಮಾತಾಡ್ತಾ ಇದೀಯೇ? ನಡ ಮುರಿಸ್ಕೊಬೇಕೊಂತ್ಲಾ."

"ತ್ಸ್. ಸುಮ್ಮನೆ ಬಾಯಿ ಮುಚ್ಕೊಂಡು ಹೋಗ್ಬೇಕಪ್ಪ. ಇನ್ನೊಬ್ಬರ ಕಣ್ಣಿನ ಜಿಬರ್ ತಗೆಯಕ್ಕೆ ಬರಬಾರದು."

"ಎಲಾ ಮಗನೆ, ಕುಸ್ತೀಗಿಸ್ತೀ ಮಾಡಬೇಕೊಂತೀರೋಹಂಗೆ ಕಾಣಸ್ತದೆ. ಏನೋ?"

"ಲೇ ಹೋಗೋ! ಲೇ ಹೊಗೋ! ನಿನ್ನಂಗೆ ನಾವೂ ಮನೇಲಿ ಒಂದಲ್ಲ ಎರ್ಡ್ಡಿರ್ಡ್ ಸರಕು ಮಡೀಕಂಡಿದ್ದಿದ್ರೆ ನಾವ್ಯಾಕೆ ಹಿಂಗಾಡ್ತಿದ್ದೊ ಹೋಗೊ; ನಮಗೆ ಬುದ್ಧಿ ಕಲಿಸರ್ಕ್ಕೆ ಬತ್ತನೆ"

ಸೋಮಣ್ಣನಿಗೆ ಉರಿಹತ್ತಿತು. ಜಗಳ ಅಂಟಿತು. ಚನ್ನಪ್ಪ ಪೂರ್ತಿ ಏಟುತಿಂದ. ಆದರೂ ಸೋಮಣ್ಣನಿಗೆ ಅವನು ಒಂದು ದೊಡ್ಡ ಏಟು ಕೊಟ್ಟಿದ್ದನು. ಅವನ ಮಾತು ಸೋಮಣ್ಣನ ಎದೆಗೆ ಭರ್ಜಿ ಚುಚ್ಚಿದಂತೆ ಚುಚ್ಚಿತು.

ಬೆಳಗಿನ ಈ ಪ್ರಕರಣವನ್ನೇ ಸೋಮಣ್ಣನು ಯೋಚಿಸುತ್ತಾ 'ಪೆಟಾರಿ' ಯ ಮೇಲೆ ಮಲಗಿದ್ದದ್ದು. ಅವನಿಗೆ ಅತ್ತಿಗೆಯು ಖಂಡಿತ ತಾಯಿಯಂತೆಯೆ ಕಾಣುತ್ತಿದ್ದಳು. ಅವಳ ಮೇಲೆ ಇಂಥದೊಂದು ವಾತ್ಸಲ್ಯ ಅವನಿಗೆ ಅವನಣ್ಣನ ಮದುವೆಯಲ್ಲೇ ಹುಟ್ಟಿತ್ತು. ಈಗ ತನ್ನಿಂದ ತನ್ನ ಅತ್ತಿಗೆಗೆ ಈ ಕೆಟ್ಟ ಆರೋಪ ಬಂದದ್ದು ಅವನನ್ನು ಇರಿದು ತಿನ್ನುತ್ತಿತ್ತು. ಅವನು ತನ್ನ ಅತ್ತಿಗೆಯನ್ನು ಒಂದು ದಿನವೂ ಮಾತಾಡಿಸಿಲ್ಲ. ಹೆಚ್ಚು ಕಡಮೆ ಅವರು ಹೇಗಿದ್ದಾರೆಂಬುದೇ ಸೋಮಣ್ಣನಿಗೆ ಸರಿಯಾಗಿ ತಿಳಿಯದು.

ತನ್ನ ಹೆಂಡತಿ ಈಚೀಚೆಗೆ ಏಕೆ ಹೀಗಾಡುತ್ತಿರುವಳೆಂಬುದು ಸೋಮಣ್ಣನಿಗೆ ಈಗ ಅರ್ಥವಾಯಿತು. ಅತ್ತಿಗೆ ಏಕೆ ಹೋಗುವುದಿಲ್ಲವೆನ್ನುತ್ತಿದ್ದವರು ಫಲುಕೂರಿಗೆ ಹೋಗಿದ್ದರೆಂಬುದೂ ತಿಳಿಯಿತು. ಆದರೆ ಅವರೇಕೆ ಇಷ್ಟು ಬೇಗ ಹಿಂತಿರುಗಿದರೆಂಬುದು ಮಾತ್ರ ಅವನಿಗೆ ತಿಳಿಯಲಿಲ್ಲ. ಅವನ ಮನ

ಸ್ಸಿನ ಶಾಂತಿ ಕದಡಿಹೋಯಿತು. ಅವನು ತನ್ನ ಅಣ್ಣನನ್ನು ನೆನಸಿಕೊಂಡು ಅತ್ತನು. ಒಬ್ಬಿಬ್ಬರ ಮಾತುಗಳನ್ನು ನೆನಸಿಕೊಂಡು ಹಲ್ಲುಕಡಿದನು. ಅತ್ತಿಗೆ ಗಾತ ಮರುಗಿದನು. ಆದರೂ ಅವನ ಮನಸ್ಸಿನೊಳಗೆ 'ಮುಂದೇನು?' ಎಂಬ ಪ್ರಶ್ನೆ ಉಳಿದೇಕೊಂಡಿತು.

ಹತ್ತಾರು ದಿನಗಳು ಕಳೆದುವು. ಅಷ್ಟರಲ್ಲಿ ನಾಗು, ಸೋಮಣ್ಣ ಇಬ್ಬರೂ ಅರ್ಧವಾಗಿಹೋಗಿದ್ದರು. ಇದೂ ನಂಜಮ್ಮನ ಬಾಯಿಗೆ ಒತ್ತಾಸೆ ಕೊಟ್ಟಿತು. ಬರುಬರುತ್ತಾ ಮಾತುಗಳು ಅಸಾಧ್ಯವಾಯಿತು. ಒಂದು ದಿನ ಸೋಮಣ್ಣನಿಗೊಂದು ಸಮಾಧಾನ ಸಿಕ್ಕಿತು.

ಅಂದು ಸಾಯಂಕಾಲ ತೋಟದಿಂದ ಊರಿಗೆ ಬರುವಾಗ ಸೋಮಣ್ಣ, ನೆಟ್ಟಗೆ ಮನೆಗೆ ಹೋಗದೆ ಎದುರಿನ ಸುಬ್ಬಪ್ಪನ ಮನೆಗೆ ನುಗ್ಗಿದನು. ಮನೆಯಲ್ಲಿ ಯಾರೂ ಇರಲಿಲ್ಲವೆಂದು ತೋರಿತು. "ಮರಕ್ಕಾ!" ಎಂದು ಕೂಗಿದನು. ಮರಮ್ಮ ಆಗತಾನೇ ಒಲೆ ಹತ್ತಿಸುತ್ತಿದ್ದವಳು "ಯಾರು" ಎಂದು ಕೇಳಿದಳು. ಸೋಮಣ್ಣ "ನಾನು, ಸೋಮಣ್ಣ" ಎಂದನು.

ಊರಿಗೆಲ್ಲ ಒಬ್ಬನೇ ಸೋಮಣ್ಣ. ಅದರಲ್ಲೂ ಶಿವಪ್ಪನವರ ಮನೆ ಸೋಮಣ್ಣ! ಮರಮ್ಮ ಆಶ್ಚರ್ಯದಿಂದ ಹೊರಕ್ಕೆ ಓಡಿಬಂದಳು. ಸೋಮಣ್ಣ ಹಾಗೆಲ್ಲ ಒಬ್ಬರ ಮನೆ ಬಾಗಿಲಿಗೆ ಹೋದದ್ದೇ ಇಲ್ಲ. ಮರಮ್ಮನನ್ನು ಕಂಡು "ಒಂದಷ್ಟು ಬೆಂಕಿ ತತ್ತಕ್ಕ!" ಎಂದನು. ಮರಮ್ಮ ತಂದುಕೊಟ್ಟಳು. ಸೋಮಣ್ಣ ಬೀಡಿ ಹಚ್ಚಿದನು. ಹೋಗುವುದರಲ್ಲಿದ್ದ ಮರಮ್ಮನನ್ನು ಕುರಿತು ಸೋಮಣ್ಣ, "ಒಂತ್ನೋಸ್ಲಪ್ಪ ಮಾತದೆ ಅಕ್ಕ. ಅರಗಳಿಗೆ ನಿಂತ್ಕೊ" ಎಂದನು. ಸೋಮಣ್ಣನನ್ನು ಕಂಡರೆ ಎಲ್ಲರಿಗೂ ಒಂದು ತರಹ ಆದರವೇ. ಆ ಆದರವೇ ಮರಮ್ಮನನ್ನು ಕಟ್ಟಿ ನಿಲ್ಲಿಸಿತು.

"ಅಕ್ಕಾ, ನನ್ನಾ ನಿನ್ನ ನಿಜವಾದ ತಮ್ಮ ಅಂತ ತಿಳ್ಕಂಡು ನನಗೊಂದು ಉಪಕಾರ ಮಾಡಿಕೊಡು." ಎಂದು ಸೋಮಣ್ಣ ಕೇಳಿದನು.

ಮರಮ್ಮ ವಿಷಯ ಗಹನವಾದದ್ದೆಂದು ತಿಳಿದುಕೊಂಡು ಮೌನ ದಿಂದಲೇ ಸಮ್ಮತಿಸಿದಳು.

"ಗುಟ್ಟಾಗಿದ್ರೆ ಇವೆಲ್ಲ ಬಗೆಹರಿಯೋ ವಿಷಯಗಳಲ್ಲ. ನನ್ನ ನೀನು ನಂಬ್ತೀಯೋ ಇಲ್ಲವೋ?"

" ಹೇಳಿ........ "

" ಊರಿಗೆ ಊರೆ ನಮ್ಮನೆ ಮಾತಾಡ್ತಾ ಇರೋದು ನಿನಗೆ ಗೊತ್ತಿರ ಬಹುದು, ಅಲ್ವಾಕ್ಕ ? "

ಮರವ್ಮ ಮುಖ ತಗ್ಗಿಸಿದಳು.

" ನನ್ನ ಹೊಟ್ಟೆ ಉರಿ ಅಷ್ಟಿದ್ಯಕ್ಕ. ನಿನ್ನೇ ನಂಬಿಕೊಂಡು ಬಂದಿದೀನಿ. ಅದಕ್ಕೇ ಈ ಮಾತೆಲ್ಲ ಆಡ್ತಾ ಇದೀನಿ. ಈಗ ನೀ ಮಾಡೋ ಉಪಕಾದಿಂದಲೇ ನಮ್ಮ ಸಂಸಾರ ಉಳೀಬೇಕು. ಮಾಡ್ಕೊಡ್ತೀನೀ ಅಂದ್ರೆ ಹೇಳ್ತೀನಿ "

" ಏನ್ಮಹಾ ಇದ್ದೀತು. ಆಗಲಿ ಹೇಳಿ "

" ನಮ್ಮ ಅತ್ಗ್ಯಮನ್ನ ಹ್ಯಾಗಾದರೂ ಮಾಡಿ ಅವರ ಊರಿಗೆ ಕಳಿಸೋ ಏರ್ಪಾಡು ಮಾಡಕ್ಕ. ಇದರಿಂದ ನಿನಗೆ, ಇಬ್ಬರು ತಪ್ಪಿಲ್ಲದವರ ಶಿಕ್ಷೆ ತಪ್ಪಿ ಸಿದ ಪುಣ್ಯ ಬರುತ್ತದೆ. ! "

" ಅವಳ್ಯಾಕೆ ಹೋಗಿದ್ದೋಳು ಪುನಃ ಹಿಂದಕ್ಕೆ ಬಂದಳು " ?

" ನನ್ಗೂ ಅದೇ ಯೋಚ್ನೆ. ಏನಾದರೂ ಮಾಡಿ ಒಪ್ಪಿಸಕ್ಕ. ನಿನ್ನ ದಮ್ಮಯ್ಯ ! "

ಮರವ್ಮ ನಾಗುವನ್ನು ಪಲುಕೂರಿಗೆ ಹೋಗುವಂತೆ ಒತ್ತಾಯ ಪಡಿಸು ವುದಕ್ಕೆ ಒಪ್ಪಿಕೊಂಡಳು. ಸೋಮಣ್ಣನಿಗೆ ಸಮಾಧಾನವಾಯಿತು. ಅವನು ಎದ್ದು ಹೊರಟು ಬಂದನು.

ಸೋಮಣ್ಣನ ಮಾತಿಗೋಸ್ಕರ ಮತ್ತೊಂದು ಬಾರಿ ಮರವ್ಮ ಶಿವಪ್ಪ ನವರ ಮನೆಯೊಳಕ್ಕೆ ಕಾಲುಹಾಕಿದಳು. ನಾಗು ಹಿಂದಲಟ್ಟೆಯಲ್ಲಿ ಜೋಳ ಬೀಸುತ್ತಿದ್ದಳು. ಮರವ್ಮ, ಮಾತಾಡದೇ ಹೋಗಿ ನಾಗುವಿನ ಜೊತೆಯಲ್ಲಿ ಬೀಸಲು ಕುಳಿತಳು. ಎರಡು ಮೂರು ಹಿಡಿ ಜೋಳವನ್ನು ಇಬ್ಬರೂ ಮಾತ ನಾಡದೇ ಬೀಸಿದರು. ಪದ್ಧತಿಯಂತೆ ಮರವ್ಮ ಹಾಡಲು ಪ್ರಯತ್ನ ಪಡಲಿಲ್ಲ ನಾಗುವಿಗೂ ಅದರಲ್ಲಿ ಆಸಕ್ತಿ ಇರಲಿಲ್ಲ. ಕಲ್ಲು ಮಾತ್ರ ಜೋಳದೊಡನೆ ಮೌನವನ್ನೂ ಬೀಸಿ ಪುಡಿಪುಡಿ ಮಾಡುತ್ತಿತ್ತು.

" ಇನ್ನೂ ಎಷ್ಟದೇ ಜೋಳ ? " ಮರವ್ಮ ಮಾತನ್ನು ಪ್ರಾರಂಭಿಸಿ ದಳು.

" ಬೇಜಾರಾಗೋ ವರ್ಗೂ " ನಾಗುವಿನ ಉತ್ತರ.

" ನಾಗು, ನೀನು ಬಹಳ ಬದಲಾಯಿಸಿಬಿಟ್ಟೆ "

" ಬಾಳಿನಿಂದ಼್ಲೇ ಬದಲಾವಣೆಯಾಗೋ ಕಾಲ ಅಲ್ವೇ ? "

" ನಿನ್ನ ಮನಸ್ಸಿನಲ್ಲಿ ಏನೋ ಒಂದು ಮರ್ಮ ಇದೆ. ಅದನ್ನು ನನ್ನ ಕೂಡ ಆದ್ರೂ ಹೇಳು. "

" ಸುಮ್ನಿರಕ್ಕ ಯಾಕೆ ಪ್ರಾಣ ಹಿಂಡ್ತಿ "

" ನಾಗು, ಇಲ್ಲಿಲ್ಲಾ ನಿನಗೆ ಕಷ್ಟವಾದ ಮೇಲೆ ನೀ ಯಾಕೆ ಪಲು ಕೂರಿಗೆ ಹೊಂಟೋಗ್ಬಾರದ್ದು "

" ನನ್ನಾ ಈಗ ಆ ಊರಿಗೆ ಕಳಿಸೋಕ್ಕೆ ಬಂದಿದೀಯೇನು ? "

" ಹ್ಞೂ "

" ಯಾಕೆ ? ನಾನಿಲ್ಲಿದ್ದರೆ ನಿನಗೇನು ಕಷ್ಟ. ಅಥವಾ ಜನಗಳಿಗಾದರೂ ಏನು ಕಷ್ಟ ? "

" ನನ್ನ ಮನಸ್ಸು ಸರಿಯಾಗೇ ಇದೆ ನಾಗು. ಜನ ಮೆಚ್ಚಿಸೋಕ್ಕಾದರೂ............ "

" ನಾನು ಮನುಷ್ಯಳು. ಮನುಷ್ಯಳ ಕೈಲಾಗೋ ವಿಷಯ ಹೇಳು "

" ಅಪವಾದದ ವಿಷಯಾವ್ಮಾ ನಾನು ಹೇಳ್ತೀರೋದು ! "

" ನನ್ಗೆಲ್ಲಾ ಗೊತ್ತು ಕಣಕ್ಕ. ನೀನು ನನ್ನ ಸುಖಕ್ಕೋಸ್ಕರವೇ ಹೇಳ್ತೀಯೆ ನಿಜ. ನಿನಗೆ ಸಜ್ಜೆ ವಿಷಯ ಮಾತ್ರ ಗೊತ್ತು. ನೀನು, ನನ್ನ ಕಳಿಸಬೇಕೂಂತ ಇರೋ ಊರಿನ ವಿಷಯ ನಿನಗೆ ತಿಳೀದು "

" ಅಲ್ಲಿಗೆ ಹೋದರೆ ಕತ್ತು ಹಿಡಿದು ಆಚೆಗೆ ತಳ್ತಾರೇನು " "

" ಕತ್ತು ಹಿಡಿದು ತಳ್ಳೋಲ್ಲ. ನರಕಕ್ಕೆ ತಳ್ತಾರೆ. "

" ಹಾಗಂದ್ರೇನೆ ? "

" ನಾನು ವರ್ಣಿಸೋಕ್ಕಾಗಲ್ಲ. ಅದೊಂದು ಪ್ರಶ್ನೆಗೆ ನಿನಗೆ ಉತ್ತರ ಸಿಗೊಲ್ಲ ? "

" ನಿಜ ಹೇಳ್ತೀನಿ ಕೇಳು. ಸೋಮಣ್ಣನೇ ನಮ್ಮ ಮನೆಗೆ ಬಂದು ಕಣ್ಣಲ್ಲಿ ನೀರುತಂದುಕೊಂಡು, ನನ್ನ ಈ ಕೆಲಸಕ್ಕೆ ನೇಮಿಸಿದರು."

" ಯಾರು, ಸೋಮಪ್ಪನೇ ! "

" ಹ್ಞೂ."

"ಮರಳ್ಳ, ಅವರು ಗಂಡಸರು. ಈ ವಿಷಯದಲ್ಲಿ ಹೆಂಗಸರಿಗೆ ತಾನೇ ಅವಮಾನ ಜಾಸ್ತಿ? ಅವರು ನಿಶ್ಚಿಂತೆಯಾಗಿದ್ದುಬಿಡ್ಲಿ. ನಾನು ಮಾತ್ರ ನಿಸ್ಕಾಣೆಗೂ, ಏನಾದ್ರೂ ಈ ಮನೆ ಬಿಟ್ಟು ಅಲ್ಲಿಗೆ ಹೋಗೊಲ್ಲ."

"ಅದ್ಯಾಕೆ ಹೇಳೇ—ನನ್ನ ಹತ್ತಿರ ಹೇಳು."

"ಅಯ್ಯೋ! ಯಾಕಕ್ಕ ಇಷ್ಟು ಹಟಮಾಡ್ತೀಯೆ? ಆ ಪ್ರಶ್ನೆ ಹಾಕ ಬೇಡ. ನಾನದಕ್ಕೆ ಉತ್ತರ ಕೊಡೊಲ್ಲ—ಕೊಡೊಲ್ಲ."

ಕಲ್ಲು ನಿಂತಿತು. ನಾಗು ಘಟ್ಟಿಯಾಗಿ ಅಳತೊಡಗಿದಳು. ಮರಮ್ಮ ನಿಗೆ ದಿಕ್ಕೇ ತೋರಲಿಲ್ಲ. ಕಲ್ಲಿನ ಮೇಲಿಟ್ಟುಕೊಂಡಿದ್ದ ನಾಗುವಿನ ತಲೆಯನ್ನು ಮೆಲ್ಲನೆ ಸವರಿದಳು. ತಟ್ಟನೆ ನಾಗು ತನ್ನ ತಲೆಯನ್ನು ಮರಮ್ಮನ ತೊಡೆಯ ಮೇಲಿಟ್ಟುಕೊಂಡಳು. ಮರಮ್ಮ ನಾಗುವನ್ನು ಎತ್ತಿ ಮಕ್ಕಳನ್ನು ಮುದ್ದಿಸು ವಂತೆ ಮುದ್ದಿಸಿ ಸಮಾಧಾನಪಡಿಸಿದಳು. ಮರಮ್ಮ ಮುಂದಕ್ಕೆ ಮಾತನಾಡ ಲಾಗಲಿಲ್ಲ.

ಸೋಮಣ್ಣನಿಗೆ ಈ ಸಂವಾದಗಳೆಲ್ಲವನ್ನೂ ವಿವರವಾಗಿ ಮರಮ್ಮ ತಿಳಿಸಿದಳು. ಸೋಮಣ್ಣ ನಿಟ್ಟುಸಿರಿಟ್ಟ. ತರಗೆಲೆಯ ಗುಡ್ಡೆಯಂತಿದ್ದ ಅವನ ಸಮಾಧಾನವು ಮರಮ್ಮನಿಂದ ತಿಳಿದ ನಾಗುವಿನ ನಿರ್ಧಾರವೆಂಬ ಸುಳಿಗಾಳಿಗೆ ಸಿಕ್ಕಿತು. ಅತ್ತಿಗೆಗೆ ಅವರ ತೌರಿನಲ್ಲಿ ಏನು ತೊಂದರೆ ಎಂಬು ದನ್ನು ಅವನು ಊಹಿಸಲಾರದೇ ಹೋದ. ಅತ್ತಿಗೆ ತನ್ನೂರಿಗೆ ಹೋಗಿದ್ದು ಏಕಾಏಕಿ ಪುನಃ ಈ ಅಪವಾದದ ಅಗ್ನಿಕುಂಡಕ್ಕೆ ಹಿಂತಿರುಗಬೇಕಿದ್ದರೆ ಅದ ರಲ್ಲೇನೋ ಗುಟ್ಟಿರಲೇಬೇಕೆಂಬುದು, ಮರಮ್ಮ ಈ ಮಾತುಗಳನ್ನಾಡಿ ಮುಗಿ ಸಿದ ಮೇಲೆ ಹೊಳೆಯಿತು.

ಮನೆ ಎಂಬುದನ್ನು ಮನುಷ್ಯ ಆದಿಯಲ್ಲಿ ಮಾಡಿಕೊಂಡದ್ದು ಈ ಹೆಂಗ ಸರಿಗೆಂದೇ ಇರಬೇಕು. ನಾಲ್ಕು ಗೋಡೆಗಳ ಮಧ್ಯದಲ್ಲೇ ಆ ಜೀವಗಳ ಹೊತ್ತೆಲ್ಲ ಕಳೆಯಬೇಕು. ಗಂಡಸಿಗೇನು? ಎಲ್ಲಿ ತಿರುಗಿಕೊಂಡಿದ್ದರೂ ಆಯಿತು. ಈಗ ತನ್ನ ಅತ್ತಿಗೆ, ಏತಕ್ಕೋ ಏನೋ, ಪಲು ಕೂರಿಗೆ ಹೋಗುವುದಿಲ್ಲವೆನ್ನುತ್ತಿದ್ದಾರೆ. ಸೆಜ್ಜೆಯಲ್ಲಿ ಈ ಹಗರಣ. ಅವರಿಗೋಸ್ಕ ರವೇ ಮೈಸೂರಿನಲ್ಲೊಂದು ಸಂಸಾರ ಹೂಡುವ ವಿಷಯ ಅಸಾಧ್ಯವೇ. ಈ ಕಷ್ಟಗಳ ಹಿಡಿತದಿಂದ ಅವರನ್ನು ಹೊರತರುವುದು ಹೇಗೆ? ಸೋಮಣ್ಣ

ಒಂದು ಗಂಟೆಯ ಕಾಲ ಯೋಚಿಸಿದನು. ಅವನ ಮನಸ್ಸಿನ ಮೇಲೆ ಪುನಃ ಪುನಃ ಅದೇ ಮಾತುಗಳೇ ಬಂದು ಮುತ್ತಿಗೆ ಹಾಕುತ್ತಿದ್ದುವು.

ಇನ್ನು ನಿಧಾನಿಸಿದರೆ ತನ್ನಿಂದಲೇ ತನ್ನ ವಂಶಕ್ಕೆ ಕಳಂಕ ಬರುವುದೆಂಬ ಹೆದರಿಕೆ ಅವನಲ್ಲಿ ಹುಟ್ಟಿಹೋಯಿತು. ಅವನ ತಲೆಯ ಮೇಲೆ ಅವನೆರಡು ಕೈಗಳೂ ಒರಗಿದ್ದುವು. ಇಷ್ಟಾದರೂ "ಏನುಮಾಡುವುದು? ದೇವರ ಸಮಾನವಾದ ನನ್ನ ಅತ್ತಿಗೆಯನ್ನು ಉಳಿಸುವುದು ಹೇಗೆ?" ಎಂಬ ಪ್ರಶ್ನೆಗಳು ಮಾತ್ರ ಬಗೆಹರಿಯಲಿಲ್ಲ. ಸೋಮಣ್ಣನು ಸ್ತಬ್ಧನಾಗಿ ಕುಳಿತಿರುವುದನ್ನು ಮರಮ್ಮ ತನ್ನ ಮನೆಗೆಲಸಗಳ ಓಡಾಟದ ಮಧ್ಯದಲ್ಲಿಯೇ ನೋಡುತ್ತಿದ್ದಳು.

ಸೋಮಣ್ಣ ಗಟ್ಟಿಯಾಗಿ 'ಅದೇ ಸರಿ' ಎಂದನು.

ಅದು ಮರಮ್ಮನಿಗೆ ಕೇಳಿಸುವಷ್ಟು ಮಾತ್ರ ಗಟ್ಟಿಯಾಗಿತ್ತು. ಸೋಮಣ್ಣ, ಮರಮ್ಮನ ಮನೆಯನ್ನು ಬಿಟ್ಟನು. ತನ್ನ ಮನೆಯೊಳಕ್ಕೆ ನಡೆದನು. ಅವನು ಎಲ್ಲೆಲ್ಲಿಗೆ ಹೋದರೂ ಯಾವುದೋ ಒಂದು ಶಬ್ದ 'ಅದೇ ಸರಿ' 'ಅದೇ ಸರಿ' ಎನ್ನುತ್ತಿತ್ತು.

ಸೋಮಣ್ಣ ಊಟ ಮುಗಿಸಿಕೊಂಡು ತನ್ನ ಕೋಣೆಗೆ ಹೋಗಿ ತನ್ನ ಎಡ ತೋಳನ್ನು ಕಣ್ಣುಗಳ ಮೇಲಿಟ್ಟು ಮಲಗಿದನು. ಎಷ್ಟು ಹೊತ್ತು ಹಾಗೆ ಮಲಗಿದ್ದನೋ ಅದು ಅವನಿಗೆ ತಿಳಿಯದು. ಪುನಃ ಕಿವಿಗೆ 'ಅದೇ ಸರಿ' ಎಂಬ ಶಬ್ದ ಬಿದ್ದ ಮೇಲೆಯೇ ಅವನಿಗೆ ಎಚ್ಚರ. ಯಾರು ಹಾಗೆಂದವರೆಂದು ನೋಡಲು ತೋಳು ತೆಗೆದು ಕಣ್ಣುಬಿಟ್ಟನು. ನಂಜಮ್ಮ ನಿಂತಿದ್ದಳು.

ಸೋಮಣ್ಣ, "ಏನು–ಅದೇ ಸರಿ"? ಎಂದನು.

"ಅದೇ ನೀವು ಗುಟ್ಟಾಗಿ ಬಂದು ಮಲಗಿರೋದು."

"ಅದ್ರಲ್ಲೇನು"

"ಇಷ್ಟು ಅಪರೂಪ ಆಗ್ಬುಟ್ರಲ್ಲ ರಾತ್ರಿ ಹೊತ್ತು–ಅದಕ್ಕೆ"

"ಏನೇ ನೀ ಹೇಳೋದು?"

"ನಾ ಹೇಳೋದು ಸುಳ್ಳೆ? ಜ್ಞಾಪಿಸಿಕೊಳ್ಳೀ—ಈ ಕೊಟಡೀ ಹೊಸಿಲು ನೀವು ಮೆಟ್ಟಿ ಎಷ್ಟು ದಿನವಾಯಿತು. ನೀವೇ ಹೇಳಿ."

"ಏನು ಮಹಾ, ಆರುದಿನವಾಯ್ತು."

"ಸಾಲದೆ? ಹ್ಞೂ—ಎಲ್ಲಾ ಗಂಡಸರಿಷ್ಟತಾನೆ?"

"ಹೋಗಲಿ. ಎಲಡಕೆ ತಕೊಂಡು ಬಾ ಹೋಗು!"

"ಪರಮೇಶ್ವರ! ಈ ಹುಚ್ಚು ಯಾವತ್ನಿಂದ?"

"ಇದೊಂದೇ ದಿನ ತಕೊಂಡು ಬಾರೆ."

ನಂಜಮ್ಮ "ಎಲಡಕೆ" ತಂದಳು. ಗಂಡಹೆಂಡಿರಿಬ್ಬರೂ ಸವಿದರು. ಮತ್ತೊಂದು ವಿಶೇಷ ಸಂಗತಿ ಎಂದರೆ ಸೋಮಣ್ಣ ನಕ್ಕಿದ್ದು. ಅಂದಿನ ರಾತ್ರಿ ಪೂರ್ತ ಸೋಮಣ್ಣನಿಗೆ ಸಂತೋಷವೇ ಇತ್ತು. ಅವನಿಗೆ ನಿದ್ದೆ ಬಂದ ಬೆಳಗಿನ ಝಾವದಲ್ಲಿಯೂ ಅದೇ ಪದಗಳನ್ನು ಹೇಳಿಕೊಂಡನು. "ಅದೇ ಸರಿ."

ಸೋಮಣ್ಣ ತನ್ನ ಮನಸ್ಸಿಗೆ ಸರಿತೋರಿದುದನ್ನು ಮಾಡಿಯೇ ಬಿಟ್ಟನು. ತನ್ನ ಅಣ್ಣ, ಅತ್ತಿಗೆಯರ ಮಾನ ಕಾಯಲು ಅವನು ತನ್ನನ್ನೇ ತಾನು ಮರೆಮಾಡಿಕೊಂಡನು. ಸೋಮಣ್ಣ ಪತ್ತೆಯೇ ಇಲ್ಲ. ಶಿವಪ್ಪನವರು ಊರಿನವರ ಕೈಕಾಲುಗಳನ್ನೆಲ್ಲಾ ಕಟ್ಟಿ ದಿಕ್ಕುದಿಕ್ಕಿಗೆ ಜನರನ್ನು ಅಟ್ಟಿದರು.

ಬೇಕೆಂದು ತಲೆಮರಿಸಿಕೊಂಡವರನ್ನು ಹಿಡಿಯುವ ಸತ್ವ ಯಾರಿಗಿದೆ. ಸೋಮಣ್ಣ ಹೊರಟೇಹೋದನು.

ನಾಗುವಿಗೆ ಈ ವಿಷಯ ತಿಳಿಯಿತು. ಅವಳು ದೇವರ ಪಟವೊಂದನ್ನು ನೋಡಿದಳು ಅಷ್ಟೆ. ಸೋಮಣ್ಣ ಊರುಬಿಟ್ಟು ಹೋದದ್ದು ನಾಗುವಿಗೆ ಎಷ್ಟರಮಟ್ಟಿಗೆ ಉಪಕಾರಮಾಡುತ್ತದೋ ಇನ್ನುಮೇಲೆ ನೋಡಬೇಕು.

ತಾನು ಮನೆ ಬಿಟ್ಟುಹೋದರೆ ನಾಗುವಿನ ಮೇಲಿನ ಅಪವಾದ ತನ್ನಂತೆಯೇ ತಲೆಮರೆಸಿಹೋಗುವುದೆಂದು ಸೋಮಣ್ಣ ನಂಬಿದ. ಆದರೆ ಇದ್ದ ಇಬ್ಬರೇ ಮಕ್ಕಳಲ್ಲಿ ಒಬ್ಬನನ್ನು ಈಗಾಗಲೇ ಕಳೆದುಕೊಂಡು ದುಃಖಿಸುತ್ತಿದ್ದ ತಂದೆಯ ಮನಸ್ಸು ತಾನು ಈ ಕೆಲಸ ಮಾಡುವುದರಿಂದ ಹೇಗಾಗಬಹುದೆಂಬುದನ್ನು ಮಾತ್ರ ಅವನು ಯೋಚಿಸಲಿಲ್ಲ. ನಂಜಮ್ಮನ ವಿಷಯವೇನೋ ಸರಿ. ಅವಳಿಗೂ ಬುದ್ಧಿ ಬರಬೇಕಾದದ್ದೆ. ಆದರೆ ಅವಳು ಇದನ್ನೂ ತನ್ನ ಬಾಯಿ ಹೆಚ್ಚುವುದಕ್ಕೆ ಉಪಯೋಗಿಸಿಕೊಂಡರೆ ಏನಾಗುವುದೆಂಬುದನ್ನು ಅವನು ಆಲೋಚಿಸಲಿಲ್ಲ.

ಅವನು ನಾಗುವನ್ನು ಉಳಿಸುವೆನೆಂದು ಮಾಡಿದ ಕೆಲಸ ಅವಳ ಪ್ರಾಣ ತೆಗೆಯುವುದಕ್ಕೆ ಹವಣಿಸಿತು. ಇನ್ನೊಬ್ಬರ ಸಂಶಯಕ್ಕೆಂದು ಅವನು ಹಾಕಿದ ವಿಷ ಅವನ ಅತ್ತಿಗೆಯೇ ತಿನ್ನಬೇಕಾಯಿತು.

೧೬

ಸೂರ್ಯ ಮುಳುಗುತ್ತಿದ್ದ ಹಾಗೆಯೇ ನಾಗು, ಮುಖ ತೊಳೆದು ವಿಭೂತಿ ಯಿಟ್ಟು, ಬಿಲ್ವಪತ್ರೆ ಹೂಗಳನ್ನು ಅಣಿಮಾಡಿಕೊಂಡು ಶಿವಪೂಜೆಗೆ ಕುಳಿತು ಕೊಳ್ಳುತ್ತಿದ್ದಳು. ಎಡಗೈ ಮಧ್ಯೆ ಲಿಂಗವು ಹೂಗಳನ್ನು ಹೊತ್ತು ಗಂಭೀರ ವಾಗಿ ಕಾಣುವುದು. ನಾಗುವಿಗೆ ಕಣ್ಣುಗಳೊಂದೇ ಸ್ವಾಧೀನದಲ್ಲಿರುವ ಅಂಗ. ಆ ನಾಲ್ಕಾರು ನಿಮಿಷಗಳೇ ನಾಗುವಿನ ಜೀವನದ ಸಮಾಧಾನ. ಅವಳ ಕಣ್ಣು ಗಳು ನವುರಾಗಿ ಸುಳಿದಾಡುತ್ತಿರುವ ಧೂಪದ ಧೂಮದ ಮರೆಯಲ್ಲಿ ಅಂಗೈ ಮೇಲಿನ ಹೂಗಳ ಮಧ್ಯೆ ವಿರಾಜಿಸುವ ಆ ಪರಮೇಶ್ವರನನ್ನೇ ಎವೆ ಚಲಿಸದೆ ದಿಟ್ಟಿಸಿರುತ್ತಿದ್ದುವು.

ನಾಗು ಕೇವಲ ಒಬ್ಬ ಹೆಂಗಸು. ಒಮ್ಮೊಮ್ಮೆ ಆ ಅಧ್ಯಾತ್ಮಿಕ ಸನ್ನಿವೇಶ ದಲ್ಲೂ ಅವಳ ಕಣ್ಣುಗಳು ನೀರಾಡಿಸಿಬಿಡುತ್ತಿದ್ದುವು. ಆಗ ಹತ್ತಿರದಲ್ಲಿ ಸುಳಿ ದಾಡುವ ಎಲ್ಲ ವ್ಯಕ್ತಿಗಳೂ ಅದನ್ನು ಬೂಟಾಟಿಕೆ ಎಂದು ತಿಳಿದುಕೊಳ್ಳುತ್ತಿ ದ್ದರು. ಅಂಥವರ ಪೈಕಿ ನಂಜಮ್ಮನಂತೂ ಬಾಯಿಗೆ ಬಂದಂತೆ ಮಾತುಗಳ ನ್ನಾಡಿಬಿಡುತ್ತಿದ್ದಳು. ನಾಗು ಶಿವಪೂಜೆಗೆ ಅಣಿಮಾಡಿಕೊಳ್ಳುತ್ತಿ ದ್ದಂತೆಯೇ ಸಂದರ್ಭ ಕಲ್ಪಿಸಿಕೊಂಡು 'ಮಾಡೋದು ಅನಾಚಾರ ಮನೇ ಮುಂದೆ ನಂದೀ ಕಂಬ' ಎಂದುಬಿಡುತ್ತಿದ್ದಳು. ನಾಗುವಿಗೆ ಇದು ಕೇಳಿಸು ತ್ತಿತ್ತು. ಆದರೆ ಅದು ಮನಸ್ಸಿನವರೆಗೆ ತಲುಪುತ್ತಿರಲಿಲ್ಲ.

ಒಂದು ದಿನ ನಾಗು ನಂಜಮ್ಮನನ್ನು ಬೇಡಿಕೊಂಡಳು. "ನಂಜು, ನನ್ನ ಮ್ಮನ ಹೆಸರೂ ನಂಜಮ್ಮನಂತೆ. ಈಗಲೂ ನನ್ನಾ ನಿನ್ನ ಮಗಳೂ ಅಂತ ತಿಳ್ಕೊಂಡು ಇನ್ನೊಂದು ಸ್ವಲ್ಪ ದಿನ ನನ್ನಾ ಸಾಕ್ಕೊಂಡಿರಮ್ಮ."

"ಇನ್ನೊಬ್ಬರ ಬಾಳು ಮುರಿದು ತಾವು ಬದುಕಬೇಕು ಅನ್ನೋರ ನಯ ಇದು ನಾಗಕ್ಕ."

ನಾಗು ಕೊಂಚ ಕೋಪದಿಂದಲೇ ಅಂದಳು.

"ನಂಜು, ನನ್ನ ಮಾತಿನಲ್ಲಿಲ್ಲ ನಿನಗೆ ಮುಳ್ಳೇ ಇದೆ ಅಲ್ವೆ? ಕಿವಿಬಿಟ್ಟು ಕೇಳಿಕೊ. ನಿನಗೆ ಈ ಮನೇಲಿ ಎಷ್ಟು ಹಕ್ಕೊ ನನಗೂ ಅಷ್ಟೇ ಇದೆ. ಇನ್ನು ಮೇಲೆ ನನ್ನ ಮಾತು ನಿನಗೆ ಬೇಡ."

"ಹಕ್ಕು! ಈ ಹಕ್ಕು ಪಡಕೊಳ್ಳೋ ಹಕ್ಕುದಾರ್ನ ಮನೇಬಿಟ್ಟು ಓಡಿಸ ಬೇಕಾಗಿತ್ತೋ ಏನೋ?"

"ಮುಚ್ಚು ಬಾಯಿ. ಎಲ್ಲರ ಮುನಸ್ಸಿಗೂ ನಾನೇ ಕಾರಣ ಅಲ್ವೆ? ಊರು ಬಿಟ್ಟು ಹೋಗೋರ್ಗೆಲ್ಲ ನಾನೇ ಹೊಣೆ! ನೀವೆಲ್ಲ ಮಹಾ ಗರತಿಯರು."

ನಾಗುವು ತನ್ನ ಬಾಯಿಯಿಂದ ಈ ಮಾತು ಬಂದೀತೆಂದು ನಂಬೇ ಇರ ಲಿಲ್ಲ. ನಂಜು ರಂಪ ಹೂಡಿದಳು. ತಲೆ ಚಚ್ಚಿಕೊಂಡಳು. "ಅಯ್ಯೋ ದೇವರೆ, ನಮ್ಮಂಥೋರ್ನ ಈ ಭೂಮಿ ಮೇಲೆ ಯಾಕೆ ಹೆತ್ತೆ? ಇವರ ಹಾಗೇ ನಾವೂ ಹೆಂಗಸರಲ್ಲವೇ? ಇವರ ಮಕ್ಕಳು ಸಾಯಬಾರದೆ? ನಮ್ಮ ಸಂಸಾರ ಹಾಳು ಮಾಡಿದ ಇವರ ರಕ್ತ ಇಂಗಿಹೋಗಬಾರದೇ?" ಎಂದು ನಂಜಮ್ಮ ಹಾಡಿ ಕೊಂಡು ಅಳಲಾರಂಭಿಸಿದಳು.

ನಾಗುವು ಕೋಪಿಸಿಕೊಂಡು ಅಂದ ಮಾತಿನಿಂದೀಚೆಗೆ ಈ ಇಬ್ಬರು 'ವಾರಗಿತ್ತಿ'ಯರ ಸಂವಾದಗಳನ್ನು ಕೇಳಿದ ಮಾವ ಶಿವಪ್ಪನವರು ಯುದ್ಧ ರಂಗಕ್ಕೆ ಬಂದರು. ಪ್ರತಿದಿನವೂ ಇವರಿಬ್ಬರ ವೈಮನಸ್ಸಿನ ಕಹಿ ಉಂಡ ಎಲ್ಲ ರಿಗೂ ಬೇಸರವಾಗಿತ್ತು.

"ನಾಗಮ್ಮ, ಪ್ರತಿನಿತ್ಯವೂ ಮನೇಲಿದೇ ರಗಳೆಯಾದರೆ ಈ ಕಷ್ಟಕ್ಕೆ ಇದು ಮನೆ ಅಂತ ಯಾಕಿರಬೇಕು. ನಿಮ್ಮ ನಿಮ್ಮ ಇಷ್ಟಬಂದ ಹಾಗೆ ನೀವು ನೀವು ಜಗಳಕಾಯೋ ಹಾಗಿದ್ದರೆ ನಾವೂ ಮನೇ ಬಿಟ್ಟು ಹೊರಗೆ ಹೊರಟು ಹೋಗೋಣೇನು? ನಾವು ಯಾಕೆ ಯಜಮಾನರು ಅನ್ನಿಸಿಕೊಂಡಿರಬೇಕು ಹೇಳು!"

ನಾಗಮ್ಮ ಮಾವನವರೆದುರಿಗೆ ಇಂದೇ ಮಾತನಾಡಿದ್ದು "ಮಾವಯ್ಯ, ನನ್ನ ಹೆಣ ನೋಡಿದ ಹೊರತು ನನ್ನೋರು ಒಬ್ಬರಿಗೂ ಸಮಾಧಾನವೇ ಇಲ್ಲ ಅಂತ ಕಾಣ್ತದೆ."

" ನೀನೂ ಇಷ್ಟು ಒರಟು ಅನ್ನೋದು ಇವತ್ತು ಗೊತ್ತಾಯಿತು. ಮೆತ್ತಗಿದ್ದೇ ಇಬ್ಬರನ್ನ ಮುಗಿಸಿದೆ. ಇನ್ನು ಈ ಒರಟಾಟದಲ್ಲಿ ಎಷ್ಟು ಜನನ್ನ ತಿನ್ನಬೇಕೊಂತಿಧೀಯೊ ! "

ಶಿವಪ್ಪನವರೂ ನಂಜಮ್ಮನ ಹಾಗೇ ಮಾತನಾಡಿದರು. ನಾಗುವಿಗೆ ಮೈ ಜುಮ್ಮೆಂದಿತು. ತಲೆ ಕಿತ್ತುಕೊಳ್ಳಲೇ ಎನ್ನಿಸಿತು. ಅವಳ ಮನಸ್ಸಿಗೆ ಗಂಡಸರೆಲ್ಲ ಚಂದಣ್ಣನ ಹಾಗೂ, ಹೆಂಗಸರೆಲ್ಲ ನಂಜಮ್ಮನ ಹಾಗೂ ತೋರಿ ಬಂದರು. ಕಣ್ಣಿನಲ್ಲಿ ನೀರಿಗೆ ಮಿತಿಯೇ ಇಲ್ಲ. ಗದ್ಗದ ಸ್ವರದಲ್ಲಿ ಕೇಳಿ ಕೊಂಡಳು.

" ನಾನೇನು ಮಾಡಬೇಕು ನೀವೆಲ್ಲ ಸುಖವಾಗಿರಬೇಕಾದ್ರೆ. ಹೇಳಿಬಿಡಿ."

" ಸೋಮಣ್ಣ ಎಲ್ಲಿದಾನೆ ? ಯಾತಕ್ಕಲ್ಲಿದ್ದಾನೆ ? ಎಲ್ಲಾನು ತಿಳಿಸ ಬೇಕು."

" ದೇವ್ರಾಣೆಗೂ ನನಗೆ ಗೊತ್ತಿಲ್ಲ."

" ಹಾಗಾದರೆ ನಾವೆಲ್ಲ ಸುಖವಾಗಿರಬೇಕಾದ್ರೆ ಸಾಯಬೇಕು."

" ಯಾರು ? "

" ನಾವೆಲ್ಲ."

" ಬೇಡ."

ನಾಗಮ್ಮ ಅಲ್ಲಿರದೆ ನಿಧಾನವಾಗಿ ಒಳಗೆ ಹೊರಟುಹೋದಳು. ನಂಜಮ್ಮ ಇನ್ನೂ ಗೊಣಗಿಕೊಳ್ಳುತ್ತಿದ್ದಳು. ಆದರೂ ಮನೆಯಲ್ಲಿ ರುದ್ರ ಗಂಭೀರತೆಯಿತ್ತು.

ಈ ಮನೆಯಲ್ಲಿ ಎಲ್ಲರಿಗಿಂತಲೂ ಗಂಭೀರವೆಂದರೆ ನಾಗುವಿನ ಅತ್ತೆ. ಅವರು ಯಾವುದಕ್ಕೂ ಹೆಚ್ಚಿಗೆ ಮಾತನಾಡುತ್ತಿರಲಿಲ್ಲ. ಅವರು ಇಬ್ಬರು ಮಕ್ಕಳನ್ನೂ ಕಳೆದುಕೊಂಡು ಕುರುಡರಾಗಿದ್ದಾರೆ. ಇಬ್ಬರು ಸೊಸೆಯರ ಜಗಳ ಕೇಳಿಕೇಳಿ ಕಿವುಡಿಯಾಗಿದ್ದಾರೆ. ಅವರಾಯಿತು, ಅವರ ಉಗ್ರಾಣ ವಾಯಿತು.

ಹೊರಗಣ್ಣಿಗೆ ನಂಜಮ್ಮನ ನಡವಳಿಕೆ ನ್ಯಾಯವಾಗಿ ತೋರುತ್ತಿತ್ತು. ನಾಗುವಿನದು ಶತಾಪರಾಧ ಎಂದು ಯಾವ ನ್ಯಾಯಾಸ್ಥಾನ ಬೇಕಿದ್ದರೂ ತೀರ್ಪು ಕೊಡುವುದಕ್ಕೆ ಸಿದ್ಧವಾಗಿತ್ತು. ಎದುರು ಮನೆಯ ಮಾರಮ್ಮ ಒಬ್ಬ

ಳಿಗೆ ಮಾತ್ರ ನಾಗು ಇನ್ನೂ ಒಳ್ಳೆಯವಳ ಹಾಗೆ ಕಾಣುತ್ತಿದ್ದಳು. ಇದರಿಂದ ನಂಜಮ್ಮನಿಗೆ ತನ್ನ ಅತ್ತೆಯ ಸಹಾನುಭೂತಿ ದೊರಕಿತ್ತು.

ನಾಗುವಿಗೆ ಒಳಗೆ ಬಂದು ಸಾಕಾಯಿತು. ಸಂಜೆ ಭಾವಿಗೆ ಹೋದಾಗ ಮರಮ್ಮನನ್ನು ಕಂಡಳು. ಮರಮ್ಮ ನಾಗುವನ್ನು ಕಂಡರೆ ಒಂದು ರೀತಿಯ ಹೆದರಿಕೆಯಿಟ್ಟುಗೊಂಡಿದ್ದಳು. ಅದರಿಂದ ಅವಳನ್ನು ಮಾತನಾಡಿಸ ಹೋಗ ಲಿಲ್ಲ. ನಾಗುವೇ "ಮರಕ್ಕ, ನಾಳೀ ಬೆಳಗ್ಗೆ ನನ್ನ ಜೊತೆಗೆ ದ್ಯಾವರಗುಡ್ಡನ ತೋಟಕ್ಕೆ ಬಾಕ್ಕ. ನಿನ್ನ ಜೊತೇಲಿ ಒಂದರಘಳಿಗೆ ಕಾಲ ಕಳೀಬೇಕು ಅನ ಸ್ತದೆ" ಎಂದಳು. ಮರಕ್ಕ ಥಟ್ಟನೆ ಒಪ್ಪಿಕೊಂಡಳು.

ಹಸಿಮೆಣಸಿನಕಾಯಿಯ ನೆವದಿಂದ ಗೆಳತಿಯರಿಬ್ಬರೂ ದ್ಯಾವರ ಗುಡ್ಡನ ತೋಟದಲ್ಲಿ ಸೇರಿದರು. ಆ ಪನ್ನೇರಳೇ ಗಿಡದ ಕೆಳಗೆ ಕುಳಿತಳು. ನಾಗರಾಜುವನ್ನು ನೆನಸಿಕೊಂಡು ಅತ್ತಳು. ಮರಮ್ಮ ಅಳುತ್ತಳುತ್ತ ಸಮಾ ಧಾನ ಹೇಳಿದಳು.

"ಅಕ್ಕಾ, ನಾಗರಾಜು ನೋಡಬೇಕೂ ಅನ್ನಸ್ತದೆ" ಅಂದಳು ನಾಗು.

"ನಾಳೀ ದಿನ ಆ ಸೀಮೆಣ್ಣೆ ಸೆಟ್ಟಿ ಪಲುಕೂರಿಗೆ ಹೋಗ್ತಾನಂತೆ. ಅವನ ಕೈಲಿ ಹೇಳಿಕಳಿಸ್ತೀನಿ" ಎಂದು ಮರಮ್ಮ ಭರವಸೆ ಕೊಟ್ಟಳು. ನಾಗುವಿಗೆ ಇನ್ನು ತಡೆಯಲಾಗಲಿಲ್ಲ. ತನ್ನೆಲ್ಲ ಗುಟ್ಟನ್ನೂ ಮರಮ್ಮನಿಗೆ ಹೇಳಿಬಿಡಬೇಕೆನ್ನಿಸಿತು.

"ನನಗ್ಯಾಕೀ ಕಷ್ಟ ಗೊತ್ತಾ ಮರಕ್ಕ?"

"ನಿನ್ನ ಹಣೇಬರ...."

"ಹಣೇಬರ ಅಲ್ಲ. ಹಾಳು ರೂಪು ಹೊತ್ತು, ಹೆಣ್ಣಾಗಿ ಹುಟ್ಟಿದ ತಪ್ಪು"

"ಸೋಮಪ್ಪನ ವಿಷಯತಾನೆ?"

"ನಿಜವಾಗಿ ಆ ವಿಷಯವಲ್ಲ–ಅದರ ಬೆನ್ನಹಿಂದೆ ಇನ್ನೊಂದಿದೆ"

"....................."

"ನಮ್ಮೂರಿನಲ್ಲಿ ನನಗೋಸ್ಕರ ಹುಚ್ಚು ಹಿಡಿಸಿಕೊಂಡಿರುವವನೊಬ್ಬ ನಿದಾನೆ. ಅವನು ವಿಧಿಯ ಹಾಗೆ ನನ್ನ ಕಾಡಿಸ್ತಾ ಇದಾನೆ"

"[illegible] ಹೇಳಿಬಿಡು ನಾಗು"

"ಸೋಮಪ್ಪನ ಮದುವೆಗೆ, ಪಲುಕೂರಿನಿಂದ ಉದ್ದಕ್ಕೆ ಎಣ್ಣೆಗೆಂಪಿನ ಒಬ್ಬ ಹುಚ್ಚ ಬಂದಿದ್ದ—ಚಂದಣ್ಣ ಅಂತ—ನಿನಗೆ ಗ್ಯಪ್ತಿ ಇದೆಯೆ?"

"ಉಹ್ಞು........ಸರಿಯಾಗಿ ನೋಡ್ಲಿಲ್ಲ"

"ಒಳ್ಳೇದಾಯಿತು. ಅವನೇ ನನ್ನ ಹಾಳುಮಾಡಿದ. ಅವನೇ ಇಲ್ಲದ ಸುದ್ದಿ ಕಟ್ಟಿ ಸೆಜ್ಜೆಯಲ್ಲಿ ಹರಡಿದ. ಆದರೂ ನಾನು ಪಲುಕೂರಿಗೆ ಹೋಗಲಿಲ್ಲ. ನಾನು ನಮ್ಮೂರಿಗೆ ಹೋದರೆ ನನ್ನ ಮಾನ ಉಳಿಯೋಹಾಗಿಲ್ಲ. ಹಾಗಂತ ಇಲ್ಲೇ ಉಳಿದೆ. ಇದೂ ನರಕವಾಯಿತು. ಸೋಮಪ್ಪ ನನಗೆ ಮಾಡಿದ್ದು ಉಪಕಾರ ಅಲ್ಲ. ಅಪಕಾರ"

"ಹಾಳು ಗಂಡಸರೇ!...."

"ತಮಗಿಷ್ಟ ಬಂದ ಗಂಡಸನ್ನ ಮದುವೇ ಆಗದೇ ಇದ್ದ ಕಿಚ್ಚಿಗೆ ಒಬ್ಬ ಹುಡುಗಿ ಅವನ್ನ ಹಾಳುಮಾಡಕ್ಕಾಯ್ತದಾ ಮರಕ್ಕ?"

"ಒಟ್ಟು ಗಂಡಸರಿಗೇ ಕೇಳಬೇಕಾದ ಸವಾಲು ಅದು"

"ಹೇಳಿಬಿಡಕ್ಕ, ನಿಜವಾಗಿ ನಾನು ಉಳಿದಿರಬೇಕೆ?"

"ಇಲ್ಲ........ನಿನಗೆ ಮಾನವೇ ಹೆಚ್ಚು"

ನಾಗು, ಮರಮ್ಮನನ್ನು ತಬ್ಬಿಕೊಂಡಳು. "ಅಕ್ಕ ನೀನೇ ನನಗೆ ಪ್ರಪಂಚ. ನನ್ನ ಮನಸ್ಸ ತಿಳಿದಿರೋಳು ನೀನೊಬ್ಬಾದ್ರೂ ಇದೀಯಲ್ಲ. ನನ್ನ ನಾಗರಾಜು ನೋಡಿದ ತಕ್ಷಣ ನಾನಿರೊಲ್ಲ. ಆಗ ಅಕ್ಕ, ಮಾವಯ್ಯನ್ನ ಬೇಡಿಕೊಂಡು, ನನ್ನ ಇದೇ ಜಾಗದಲ್ಲಿ ಮಣ್ಣು ಮಾಡ್ಸು ಮರಕ್ಕ"

"ಇರ್ಲಿ ತಾಳು ಅವನೇ ಸತ್ರೂ ಸಾಯಬಹುದು. ಮನೆಯವರಿಗೇ ಬುದ್ಧಿಬರಬಹುದು. ಸೋಮಪ್ಪ ಬಂದರೂ ಬರಬಹುದು."

"ಹ್ಞು! ಮೂರೂ 'ಬಹುದು' ಗಳು."

ಅವರಿಬ್ಬರೂ ಮನೆಯ ಕಡೆ ನಡೆದರು. ನಾಗು ಮನೆ ಹೊಕ್ಕಾಗ ಮನೆಯಲ್ಲೇನೋ ಮಾತಾಡಿ ಮುಗಿದಂತಿತ್ತು. ನಾಗು ಒಂದನ್ನೂ ಗಮನಿಸದೆ ತನ್ನ ಪಾಡಿಗೆ ತಾನು, ಮಡಿಲಲ್ಲಿದ್ದ ಹಸೀ ಮೆಣಸಿನಕಾಯಿಯನ್ನು ಬುಟ್ಟಿಗೆ ಸುರಿದು ಕಾಲುತೊಳೆಯಲು ಹೊರಟುಹೋದಳು. ನಾಗುವಿನತ್ತೆ ನಾಗುವನ್ನು ಕಂಡು ಕೇಳಿದರು.

"ಇಷ್ಟುಹೊತ್ತಿಗೆ ಇಷ್ಟೇ ಮೆಣಸಿನಕಾಯೀ?"

ನಂಜಮ್ಮ ದನಿಗೂಡಿಸಿದಳು: "ಮರಮ್ಮನ ಜೊತೇಲಿ ಹೋದಮೇಲಿ ಮನೆವಾರ್ತೆ ಮುಗೀಬೇಡವೇ?"

"ನಂಜಮ್ಮ—ನನ್ನ ಮಾತು ನಿನಗೆ ಬೇಡ" ನಾಗು ಗದರಿದಳು.

"ಯಾಕೆ ಬೇಡ—ನನ್ನ ಗಂಡ ನಿನಗೆ ಬೇಕು—ನಿನ್ನ ಮಾತು ನನಗೆ ಬೇಡವೊ?"

ನಾಗು, ಹತ್ತಿರಿದ್ದ ನಂಜಮ್ಮನ ಕಪಾಲಕ್ಕೊಂದು ಕೊಟ್ಟಳು. ಹಳ್ಳಿಯ ಹೆಂಗಸರ ರಾದ್ಧಾಂತ ಪ್ರಾರಂಭವಾಯಿತು. ನಾಗು ಹುಚ್ಚಿಯಂತೆ ಹೋರಾಡಿದಳು. ಜಗಳದ ಮಧ್ಯೆ ಸಿಕ್ಕಿ ಅವರತ್ತಿ ಹಣ್ಣಾದರು. ಶಿವಪ್ಪನವರು ಮನೆಗೆ ಬರುವ ವರೆಗೆ ಮೂವರು ಹೆಂಗಸರೂ ಮೂರು ಕೋಣೆಗಳಲ್ಲಿ ಕುಳಿತಿದ್ದರು. ನಾಗುವಿನ ಕೋಣೆಗೆ ಮಾತ್ರ ಹೊರಗಿನಿಂದ ಚಿಲಕ ಹಾಕಿತ್ತು.

ಸೋಮಣ್ಣನೂ ಮನೆಗೆ ಬರಬೇಕು. ಸಂಸಾರವೂ ತಣ್ಣಗಿರಬೇಕು. ಇವೆರಡು ಆಗಬೇಕಾದರೆ ನಾಗು ಪಲುಕೂರಿಗೆ ಹೋಗಬೇಕು. ಈ ಯೋಚನೆ ಯಾರಿಗೆ ಬೇಕಾದರೂ ಹೊಳೆಯುತ್ತದೆ. ಇದೇ ಯೋಚನೆ ಶಿವಪ್ಪನವರಿಗೂ ಹೊಳೆಯಿತು. ಅವರು ತಕ್ಷಣ ಮುದ್ದಪ್ಪನವರಿಗೆ ಹೇಳಿಕಳುಹಿಸಿದರು. ಶಿವಪ್ಪನವರ ಮಾತಿಗೆ ಬೆಲೆ ಕೊಟ್ಟು ಮುದ್ದಪ್ಪನವರು ಸೆಜ್ಜೆಗೆ ಬರಬೇಕಾಯಿತು.

ಮುದ್ದಪ್ಪನವರು ಬರುವಾಗ ನಾಗರಾಜುವನ್ನು ಕರೆದುಕೊಂಡು ಬಂದಿದ್ದುದೇ ನಾಗುವಿನ ಪುಣ್ಯ. ನಾಗರಾಜುವನ್ನು ನಾಗುವಿನ ಕತ್ತಲೆ ಕೋಣೆಗೆ ಕಳುಹಿಸಿದರು. ನಾಗು ಅವನನ್ನು ಬಾಚಿ ತಬ್ಬಿಕೊಂಡು ಮುತ್ತಿಟ್ಟಳು.

ಮುದ್ದಪ್ಪನವರು ನಾಗುವನ್ನು ಊರಿಗೆ ಕರೆದರು. ನಾಗು ಅಳುತ್ತಾ ಒಪ್ಪಿಕೊಂಡಳು. ಎಲ್ಲರಿಗೂ ಒಂದೊಂದು ತರಹದ ಸಮಾಧಾನವಾಯಿತು. ಮರಮ್ಮನಿಗೆ ಮಾತ್ರ ಆಶ್ಚರ್ಯ. ನಾಗು ಪಲುಕೂರಿಗೆ ಹೋಗುವುದಕ್ಕಿಂತ ನಾಗುವಿನ ಸಾವು ಸಂಭವವೆಂಬ ಅವಳ ತೀರ್ಮಾನ ಮುರಿದುಹೋಯಿತು. ಇನ್ನೆರಡುದಿನಗಳಲ್ಲಿ ನಾಗು ಹೊರಡುವುದರಲ್ಲಿದ್ದಳು. ಮರಮ್ಮನಿಗೆ ಅವಳನ್ನೊಮ್ಮೆ ನೋಡಬೇಕೆನ್ನಿಸಿತು.

ಅವಳು ಮನೆ ಬಿಟ್ಟು ಹೊರಗೆ ಬಂದಾಗ ಶಿವಪ್ಪನವರ ಜಗಲಿಯ ಮೇಲೆ ಕುಳಿತಿದ್ದವನನ್ನು ಕಂಡು ಅವಳಿಗೆ ಮತ್ತಷ್ಟು ಗಾಬರಿಯಾಯಿತು.

ಆ ಎತ್ತರದ, ಎಣ್ಣೆಗೆಂಪಿನ ಹುಚ್ಚ–ಚಂದಣ್ಣ ಭಯಂಕರವಾಗಿ ಕುಳಿತಿದ್ದನು. ಮರಮ್ಮ ಸದ್ದಿಲ್ಲದೇ ಮನೆಯ ಒಳಕ್ಕೆ ಹೋದಳು. ನಾಗುವನ್ನು ಕಂಡಳು.

"ನಾನು ತೌರಿಂಗೆ ಹೋಗ್ತೀನಕ್ಕ" ನಾಗು ಎಂದಳು. ಮರಮ್ಮ ಮಾತ ನಾಡಲಿಲ್ಲ. ಬದಲಾಗಿ ನಾಗರಾಜುವನ್ನು ಕರೆದು ಬಳಿಯಲ್ಲಿ ಕುಳ್ಳಿರಿಸಿ ಕೊಂಡಳು. ಪುನಃ ನಾಗು ನಗುತ್ತಾ "ನಾ ಹೇಳಿದ ಹುಚ್ಚನ್ನ ನೋಡಿದೆಯಾ ? ನನ್ನ ತೌರಿಂಗೆ ಕಳಿಸೋಕ್ಕೆ ಇವತ್ತು ಬಂದ" ಎಂದಳು. ಮರಮ್ಮನಿಗೆ ನಾಗು ವಿನ ಮಾತು, ವರ್ತನೆ ಒಂದೂ ಅರ್ಥವಾಗಲಿಲ್ಲ. "ಸದ್ಯ, ನಾಗರಾಜುವನ್ನು ಕಂಡೆ" ಎಂದಳು ನಾಗು.

ಮರಮ್ಮನಿಗೆ ಅಳು ತಡೆಯಲಾಗಲಿಲ್ಲ. ಅವಳು ನೇರ ಎದ್ದು ಹೊರಗೆ ಬಂದುಬಿಟ್ಟಿದ್ದಳು.

ಮಾರನೇ ದಿನವೇ ಮುದ್ದಪ್ಪನವರು ಮಗಳನ್ನು ಕರೆದುಕೊಂಡು ಹೊರಟರು. ಆದರೆ ತವರ್ಮ್ಮರಿಗಲ್ಲ–ಆ ಪನ್ನೇರಳೇ ಗಿಡದ ಕೆಳಕ್ಕೆ. ಎಲ್ಲಿ ದ್ದನೋ ಏನೋ ಸೋಮಣ್ಣ ಓಡಿಬಂದು, ಸತ್ತ ತನ್ನ ಅತ್ತಿಗೆಯ ಕಾಲಿಗೆ ಹುಚ್ಚನಂತೆ ಬಿದ್ದನು.

ಮನೆಯಲ್ಲೊಬ್ಬರು ಸತ್ತರೆ ಅಳದವರಾರು. ನಾಗು ಎಷ್ಟೇ ಕೆಟ್ಟವ ಳಾಗಿರಲಿ, ಸತ್ತಮೇಲೆ, ಅವಳ ಹೆಣದ ಮೇಲೆ ಸಂಜಮ್ಮನಿಗೂ ದ್ವೇಷವಿರಲಿಲ್ಲ. ಮುದ್ದಪ್ಪನವರ ಹೆಂಗರುಳು ಸ್ವಲ್ಪವೂ ಉಳಿಯದ ಹಾಗೆ ಕರಗಿ ಕಣ್ಣಲ್ಲಿ ಬಂತು.

ನಾಗಮ್ಮ ತೌರಿಗೆ ಹೊರಟುಹೋದಳು.

೧೭

ಈ ಹುಣ್ಣಿಮೆಗೆ, ನಾಗು ಸತ್ತು ಸರಿಯಾಗಿ ಹದಿನಾಲ್ಕು ದಿನ. ನಾಗು ವಿಗೆ ಶಾಂತಿ ಸಿಕ್ಕಿತು. ಬೆಳುದಿಂಗಳು ಬಯಲನ್ನೆಲ್ಲಾ ನೆನೆಸಿಬಿಟ್ಟಿತ್ತು. ನಾಗುವಿನಂತಹ ಕೋಮಲೆಗೆ ಬೆಳುದಿಂಗಳೂ ಹೆಚ್ಚಾಗಬಾರದೆಂದು ರಾಜು ವಿನ ಪನ್ನೇರಳೇಮರ ಅವಳ ಸಮಾಧಿಯ ಮೇಲೆ ನೆರಳನ್ನು ಹರಡಿತ್ತು. ಅರ್ಧರಾತ್ರಿಯಾದುದರಿಂದ ಗೂಬೆಗಳು ನಿರ್ಭಯವಾಗಿ ಆ ಹೊಲಗಳ ತುಂಬಾ ಮರಗಳಿಂದ ಕೂಗಿಕೊಳ್ಳುತ್ತಿದ್ದುವು. ನಾಗರಾಜುವಿನ ಚಿಂತೆಯಿಲ್ಲ.

ಚಂದಣ್ಣನ ಭಯವಿಲ್ಲ. ಮರಮ್ಮನ ಪ್ರೀತಿಯೂ ಇಲ್ಲ. ಸಜ್ಜೆಯ ಅಪವಾದವೂ ಇಲ್ಲ. ನಂಜಮ್ಮನ ಕಿರುಕುಳವೂ ಇಲ್ಲ. ಇದಿಷ್ಟೂ ನಾಗುವಿಗೆ ಸಾವಿನಿಂದಾದ ಉಪಯೋಗಗಳು.

ಆದರೆ ಚಂದಣ್ಣನ ಸೇಡು ತೀರಲಿಲ್ಲ. ಅವನಿಗೆ ತೃಪ್ತಿಯಾಗಲಿಲ್ಲ. ನಾಗು ತನ್ನ ಶಾಂತಿಯುತವಾದ ತನ್ನ ನಾಲ್ಕನೆಯ ಮನೆಯನ್ನು ಸೇರಿಕೊಂಡರೂ ಚಂದಣ್ಣನ ಭ್ರಾಂತಿ ಬಿಡಲಿಲ್ಲ. ಅದಕ್ಕೇ ಇಂದು ಅವನು ಅರ್ಧ ರಾತ್ರಿಯಲ್ಲೂ ಇಲ್ಲಿಗೆ ಬಂದಿರುವುದು. ನಿಶ್ಶಬ್ದವಾಗಿ ಬಂದು ನಾಗುವಿನ ಗೋರಿಯ ಕಾಲುಬಳಿ ನಿಂತನು, ನಕ್ಕನು, ಅತ್ತನು, ಮಣ್ಣೆರಚಿದನು, ಗೋರಿಯನ್ನೇ ಗುದ್ದಿದನು, ಕೋಪದಿಂದ ಮಣ್ಣು ಮುಕ್ಕಿದನು. ಆದರೇನು, ನಾಗು ಅವನ ಕೈತಪ್ಪಿಸಿ ಓಡಿಹೋಗಿ ನೆಲದೊಳಡಗಿದ್ದಳು.

ಸತ್ತವನು ಚಂದಣ್ಣ ; ಬದುಕಿದವಳು ನಾಗು.